

# ಕಾಮನ ಬಿಲ್ಲಿನ ಉಜ್ವಲ ವರ್ಣಗಳನ್ನು ಸೆರೆಹಿಡಿದು

## ನಿಮ್ಮ ಮನೆಯೊಳಗಿರಿಸಿರಿ - ಇಓಮೈಟ್‌ನಿಂದ

ಪ್ರಕೃತಿಯು ಅತ್ಯಂತ ಸುಂದರ ರೂಪದಲ್ಲಿರುವಾಗ ಅದನ್ನು ಮೀರಿಸಬೇಕಾದರೆ ಅತ್ಯಂತ ಶ್ರೇಷ್ಠವಾದ ಪ್ರಾವೀಣ್ಯತೆ ಮತ್ತು ಅನುಭವಗಳ ಸಂಯೋಜನೆ ಅಗತ್ಯ. ಅಂತಹ ಪ್ರಾವೀಣ್ಯತೆ ಮತ್ತು ಅನುಭವಗಳು ಕೇವಲ ಇಓಮೈಟ್‌ರವರಲ್ಲಿ ಮಾತ್ರ ಇವೆ ಎಂದು ಸಿದ್ಧವಾಗಿದೆ.

ಕೇವಲ ಇಓಮೈಟ್ ಪೇಯಿಂಟ್ ಮನೋಹರವಾದ ಪ್ರಕೃತಿಯ ವರ್ಣ, ಛಾಯೆ ಮತ್ತು ಸಂಯೋಜನೆಗಳನ್ನು ನಿಪುಣವಾಗಿ ನಿರ್ಮಿಸುತ್ತಾರೆ.

ಅವನ್ನು ಉಪಯೋಗಿಸಿದ ಯಾರೊಬ್ಬರನ್ನೂ ಕೇಳಿರಿ. ಆ ಮೇಲೆ ಇಓಮೈಟ್‌ನ್ನು ಬಿಟ್ಟು ಇನ್ನ್ಯಾವುದನ್ನೂ ನೀವು ಕೇಳಲಿಕ್ಕಿಲ್ಲ.

bp
ಓರ್ವ ಸದಸ್ಯರು

GARWARE
गरवारे

ಬ್ಲಂಡೆಲ್ -
ಪರ್ಮೋಗ್ಲೇಝ್ ಗ್ರೂಪ್‌ನ

## ಬ್ಲಂಡೆಲ್ ಇಓಮೈಟ್ ಪೇಯಿಂಟ್ಸ್ ಲಿ.

ರಿಜಿಸ್ಟರ್ಡ್ ಆಫೀಸು:
ರುಸ್ತುಮ್ ಬಿಲ್ಡಿಂಗ್, ವೀರ ನಾರಿಮನ್ ರೋಡ್, ಬೊಂಬಾಯಿ 400 001.
ಶಾಖೆಗಳು: ಥಾನಾ, ಅಹಮ್ಮದಾಬಾದ್, ದಿಲ್ಲಿ, ಕಾನ್ಪುರ, ಚಂಡೀಗರ್, ಕಲ್ಕತ್ತಾ, ಬೆಂಗಳೂರು, ಮದರಾಸು, ಕೊಚ್ಚಿನ್, ಮತ್ತು ಹೈದರಾಬಾದು.

## ಇಓಮೈಟ್ ಪೇಯಿಂಟ್ಸ್




ಉತ್ಕೃಷ್ಟತೆ ಮತ್ತು ಸೇವೆಯ
ಒಂದು ವರ್ಣರಂಜಿತ ಸಂಯೋಜನೆ

VENART/GAA/KAN.

# ಹಾರ್ಲಿಕ್ಸ್ ಆರೋಗ್ಯದಾಯಕ ಅಂದು, ಇಂದು, ಎಂದೆಂದೂ.

## ಅನ್ನುತ್ತಾಳೆ ಸುಚಿತ್ರ.

**ನಿಮ್ಮ ಕುಟುಂಬಕ್ಕೆ ಅತ್ಯುತ್ತಮ ಭವಿಷ್ಯ ನಿರ್ಮಿಸಲು ಆರೋಗ್ಯದಾಯಕ ಹಾರ್ಲಿಕ್ಸ್ ಅನ್ನು ಬಳಸಿರಿ.**

ಆರೋಗ್ಯವೆಂದರೆ ಯಶಸ್ಸು ಮತ್ತು ಸಂತೋಷದ ಗುಟ್ಟು. ರೋಗವನ್ನು ಹೊರದೂಡಿ, ಭದ್ರತೆಯನ್ನು ನಿರ್ಮಿಸುವುದೇ ಆರೋಗ್ಯ.

ಸುಚಿತ್ರ ಹಾರ್ಲಿಕ್ಸ್ ಅನ್ನು ತನ್ನ ಕುಟುಂಬ ಜೀವನದ ಒಂದು ಸಾಧನವನ್ನಾಗಿ ಮಾಡಿಕೊಂಡಿರುವುದಕ್ಕೆ ಇದೇ ಕಾರಣ. ಹಾರ್ಲಿಕ್ಸ್, ಕಾಲದ ಸತ್ವಪರೀಕ್ಷೆಯನ್ನು ಯಶಸ್ವಿಯಾಗಿ ಎದುರಿಸುತ್ತದೆ ಎಂಬುದು ಅವಳ ದೃಢ ನಂಬಿಕೆ.

ಹಾರ್ಲಿಕ್ಸ್...ವಿಶ್ವಾದ್ಯಂತ ಡಾಕ್ಟರ್‌ಗಳು ಶಿಫಾರ್ಸು ಮಾಡುವುದು ಇದೊಂದನ್ನೇ. ಇದು ಅತ್ಯಧಿಕ ಪುಷ್ಟಿ ಕೊಡುವ ಪೇಯ ಸಾಧನ. ಶುದ್ಧ ಮತ್ತು ಸಮೃದ್ಧ ಪೋಷಕಾಂಶಗಳಿಂದ ಮಿಳಿತಗೊಂಡಿರುವ ಹಾರ್ಲಿಕ್ಸ್, ವಿಶಿಷ್ಟ ವಿಧಾನದಲ್ಲಿ ತಯಾರಾಗಿದೆ.

ಸುಚಿತ್ರಳಂತೆ ನೀವೂ ನಿಮ್ಮ ಕುಟುಂಬದ ಎಲ್ಲ ಸದಸ್ಯರಿಗೆ ಪ್ರತಿದಿನ ಹಾರ್ಲಿಕ್ಸ್ ಅನ್ನು ತಪ್ಪದೇ ಕೊಡಿರಿ. ವರ್ಷೇ ವರ್ಷೇ ಅವರು ಅತ್ಯಂತ ಆರೋಗ್ಯವಂತರಾಗಿ ಮತ್ತು ಶಕ್ತಿವಂತರಾಗಿ ಬೆಳೆಯುತ್ತಾ ಹೋಗುವುದನ್ನು ನೀವೇ ನೋಡುವಿರಿ.

"ನೀವು ಹಾರ್ಲಿಕ್ಸ್‌ನಲ್ಲಿ ಸಂಪೂರ್ಣ ನಂಬಿಕೆ ಇಡಬಹುದು.

ನಾನು ಯಾವಾಗಲೂ ಹಾರ್ಲಿಕ್ಸ್ ಅನ್ನೇ ಶಿಫಾರ್ಸು ಮಾಡುವುದು. ಅಸ್ವಸ್ಥರಾದವರಿಗೆ ಒಳ್ಳೆಯ ಪುಷ್ಟಿ ಕೊಡುವುದರಿಂದ ನಾನು ಯಾವಾಗಲೂ ಹಾರ್ಲಿಕ್ಸ್ ಅನ್ನೇ ಬರೆದುಕೊಡುತ್ತೇನೆ. ಕಾರಣ ಬಹಳ ಸರಳ. ಹಾರ್ಲಿಕ್ಸ್ ಪರಿಶುದ್ಧ. ಅದರಲ್ಲಿ ಕಲಬೆರಕೆ ಇಲ್ಲ. ನಿಮ್ಮನ್ನು ಸದಾ ಆರೋಗ್ಯವಂತರನ್ನಾಗಿಡಲು ಅಗತ್ಯವಾದ ಪ್ರೋಟೀನುಗಳು, ಕಾರ್ಬೋಹೈಡ್ರೇಟ್‌ಗಳು ಮತ್ತು ಖನಿಜಾಂಶಗಳ ವಿಶಿಷ್ಟ ಮಿಶ್ರಣ ಹಾರ್ಲಿಕ್ಸ್."








**ಸಂಪೂರ್ಣ ಪೋಷಣೆಯನ್ನು ಪಡೆಯಲು ಇದರಲ್ಲಿ ಆರೋಗ್ಯ ತುಂಬಿದೆ ಹಾರ್ಲಿಕ್ಸ್**

# ಕಸ್ತೂರಿ

ಪ್ರಕಟನೆ :
ಪ್ರತಿ ತಿಂಗಳ ೧ ನೇ ದಿನಾಂಕ



ವ್ಯವಸ್ಥಾಪಕ ಸಂಪಾದಕರು :
ರಂಗನಾಥ ದಿವಾಕರ

ಪ್ರಧಾನ ಸಂಪಾದಕರು :
ಖಾದ್ರಿ ಶಾಮಣ್ಣ



ಸಂಪಾದಕರು :
ದೆ. ಲ. ಕೆರೂರ



ಪ್ರಕಾಶಕರು :
ಕರ್ನಾಟಕ ಪತ್ರಿಕಾ ಪ್ರೈ. ಲಿ.
ಹುಬ್ಬಳ್ಳಿ



ಕಚೇರಿ :
ಕಸ್ತೂರಿ ಕಾರ್ಯಾಲಯ ಹುಬ್ಬಳ್ಳಿ



ಕಲೆ :
ಕೆ. ಬಿ. ಕುಲಕರ್ಣಿ



ಮುದ್ರಣ :
ಸಂಯುಕ್ತ ಕರ್ನಾಟಕ ಪ್ರೆಸ್
ಹುಬ್ಬಳ್ಳಿ



ಮುಖಪುಟ :
ಚಂಚಲೆ
ವಸಂತ ಅವರಾದಿ



ಚಂದಾದರ

| | | |
|---|---|---|
| ೩ ವರ್ಷ | (ಅಂಚೆ ಸೇರಿ) | ರೂ. ೩೫-೦೦ |
| ೨ ವರ್ಷ | " | ರೂ. ೨೫-೦೦ |
| ೧ ವರ್ಷ | " | ರೂ. ೧೪-೦೦ |
| ಅರ್ಧ ವರ್ಷ | " | ರೂ. ೭-೫೦ |

KASTURI May 1976


## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವುದು. ಕಾಗದದ ಒಂದೇ ಮಗ್ಗುಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸವನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖನಗಳಾದರೆ ಅವುಗಳ ಮೂಲ ಲೇಖಕ ಹಾಗೂ ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಮೂಲ ಲೇಖಕರ ಅನುಮತಿ ಪಡೆದ ಲೇಖನಗಳನ್ನು ಕಳಿಸಿದರೆ ಅವುಗಳ ಮೇಲೆ ಬೇಗನೆ ನಿರ್ಣಯಕ್ಕೆ ಬರಲು ಸುಲಭವಾಗುವುದು. ಅಸ್ವೀಕೃತ ಲೇಖನಗಳು ತಿರುಗಿ ಬೇಕಾಗಿದ್ದರೆ ಲೇಖಗಳ ಸಂಗಡವೇ ತಿರುಗಿ ಕಳಿಸಲು ಅವಶ್ಯ ಬೇಕುವಷ್ಟು ಅಂಚೆ ಚೀಟಿಗಳನ್ನೂ ಕಳಿಸಿರಬೇಕು. 'ಇದುವೆ ಜೀವ' ಮೊದಲಾದ ಚುಟುಕುಗಳನ್ನು ತಿರುಗಿ ಕಳಿಸಲು, ಆ ಬಗ್ಗೆ ಪತ್ರವ್ಯವಹಾರ ಮಾಡಲು ಸಾಧ್ಯವಿಲ್ಲ. ಲೇಖನ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವುದು. ಲೇಖಕರು ತಮ್ಮ ಲೇಖನಗಳ ಸ್ವಕಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವುದೊಳಿತು. ಲೇಖನಗಳು ಆಕಸ್ಮಾತ್ತಾಗಿ ಕಳೆದುಹೋದರೆ ಸಂಪಾದಕರು ಹೊಣೆಗಾರರಲ್ಲ.

ಲೇಖನ ಪ್ರಕಟವಾದರೆ, ಕಸ್ತೂರಿಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ ಪ್ರತಿಫಲವನ್ನು ಆದಷ್ಟು ಬೇಗ ಕೊಡುವುದು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ.

---

## ಚಂದಾದಾರರಿಗೆ ಸೂಚನೆ

ಪ್ರತಿ ತಿಂಗಳ ಕಸ್ತೂರಿ ಆಯಾ ತಿಂಗಳ ೧ ನೇ ದಿನಾಂಕದೊಳಗೆ ಪ್ರಕಟವಾಗುವುದು. ಅದು ಚಂದಾದಾರರಿಗೆ ಆಯಾ ತಿಂಗಳ ೫ ನೇ ದಿನಾಂಕದೊಳಗೆ ತಲುಪುವುದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲುಕಟ್ಟೆಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ್ಗೆ ತಮ್ಮ ಚಂದಾ ನಂಬರ್ ಕಾಣಿಸಲು ಮರೆಯಬಾರದು.

# ಈ ಸಂಚಿಕೆಯಲ್ಲಿ



**ಪುಸ್ತಕ ವಿಭಾಗ**







# ರುಚಿ, ವಿಟಮಿನ್‌ಗಳು ಮತ್ತು ಪೋಷಣೆ–

# ಇವುಗಳಿಗಾಗಿ ಅಪ್ಪಟ ಬಿಸ್ಕಿಟ್

ಬ್ರಿಟಾನಿಯಾ

# ಗ್ಲೂಕೋಸ್-ಡಿ



ತುಲನಾತ್ಮಕ ಪರೀಕ್ಷಣಗಳು ಸಿದ್ಧಪಡಿಸಿವೆ: ಗ್ಲೂಕೋಸ್ ಡಿ ಯಲ್ಲಿ ವಿಟಮಿನ್ ಮತ್ತು ಪೋಷಕಾಂಶಗಳು ಅಧಿಕ ಪ್ರಮಾಣದಲ್ಲಿವೆ, ಮತ್ತು ಅದರ ರುಚಿ, ಸಿಹಿ ಹಾಗೂ ಗರಿಮುರಿತನಕ್ಕಾಗಿ ಜನ ಮೆಚ್ಚುತ್ತಾರೆ.




ಆದ್ದರಿಂದಲೇ ಬೇರೆ ಯಾವುದೇ ಗ್ಲೂಕೋಸ್ ಬಿಸ್ಕಿಟ್‌ಗಿಂತ ಅಧಿಕವಾಗಿ ಬ್ರಿಟಾನಿಯಾ ಗ್ಲೂಕೋಸ್ ಡಿ ಜನರನ್ನು ಆಕರ್ಷಿಸುತ್ತದೆ.

ಬ್ರಿಟಾನಿಯಾ ಬ್ರಿಟಾನಿಯಾ ಬಿಸ್ಕಿಟ್ ಬಲು ಶ್ರೇಷ್ಠ

ಹಿಂಟಾಸ್.BBC.GL.10-77 KN

# ಸಹಚಿಂತನ

## ಶಿವರುದ್ರಪ್ಪನವರ ವಿಚಾರಗಳನ್ನು ಕುರಿತು–

ಸಾಮಾನ್ಯವಾಗಿ ಯಾವುದರಲ್ಲೂ ತಲೆ ಹಾಕದ ಸಾಹಿತಿ, ಶಿಕ್ಷಣತಜ್ಞ ಡಾ. ಜಿ. ಎಸ್. ಶಿವರುದ್ರಪ್ಪ ಅವರ ವಿಚಾರ- (ಸಂ)ದರ್ಶನ (ಕಸ್ತೂರಿ ಏಪ್ರಿಲ್ ೭೬) ತುಂಬ ಗಮನಾರ್ಹವಾದದ್ದು. ವೈದಿಕ-ಶೂದ್ರ, ಸಂಸ್ಕೃತ– ಇಂಗ್ಲೀಷ್, ಬರಹಗಾರರ ಒಕ್ಕೂಟ– ಇಂಥವನ್ನು ಕುರಿತ ಪ್ರಶ್ನೆಗಳಿಗೆ ಬಹಳ ಸ್ಪಷ್ಟವಾಗಿ, ದಿಟ್ಟವಾಗಿ ಉತ್ತರಿಸಿದ್ದಾರೆ.

ಜಿ. ಎಸ್. ಎಸ್. ಅವರು ಬರಹಗಾರರ ಒಕ್ಕೂಟದ ಬಗ್ಗೆ ಹೇಳಿರುವ ಮಾತುಗಳು ನಮ್ಮ ಸಾಹಿತ್ಯಕ ಸಂದರ್ಭದಲ್ಲಿ ಅತ್ಯಂತ ಮಹತ್ವಪೂರ್ಣವಾದುವು. ಏಕೆಂದರೆ 'ನವ್ಯ ಮಠ'ದ ಕಟ್ಟುಕಟ್ಟಳೆಯಿಂದ ಪಾರು ಮಾಡಿ, ನಿಜಕ್ಕೂ ನಮ್ಮ ಜನಾಂಗದ ಕಣ್ಣು ತೆರೆಯುವಂತೆ ಮಾಡಿದ್ದು ಈ ಒಕ್ಕೂಟದ ಒಂದು ದೊಡ್ಡ ಸಾಧನೆಯೇ ಸರಿ. ದುರದೃಷ್ಟವಶಾತ್ ಇಂಥ ಸಂಘಟನೆಯನ್ನು "ಜಾತ್ಯಂಧರ ಗುಂಪುಗಾರಿಕೆ" ಎಂದು ಕರೆದ ಕೆಲವರ ಹುಯಿಲನ್ನು ಜಿ. ಎಸ್. ಎಸ್. ಅವರು 'ಕೊಳಕು ಮಂಡಲಗಳ ಪ್ರಯತ್ನ'ವೆಂದು ಕರೆದಿರುವುದು ಉಚಿತವೇ ಆಗಿದೆ.

ಹೀಗೆ ಕೆಲವು ಗಟ್ಟಿ ಪ್ರಶ್ನೆಗಳನ್ನು ಕೇಳಿ ತಕ್ಕ ಉತ್ತರ ಪಡೆದ ಶ್ರೀ ಕಾಳೇಗೌಡ ನಾಗವಾರ ಅವರು ಇಂಡಿಯಾದ ಜೀವಂತ ಸಾಮಾಜಿಕ ಸಮಸ್ಯೆಗಳಾಗಿರುವ ಜಾತಿ, ಮತ, ಮೌಢ್ಯಗಳ ಬಗ್ಗೆ ಹಾಗೂ ಈ ಪಿಡುಗುಗಳನ್ನು ಜಾಣತನದಿಂದ ಆಗಿ ಮುಂದುವರಿಸಿಕೊಂಡು ಹೋಗಲು ಧರ್ಮ, ಸಂಸ್ಕೃತಿ, ಶಿಕ್ಷಣಗಳ ಸೋಗಿನಲ್ಲಿ ಹೋಗುತ್ತಿರುವ ಮಠ–ಪೀಠಗಳ ಬಗ್ಗೆಯೂ ಮತ್ತೊಂದು ಗಟ್ಟಿ ಪ್ರಶ್ನೆ ಕೇಳಿದ್ದರೆ ಚೆನ್ನಾಗಿರುತ್ತಿತ್ತೆನ್ನಿಸುತ್ತದೆ.

ಭದ್ರಾವತಿ -ಬಿ. ರಾಜಣ್ಣ

*

ಡಾ. ಶಿವರುದ್ರಪ್ಪನವರ "ವಿಚಾರಗಳು'' ಎಂಬ ಸಂದರ್ಶನದಲ್ಲಿ ಬಂದ ಜಾತೀಯ ವಿಚಾರಗಳು ನಿರ್ಭರ್ತ್ಸನೀಯವಾದವು. ಯುನಿವರ್ಸಿಟಿಯ ಮುಖ್ಯಸ್ಥರೋರ್ವರಿಂದ ಇಂಥ ಮಾತು ಬರಬಾರದಾಗಿತ್ತು. ಅವರಾಡಿದ ಮಾತಿನಲ್ಲಿ ಚಾರಿತ್ರಿಕ ಸತ್ಯವೂ ಇಲ್ಲ, ವಾಸ್ತವಿಕ ಸತ್ಯವೂ ಇಲ್ಲ. ವೈದಿಕ-ಶೂದ್ರ 'ಪ್ರಜ್ಞೆ' ಶಬ್ದಗಳ ಜನಕರು ಯು. ಆರ್. ಅನಂತಮೂರ್ತಿಯವರು- ಪಾರಿಭಾಷಿಕವಾಗಿ. ಆಗ ಅಡಿಗ ಭಕ್ತಿಯಲ್ಲಿ ಅವರಿಗೆ ತುಸು ಪ್ರಜ್ಞೆ ತಪ್ಪಿತ್ತು. ಅಡಿಗರ ಪ್ರಜ್ಞೆ 'ವೈದಿಕ'ವೆಂದೂ ತಮ್ಮದು ಶೂದ್ರವೆಂದೂ ... ಶಿವರುದ್ರಪ್ಪನವರು ಇದೇ ಅರ್ಥದ ಭಕ್ತಿಪರ ಕವನವನ್ನೂ ರಚಿಸಿದ್ದರು. ಆ ವರೆಗೂ ಅದೇ ವಿಚಾರ ಸರಣಿಗೆ ಸೇರಿದ್ದ ತೇಜಸ್ವಿ ಈ ಹೊಸ ಚರ್ಚೆಯಿಂದ ಕಕ್ಕಾಬಿಕ್ಕಿಯಾಗಿ ಕಳಿತ ಹಣ್ಣಿನಂತೆ ನಂಜುಂಡೇಶ್ವರರ ತೊಡೆಯ ಮೇಲೆ ಬಿದ್ದರು. ಸೋಶಲಿಸ್ಟ್ ಪಾರ್ಟಿಯ ಪಾಕಶಾಲಾ ಕಲಹವು ಸಾವಿರ ವರ್ಷದ ಸಾಂಸ್ಕೃತಿಕ ತಿಕ್ಕಾಟವೆಂದಾಗಿ ಪಂಪು ಹೊಡೆಯಲ್ಪಟ್ಟಿತು. ಇಂಥ ಚರ್ಚೆಯಿಂದ ಯಾವ ಪುರುಷಾರ್ಥವೂ ಸಾಧಿಸುವದಿಲ್ಲ. ನಮ್ಮಲ್ಲಿ ಸುಶಿಕ್ಷಿತರು- ಇನ್ನೂ ತಮ್ಮ ಪಾಳ್ಯಗಾರಿಕೆ ಬಿಡಲೊಲ್ಲರು ಎಂಬುದಕ್ಕೆ ಇದು ನಿದರ್ಶನ. ತಿಳಿಯದೇ ಆದ ತಪ್ಪಿಗಾಗಿ ಅನಂತಮೂರ್ತಿಯವರೂ, ಮನೋದೌರ್ಬಲ್ಯಕ್ಕೆ ಆಹುತಿಯಾದ ಶಿವರುದ್ರಪ್ಪನವರೂ ಪ್ರಾಯಶ್ಚಿತ್ತವಾಗಿ ಒಂದು ದಿನ ನಿರಾಹಾರ, ಮೂರು ದಿನ ಮೌನ ಮಾಡಬೇಕೆಂದು ಮಹಾತ್ಮಾ ಗಾಂಧಿ ಹೆಸರಿನಿಂದ ಕೇಳಿಕೊಳ್ಳುತ್ತೇನೆ. ಯಾವ ಜಾತಿಯಲ್ಲೂ ಹೊಟ್ಟೆ ಕಾಣದ ದುರ್ಬಲರಿದ್ದಾರೆ. ಅವರ ಸೇವೆ ಮಾಡಬೇಕೇ ಹೊರತು ಸಿರಿವಂತರ ಗುಂಪುಗಾರಿಕೆ ಮಾಡಿ ರಾಜಕೀಯ ಆಕಾಂಕ್ಷೆ ಈಡೇರಿಸುವ ದಿನಗಳು ಹೋದವೆಂಬುದನ್ನು ನೆನೆಯಬೇಕು. ಈ ಮಾತನ್ನು ನಾನು ತಿಳಿಯದೆ ಉಚ್ಚರಿಸುತ್ತಿಲ್ಲ. ನಡುವೆ ಎದ್ದ ಶೂದ್ರ ಚಳುವಳಿಯ ಮುಖಂಡರೊಡನಾದ ಚರ್ಚೆಯ ಆಧಾರದ ಮೇಲೆ ಇದನ್ನು ಹೇಳುತ್ತಿದ್ದೇನೆ. ಭೋಳೇ ಸ್ವಭಾವದ ಶಿವರುದ್ರಪ್ಪನವರಿಗೆ ಇದು ತಿಳಿದಿರಲಿಕ್ಕಿಲ್ಲ ...ಷ್ಟೇ. ಭಾರತದಲ್ಲಿ 'ಬ್ರಾಹ್ಮಣ' ಎಂಬ ಒಂದೇ ಒಂದು ಜಾತಿ ಇದೆಯೇ? ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಒಂದೊಂದು ಜಾತಿಗಳಿವೆಯೇ? ಇವು ವರ್ಗಗಳು. ಜಾತಿಗಳು ಅಸಂಖ್ಯ. ಎಲ್ಲ ಸವರ್ಣೀಯರು ಅನ್ಯಾಯ ಮಾಡಿದ್ದು ಹರಿಜನರಿಗೆ.

ಆ ಋಣವನ್ನು ತೀರಿಸುವ ಒಂದು ವಿಚಾರ ಬಿಟ್ಟರೆ ಉಳಿದ ಎಲ್ಲ ಜಾತೀಯ ಮಾತು ಪ್ರತಿಗಾಮಿ. ಮೂರು ವರ್ಷದ ಹಿಂದೆ ಒಕ್ಕೂಟದ ಮಲರೋಗ ಯಾವ ಮಟ್ಟಕ್ಕೇರಿತ್ತೆಂದರೆ, ಓರ್ವ ಮುಖಂಡರು ನನಗೆ ಹೇಳಿದ ಮಾತಿದು. "ಬಸವಣ್ಣನವರು ಸೋಶಲಿಸ್ಟ್ ನಾಸ್ತಿಕರು. ಕೂಡಲ ಸಂಗಮನಲ್ಲಿ ಅವರಿಗೆ ನಂಬಿಗೆ ಇರಲಿಲ್ಲ. ಕೂಡಲ ಸಂಗಮ ಬ್ರಾಹ್ಮಣರ ದೇವರು. ಬಸವಣ್ಣ ಹಾಗೆಯೇ ಹರಟಿದ ಮಾತುಗಳ ಬುಡಕ್ಕೆ ಕೂಡಲ ಸಂಗಮದೇವಾ ಶಬ್ದ ಕೂಡಿಸಿದವರು ಬ್ರಾಹ್ಮಣರು." ಇತ್ಯಾದಿ. ಜಾತೀಯತೆಯ ವೈರಸ್ ಸೇರಿದರೆ ವಿದ್ವಾಂಸರ ವಿದ್ವತ್ತೆ ಕೂಡ ಹೇಗೆ ಬೇನೆ ಬೀಳುತ್ತದೆ- ಎಂಬುದಕ್ಕೆ ಇನ್ನಾವ ಸಾಕ್ಷಿ ಬೇಕು?

ಧಾರವಾಡ -ಶಂಕರ ಮೊಕಾಶಿ-ಪುಣೇಕರ

## ಶುಭ ಶುಕ್ರವಾರ

ಶ್ರೀ ಟಿ. ಎಸ್. ಸಾವನಗೌಡರು ಏಪ್ರಿಲ್ ತಿಂಗಳ ಕಸ್ತೂರಿಯಲ್ಲಿ ಬರೆದ 'ಶುಭ ಶುಕ್ರವಾರ' ಲೇಖನ ಚೆನ್ನಾಗಿತ್ತು. ಹೆಚ್ಚಿನವರಿಗೆ "ಗುಡ್ ಫ್ರೈಡೇ''–

ಸರ್ಕಾರಿ ರಜಾ ದಿನ, ಕ್ರೈಸ್ತರಿಗೆ ಪವಿತ್ರ ದಿನ ಎಂದಷ್ಟೇ ಗೊತ್ತಿಲ್ಲದೆ ಈ ದಿನದ ಹಿನ್ನೆಲೆ, ಅದನ್ನು ಆಚರಿಸುವ ಮಹತ್ವದ ಅರಿವು ಇಲ್ಲವೇ ಇಲ್ಲ ಈ ಲೇಖನದಿಂದ ಯೇಸು ಕ್ರಿಸ್ತನು ಶಿಲುಬೆಯೇರಿದ ಘಟನೆಯ ಹಿನ್ನೆಲೆಯು ತಿಳಿಯಿತು. ಶುಭ ಶುಕ್ರವಾರದ ರಹಸ್ಯವನ್ನು ರಸಮಯವಾಗಿ ಮೂಡಿಸಿದ ಲೇಖಕರಿಗೆ ವಂದನೆಗಳು, ಪ್ರಕಟಿಸಿದ ಕಸ್ತೂರಿ ಸಂಪಾದಕರಿಗೆ ಕೃತಜ್ಞತೆಗಳು.

ಮೈಸೂರು -ಕೃಷ್ಣವೇಣಿ

*

ಟಿ ಎಸ್. ಸಾವನಗೌಡರ 'ಶುಭ ಶುಕ್ರವಾರ' ಲೇಖನ ಓದಿ ಈ ಪ್ರತಿಕ್ರಿಯೆ ವ್ಯಕ್ತಪಡಿಸಬೇಕಾಯಿತು. ವೈಚಾರಿಕತೆ ಇಲ್ಲದ ಇಂಥ ಲೇಖನಗಳನ್ನು ಪ್ರಕಟಿಸುವುದಕ್ಕಿಂತ ಧರ್ಮದ ತಿರುಳಿನ ಮೇಲೆ ಹೊಸ ಬೆಳಕು ಬೀರುವ ಲೇಖನಗಳನ್ನು ಪ್ರಕಟಿಸುವ ಸಾಹಸವನ್ನು 'ಕಸ್ತೂರಿ' ಕೈಕೊಳ್ಳಲಿ.

ಕ್ರಿಸ್ತ ಮಾಡಿದ ಪವಾಡಗಳನ್ನು ಅವನ ಅನುಯಾಯಿಗಳು ಶ್ರದ್ಧೆಯಿಂದ ಆದರಿಸುವುದೂ ಅವುಗಳನ್ನೇ ಕ್ರಿಸ್ತನ ಹಿರಿಮೆಯನ್ನು ಸಾರಲು ಬಳಸುವುದೂ ತೀರ ಸಹಜ. ಆದರೆ ಒಂದು ಧರ್ಮವನ್ನು ವಿಶ್ವಧರ್ಮದ ಮಟ್ಟದಲ್ಲಿ ಅಳೆಯುವಾಗ ಈ ಪವಾಡಗಳು ಏನೇನೂ ಸಹಕಾರಿಯಾಗಲಾರವು ಎಂಬುದು ಪಾಪ ಸಾವನಗೌಡರಿಗೆ ತಿಳಿದಂತಿಲ್ಲ. ಅದಕ್ಕೇ ಬೈಬಲ್ಲಿನ ಅನುವಾದವನ್ನು ಕೊಡುವುದರಲ್ಲಿಯೇ ಅವರು ತೃಪ್ತರಾಗುತ್ತಾರೆ. "....ನೀವು ಸ್ವರ್ಗದ ಬಾಗಿಲನ್ನೇ ಮುಚ್ಚುವ ಜನ; ನೀವು ಕುರುಡು ನಾಯಕರು ಕಪಟಿಗಳು ಪಾಪಿಗಳು" ಎಂದು ಕ್ರೈಸ್ತ ಯಾರನ್ನಾದರೂ ಎಂದಾದರೂ ಜರಿದನೆ? ಪ್ರತಿ ಮಾನವನೂ ದೇವರ ಪುತ್ರ ಎನ್ನುವ ಆತನ ಬಾಯಲ್ಲಿ ಇಂಥ ಕಟುನುಡಿಗಳು ಬಂದಾವೇ ಎನ್ನುವುದನ್ನು ಗೌಡ್ರು ವಿಚಾರಿಸುವ ಗೋಜಿಗೇ ಹೋಗುವುದಿಲ್ಲ. "....The example of Jesus's suffering is a factor in the composition of my undying faith in non-violence...." ಎನ್ನುವ ಗಾಂಧೀಜಿಯವರ ನುಡಿಗಳನ್ನು ಉದ್ಧರಿಸಿದ್ದಂತೂ ತುಂಬಾ ಮೋಜು ಎನಿಸುತ್ತದೆ. ಕ್ರಿಸ್ತನು ತಾನೆಲ್ಲವನ್ನೂ ಸಹಿಸಿಯೂ ಅನ್ಯರಿಗೆ ಒಳ್ಳೆಯದನ್ನೇ ದೇವರಲ್ಲಿ ಬೇಡಿದ ಎನ್ನುವುದನ್ನು ಕುರಿತು ಗಾಂಧೀಜಿ ಬರೆಯುತ್ತಾ ಕ್ರಿಸ್ತನನ್ನು ಆದರಿಸುತ್ತಾರೆಯೇ ಹೊರತು ಅವನು ಮಾಡಿದ ಪವಾಡಗಳ ಮಹಿಮೆಯಿಂದಲ್ಲ ಎನ್ನುವುದನ್ನು ಅವನ ಪರಮ ಅನುಯಾಯಿಗಳೆಂದು ಹೇಳಿಕೊಳ್ಳುವವರು ಎಷ್ಟು ಬೇಗ ಅರಿತರೆ ಅಷ್ಟೂ ಒಳಿತು.

ಇನ್ನು ಮುಂದಾದರೂ 'ಕಸ್ತೂರಿ' ಇಂಥ ಅಡಗೂಲಜ್ಜಿಯ ಕಥೆಗಳಂತಿರುವ ಲೇಖನಗಳನ್ನು ಪ್ರಕಟಿಸದೆ ಹೊಸ ದೃಷ್ಟಿಯಿರುವ ಲೇಖನಗಳನ್ನು ಪ್ರಕಟಿಸಲೆಂದು 'ಕಸ್ತೂರಿ'ಯ ಅಭಿಮಾನಿಯಾದ ನಾನು ಆಶಿಸುತ್ತೇನೆ.

ಹುಬ್ಬಳ್ಳಿ -ಶಿ. ಮ. ಹಿರೇಮಠ

## ಭಿಕ್ಷುಕರು

ಕವಿ ಶ್ರೀ ವಿ. ಬಿ ತಿಪ್ಪೇಸ್ವಾಮಿ ಯವರ 'ಭಿಕ್ಷುಕರು' (ಏಪ್ರಿಲ್ ೧೯೭೬) ಕವಿತೆಯನ್ನೋದಿ ಸಂತೋಷವಾಯ್ತು. ಕಂಡ ನೋಟವನ್ನು ಜೀರ್ಣಿಸಿಕೊಂಡು ಮಂಥನದಲ್ಲುಂಟಾದ ಅನಿಸಿಕೆಗಳಿಗೆ ಜೀವ ತುಂಬುವ ಅವರ ಈ ಪ್ರಯತ್ನ ನಿಜಕ್ಕೂ ಮೆಚ್ಚಬೇಕಾದ್ದೇ. ಈ ಹಿಂದೆ ಪ್ರಕಟವಾದ (ಜನವರಿ-ಕಸ್ತೂರಿ) ಅವರ 'ಎರೆಹುಳು' ವಿಗಿಂತ ಭಾಷೆಯ ಬಳಕೆ ಇಲ್ಲಿ ಸಮರ್ಥವಾಗಿ ಮೂಡಿಬಂದಿದೆ.

ದಾವಣಗೆರೆ -ಹೆಚ್. ಎಲ್. ಜಗನ್ನಾಥ
—ಬಿ. ತಿಪ್ಪಣ್ಣ ಮರಿಕುಂಟೆ

## ಗೆಂಡೆ ತಿಮ್ಮ

ಶ್ರೀ ಕೃಷ್ಣ ಆಲನಹಳ್ಳಿಯವರ 'ಪರಸಂಗದ ಗೆಂಡೆ ತಿಮ್ಮ' (ಏಪ್ರಿಲ್ 'ಕಸ್ತೂರಿ') ಸತ್ವಯುತ ಕಥಾಚಿತ್ರಣವಾಗಿದೆ. ಕಥೆಯ ಕೇಂದ್ರಬಿಂದುವಾದ 'ಗೆಂಡೆ ತಿಮ್ಮ'ನ ಪಾತ್ರ ಕನ್ನಡ ಕಾದಂಬರಿ ಪ್ರಪಂಚದಲ್ಲಿಯೇ ವಿಶಿಷ್ಟವಾದದ್ದು. ಆದರೆ ಗೆಂಡೆ ತಿಮ್ಮ ತನ್ನ ಹೆಂಡತಿಯನ್ನು ಒಬ್ಬಂಟಿಯಾಗಿ ಶಿವಣ್ಣ ಮಾಸ್ತರರೊಂದಿಗೆ ತವರಿಗೆ ಕಳಿಸುವ ಸನ್ನಿವೇಶ ಅಷ್ಟೊಂದು ಸಹಜವಾಗಿ ತೋರುವದಿಲ್ಲ

ಗದಗ-ಬೆಟಗೇರಿ -ಶಿ. ವಿ. ಬಡಿಗೇರ

## ಶಬರಿ ಮಲೈ ಯಾತ್ರಿಕ

ಏಪ್ರಿಲ್ ೧೯೭೬ ರ 'ಕಸ್ತೂರಿ' ಸಂಚಿಕೆಯ ಮುಖಪುಟದ ಚಿತ್ರವನ್ನು "ಶಬರಿಮಲೈ ಯಾತ್ರಿಕ" ಎಂದು ಒಳಪುಟದಲ್ಲಿ ಕೊಡಲಾಗಿದೆ. ಶಬರಿಮಲೈ ಯಾತ್ರಿಕರು "ದೀಕ್ಷೆ"ಯನ್ನು ತೆಗೆದುಕೊಂಡು ಯಾತ್ರೆಯನ್ನು ಮುಗಿಸಿ ಬಂದ ನಂತರ ಮಾತ್ರ ತಮ್ಮ ಕೇಶವನ್ನು ತೆಗೆಯುತ್ತಾರೆ. ಅಲ್ಲದೆ ಅವರು ಭುಜದ ಮೇಲೆ ನವಿಲುಗರಿಗಳುಳ್ಳ "ಕಾವಡಿ"ಗೆ ಬದಲಾಗಿ ಕಪ್ಪು ಅಥವಾ ನೀಲಿ ಬಟ್ಟೆಗಳಿಂದ ಮಾಡಲ್ಪಟ್ಟ 'ಇರುಮುಡಿ' ಒಂದರಲ್ಲಿ ಅಯ್ಯಪ್ಪನ್ ದೇವರಿಗೆ ಮೀಸಲಾಗಿರಿಸಿದ ವಸ್ತುಗಳನ್ನೂ ಇನ್ನೊಂದರಲ್ಲಿ ಯಾತ್ರೆಯಲ್ಲಿ ತಮಗೆ ಉಪಯೋಗಿಸಲುಬೇಕಾದ ಪದಾರ್ಥಗಳನ್ನೂ ಒಯ್ಯುತ್ತಾರೆ.

ಈ ಮೇಲಿನ ಕಾರಣಗಳಿಂದಾಗಿ ರಕ್ಷಾಪುಟದಲ್ಲಿರುವ ಯಾತ್ರಿಕ "ಪಳನಿ ಸುಬ್ರಹ್ಮಣ್ಯ"ಕ್ಕೆ ಹೋಗುವ ಯಾತ್ರಿಕನೆಂದೂ 'ಶಬರಿಮಲೈ ಯಾತ್ರಿಕ' ನಲ್ಲವೆಂದು ತಿಳಿಸಲು ಬಯಸುತ್ತೇನೆ.

ಜಗದಲ್‌ಪುರ -ಎಚ್. ಶ್ರೀನಿವಾಸರಾವ್

# ಕಸ್ತೂರಿ

ಸಂಚಿಕೆ : ೯ ಕಸ್ತೂರಿ, ಮೇ ೧೯೭೬ ವರ್ಷ : ೨೦

## ದೇವಾಲಯ ಎಲ್ಲಿ?

ಹಾಸನ ಜಿಲ್ಲೆಯಲ್ಲಿರುವ ಬೇಲೂರು ಹೊಯ್ಸಳರ ಕಾಲದ ಶಿಲ್ಪಸೌಂದರ್ಯವನ್ನು ಹೊತ್ತು ಮೆರೆಯುತ್ತಿರುವ ಉಜ್ವಲ ಐತಿಹಾಸಿಕ ಕಲಾ ಕೇಂದ್ರ.

ಹೊಯ್ಸಳ ರಾಜೇಂದ್ರ ವಿಷ್ಣುವರ್ಧನನು ಸರ್ವಧರ್ಮಗಳನ್ನು ಸಮತಾಭಾವದಿಂದ ಕಂಡು ಗೌರವಿಸಿದ ಮಹಾನುಭಾವ. ಅವನು ಜೈನಧರ್ಮವನ್ನು ಅನುಸರಿಸಿದ್ದಲ್ಲದೆ ಶ್ರೀರಾಮನುಜಾಚಾರ್ಯರ ಶಿಷ್ಯನಾಗಿ ಶ್ರೀವೈಷ್ಣವಕ್ಕೂ ಮಣಿದವನು.

ಶ್ರೀರಾಮಾನುಜಾಚಾರ್ಯರು ಮೇಲು ಕೀಳು ಜಾತಿಯವರೆನ್ನದೆ ಸರ್ವರನ್ನೂ ವೈಷ್ಣವ ಧರ್ಮಾನುಯಾಯಿಗಳಾಗಲು ಆಹ್ವಾನಿಸುತ್ತಿದ್ದರು. ಇವರ ವಿಶಾಲ ಮನೋಭಾವಕ್ಕೆ ವಿಷ್ಣುವರ್ಧನನು ಬೆರಗಾದದ್ದು ಮಾತ್ರವಲ್ಲ, ಶಿರಬಾಗಿ ಶಿಷ್ಯನಾದನು.

ಹೊಯ್ಸಳ ಸಾಮ್ರಾಜ್ಯದಲ್ಲಿ ವಿಷ್ಣುವಿನ ಒಂದು ಸುಂದರ ದೇವಾಲಯವನ್ನು ಕಟ್ಟಿಸಬೇಕೆಂಬ ಆಚಾರ್ಯರ ಅಭಿಲಾಷೆಯನ್ನು ಅರ್ಥಮಾಡಿಕೊಂಡು ವಿಷ್ಣುವರ್ಧನನು ಭಕ್ತಿಯಿಂದ ಒಪ್ಪಿಕೊಂಡನು.

“ಆಚಾರ್ಯ, ಯಾವ ಸ್ಥಳ ದೇವಾಲಯ ನಿರ್ಮಾಣಕ್ಕೆ ಪ್ರಶಸ್ತವಾಗಿದೆಯೆಂದು ನೀವು ಸೂಚಿಸುವಿರೋ ಆ ಸ್ಥಳದಲ್ಲಿ ದೇವಾಲಯವನ್ನು ಕಟ್ಟಿಸಲು ಸಿದ್ಧನಿದ್ದೇನೆ,” ಎಂದ.

ಅದಕ್ಕೆ ಆಚಾರ್ಯರು, “ರಾಜ, ಯಾವದನ್ನು ಅಪವಿತ್ರತೆಯ ತವರೆಂದು ಅಲ್ಲಗಳೆದು ಹೊಲೆಗೇರಿಯೆಂದು ಸಾರಿದ್ದೇವೆಯೋ ಆ ಸ್ಥಳದಲ್ಲೇ ವಿಷ್ಣು ದೇವಾಲಯವಾಗಬೇಕು. ಹೊಲೆಗೇರಿಗಿಂತಲೂ ಪವಿತ್ರ ಸ್ಥಳ ಬೇರಾವದೂ ನನಗೆ ಕಾಣುವದಿಲ್ಲ. ಅವರನ್ನು ಹೊಲೆಯರೆಂದು ಕರೆದು ಹೊರಹಾಕಿದವರ ತನುಮನಧನ ಸರ್ವಸ್ವವೂ ಹೊಲೆಯಾಗಿದೆ. ಆದರೆ ಅವರು ತುಚ್ಛಭಾವದಿಂದ ನೋಡುವ

ಹೊಲೆಗೇರಿ ಪವಿತ್ರವಾಗಿದೆ. ಆ ಸ್ಥಳದಲ್ಲಿ ದೇವಾಲಯವು ಮೇಲೇಳಲಿ" ಎಂದು ಹೇಳಿದರು.

ಆಚಾರ್ಯರ ಅಭೀಷ್ಟದಂತೆ ಹೊಲಗೇರಿಯಲ್ಲಿ ದೇವಾಲಯವನ್ನು ಕಟ್ಟಲು ಸಿದ್ಧತೆಗಳು ನಡೆಯುತ್ತಿದ್ದವು. ಈ ವಿಷಯವನ್ನು ತಿಳಿದ ಹೊಲೆಯರು ತಮ್ಮ ಮನೆಮಠಗಳಿಗೆ ಕುತ್ತು ಒದಗಿತಲ್ಲ ಎಂದು ತಮ್ಮ ಮುಖ್ಯಸ್ಥರಿಗೆ ದೂರು ಕೊಟ್ಟರು. ವೇಲ ಮತ್ತು ಚನ್ನ ಎಂಬ ಇಬ್ಬರು ಹೊಲೆಗೇರಿಗೆ ಸೇರಿದ ವ್ಯಕ್ತಿಗಳು ಆಚಾರ್ಯರನ್ನೇ ಕಂಡು ತಮ್ಮ ಜನತೆಗಾಗುವ ತೊಂದರೆಯನ್ನು ತೋಡಿಕೊಂಡರು. ಶಾಂತ ಚಿತ್ತರಾಗಿ ಎಲ್ಲವನ್ನೂ ಕೇಳಿಕೊಂಡ ಆಚಾರ್ಯರು,

"ದೇವಾಲಯ ನಿರ್ಮಾಣಕಾರ್ಯದಿಂದ ನಿಮ್ಮ ಜನತೆಗೆ ಯಾವ ತೊಂದರೆಯೂ ಸಂಭವಿಸುವದಿಲ್ಲ. ಅವರೆಲ್ಲರೂ ತಮ್ಮ ಮನೆ-ಮಠಗಳಲ್ಲಿ ಈಗಿರುವ ರೀತಿಯಲ್ಲಿ ನೆಮ್ಮದಿಯಿಂದಿರಲಿ, ಅವರೆಲ್ಲರೂ ಸದ್ಧರ್ಮಕ್ಕೆ ಶರಣಾಗಿ ದಿವ್ಯಪಥವನ್ನು ಕಂಡುಕೊಳ್ಳಲು ವೈಷ್ಣವರಾಗಲಿ. ನೀವು ಯಾರೂ ಹೊಲೆಯರಲ್ಲ. ನೀವೆಲ್ಲ ಇಂದಿನಿಂದ ಶ್ರೀಹರಿಯ ಪರಮ ಭಕ್ತರು, ಆಚಾರ್ಯರು ಏನೇನೋ ಹೇಳುತ್ತಿರುವರೆಂದು ಹೆದರಬೇಡಿ. ನಿಮ್ಮ ಕೇರಿಯ ಮಧ್ಯೆ ಶ್ರೀಹರಿಯ ದೇವಾಲಯವನ್ನು ಕಟ್ಟಲು ಸಹಕರಿಸಿ," ಎಂದು ಹೇಳಿದರು.

ಶ್ರೀರಾಮಾನುಜರೆದುರು ವೇಲ-ಚನ್ನರು ತಾಯ ಮುಂದಿರುವ ಮಾತು ಬಾರದ ಹಸುಗೂಸುಗಳಾದರು. ಇದರಿಂದ ಆಚಾರ್ಯರು ಸಂತೃಪ್ತರಾಗಿ ಅವರಿಗೆ ವೈಷ್ಣವ ಧರ್ಮದ ದೀಕ್ಷೆಯನ್ನು ಕೊಟ್ಟರು. ವೇಲ-ಚನ್ನರು ವಿನೀತರಾಗಿ ನಡೆದುಕೊಂಡು ತಮ್ಮ ಜನರಿಗೆಲ್ಲರಿಗೂ ದಿವ್ಯ ಪಥವನ್ನು ತೋರಿಸಿ ಧರ್ಮರಥದಲ್ಲಿ ಕೂರಿಸಿದರು.

ಅನಂತ ಸಂಖ್ಯೆಯ ಶಿಲ್ಪಿಗಳಿಂದ ದೇವಾಲಯ ಕಾರ್ಯ ಪ್ರಾರಂಭವಾಯಿತು. ಇದರಲ್ಲಿ ವೇಲ-ಚನ್ನರ ಪಾತ್ರ ಹೇಳತೀರದಷ್ಟು. ಆಗ ಆಚಾರ್ಯರು ವೇಲ-ಚನ್ನರನ್ನು ಬಹುವಾಗಿ ಮೆಚ್ಚಿ ವೇಲನ ಹೆಸರಿನಲ್ಲಿ ಆ ಊರಿಗೆ ವೇಲಾಪುರಿ ಎಂದೂ ಚನ್ನನ ಹೆಸರಿನಲ್ಲಿ ತಾವು ಪ್ರತಿಷ್ಠಾಪಿಸಿದ ವಿಷ್ಣುಮೂರ್ತಿಯನ್ನು ಚನ್ನಕೇಶವನೆಂದೂ ಕರೆದರು. ವೇಲಾಪುರಿ ಕ್ರಮೇಣ ವೇಲೂರಾಯಿತು. ಅಂದಿನ ವೇಲೂರೇ ಇಂದಿನ ಬೇಲೂರು. ✡

('ಚುಂಚನಗಿರಿ' ನೆನಪಿನ ಸಂಪುಟದಿಂದ)



"ಜಾನಪದ ಗೀತೆಗಳು ನಮ್ಮಲ್ಲಿ ಅಪಾರವಾಗಿವೆ. ಬಹು ಕಾಲದಿಂದ ಬರುತ್ತಿವೆ. ಅವನ್ನು ಬರೆದವರು-ಕಟ್ಟಿದವರು-ಯಾರೋ ನಮಗೆ ತಿಳಿಯದು. ಅರ್ಥ ಸುಲಭ, ಅನುಭವಿಸಿದಷ್ಟು ಸುಂದರ. ಅಳತೆಯುಂಟು ಧ್ವನಿಗೆ; ಆದರೆ ಅದರ ಪ್ರಭಾವಕ್ಕೆ ಮೇರೆ ಇಲ್ಲ. ನಾವೇ ಆಡಿದ ಮಾತನ್ನ ನಮಗೆ ಯಾರೋ ಜ್ಞಾಪಿಸಿದಂತೆ ಆಗುತ್ತದೆ, ನಗು ಬರುತ್ತದೆ, ಅಳು ಬರುತ್ತದೆ. ಅಳು ಮುಗಿದು ಆನಂದ ಉಳಿಯುತ್ತದೆ. ಯಾರೂ ಇವನ್ನು ಕಾವ್ಯವೆಂದಾಗಲಿ ಮಹಾಕಾವ್ಯವೆಂದಾಗಲಿ ಕರೆದುಕೊಳ್ಳುವದಿಲ್ಲ. ಇಷ್ಟರಿಂದಲೇ ಅವುಗಳೊಳಗಿನ ಸಂಪತ್ತು ಬಂದೆಳೆಯೂ ನಲುಗುವದಿಲ್ಲ."

—ಕೆ. ಎಸ್. ನರಸಿಂಹಸ್ವಾಮಿ

"...ವಾಗಿ ನಡೆಯಬೇಕಾದ ಕೆಲಸವಿದು ಅಂದುಕೊಂಡಿದ್ದೆ.
ಆದರೆ ಅಂದುಕೊಂಡಂತೆ ಎಲ್ಲವೂ ನಡೆಯಬೇಕಲ್ಲ!"

---

# ಅಸ್ಥಿ ವಿಸರ್ಜನೆ

ಬಾ. ರಾ. ಗೋಪಾಲ

ಮೇ ತಿಂಗಳ ಕೊನೆಯ ವಾರದಲ್ಲಿ ನಮ್ಮೂರಿಂದ ಮೈಸೂರಿಗೆ ಪ್ರಯಾಣ ಮಾಡುತ್ತಿದ್ದೆ. ನಮ್ಮನ್ನು ಸಾಕಿ ಸಲಹಿದ ದೊಡ್ಡಮ್ಮನವರು ತೀವ್ರವಾಗಿ ಅಸ್ವಸ್ಥರಾಗಿದ್ದಾರೆಂಬ ವರ್ತಮಾನ ತಿಳಿದು ಊರಿಗೆ ಹೋಗಿದ್ದೆ, ಆಕೆಯ ದತ್ತು ಮಗನಾದ ನನ್ನ ಕಿರಿಯ ಸೋದರ ಮತ್ತು ಅವನ ಹೆಂಡತಿ ಹಾಗೂ ನಮ್ಮ ನೆಂಟಸ್ತನದ ಅಕ್ಕ ಒಬ್ಬಾಕೆಯನ್ನು ಹೊರತು ನನ್ನ ಇತರ ಸೋದರರಾಗಲೀ ನನ್ನ ತಂದೆಯವರಾಗಲೀ ಸಮೀಪದಲ್ಲಿರಲಿಲ್ಲ. ಅವರನ್ನು ಹುಡುಕುವ ಕರೆಸಿಕೊಳ್ಳುವ ಯತ್ನಗಳು ಫಲಿಸಲಿಲ್ಲ. ವಿಧಿ ಬರೆಹ ತಪ್ಪಿಸಲಾದೀತೇ? ಅಂತೂ ಆಕೆ ಕೊನೆಯುಸಿರೆಳೆದ ಬಳಿಕ ಸಾಧ್ಯವಾದಷ್ಟು ನಮ್ಮವರಿಗಾಗಿ ಕಾದಿದ್ದು ಕೊನೆಗೊಮ್ಮೆ ದೇಹಕ್ಕೆ ಅಂತಿಮ ಸಂಸ್ಕಾರಗಳನ್ನು ಸಲ್ಲಿಸಿದೆವು. ನಂತರ ಅವರೂ ಬಂದರು. ಎರಡು ದಿನಗಳ ಬಳಿಕ ಅಸ್ಥಿಸಂಚಯನ ಕರ್ಮದಲ್ಲಿ ನಾನೂ ಭಾಗವಹಿಸಿದ್ದೆ. ಮೈಸೂರಿಗೆ ಹಿಂದಿರುಗಿ ನಾಲ್ಕಾರು ದಿನಗಳ ಬಳಿಕ ಉತ್ತರ ಕ್ರಿಯೆಗಳಲ್ಲಿ ಭಾಗವಹಿಸಲು ನಾನು ಮತ್ತೆ ಬರಬೇಕಾಗಿದ್ದರಿಂದ ಅಸ್ಥಿಯನ್ನು ನನ್ನೊಂದಿಗೆ ಒಯ್ದು ಕಾವೇರಿಯಲ್ಲಿ ವಿಸರ್ಜನೆ ಮಾಡಬೇಕೆಂದು ನಿಶ್ಚಯಿಸಿದೆವು. ಅದರಂತೆ ನನ್ನದೊಂದು ಸಣ್ಣ ಬ್ರೀಫ್ ಕೇಸ್ ಜೊತೆಗೆ ಅಸ್ಥಿಯನ್ನೊಳಗೊಂಡ ಪಾತ್ರೆಯನ್ನಿಟ್ಟಿದ್ದ ಅತಿ ಸಣ್ಣ ಕೈಚೀಲ ನನ್ನೊಂದಿಗೆ ಬಂದವು. ಬೇರೆ ಬೇರೆ ಕಾರ್ಯಗಳಿಗೆಂದು ನಾವು ನಾಲ್ವರು ಸೋದರರೂ ಬೆಂಗಳೂರಿನ ವರೆಗೂ ಪ್ರಯಾಣಮಾಡಿ ಅಲ್ಲಿ ನಮ್ಮ ನಮ್ಮ ಹಾದಿ ಹಿಡಿದೆವು. ನಾನು ಬೆಂಗಳೂರು ಬಸ್ ನಿಲ್ದಾಣದಲ್ಲಿ ಮೈಸೂರಿನ ಬಸ ಹುಡುಕಿದೆ. ಶ್ರೀರಂಗಪಟ್ಟಣದಲ್ಲಿ ನಾನು ಇಳಿಯಬೇಕಾದ್ದರಿಂದ ನಾನ್‌ಸ್ಟಾಪ್ ಬಸ್ ಬೇಕಿರಲಿಲ್ಲ. ಆಗ ಸಮಯ ಮಧ್ಯಾಹ್ನ ೩-೩೦. ಸುಮಾರು ೨.೪೫ಕ್ಕೆ ಹೊರಡಬೇಕಿದ್ದ Express ಬಸ್ಸೊಂದು ನಿಂತಿತ್ತು. ಅದರಲ್ಲಿ ಹೋಗಿ ಕುಳಿತೆ. ಬ್ರೀಫ್‌ಕೇಸನ್ನು ತಲೆಯ ಮೇಲಿನ ಮಾಡಿನಲ್ಲಿಟ್ಟೆ. ಸಣ್ಣ ಕೈಚೀಲವನ್ನು ಮಾತ್ರ ಜೋಪಾನವಾಗಿ ಪಕ್ಕದಲ್ಲಿಯೇ ಇಟ್ಟುಕೊಂಡಿದ್ದೆ. ನನ್ನ ಪಕ್ಕದಲ್ಲಿದ್ದ ಒಬ್ಬ ಹುಡುಗಗನನ್ನು ಕಂಡಕ್ಟರ್ ಸ್ಥಳಾಂತರಿಸಿ, ಕಿಟಕಿಯ ಪಕ್ಕದ ಅವನ ಜಾಗಕ್ಕೆ ನನ್ನನ್ನು, ನನ್ನ ಜಾಗದಲ್ಲಿ ಮುದಕರೊಬ್ಬರನ್ನು ಕೂರಿಸಿದ. ಬಸ್ ಹೊರಟತು.

ದೈಹಿಕ ಹಾಗೂ ಮಾನಸಿಕವಾಗಿ ಬಹಳ ಆಯಾಸಗೊಂಡಿದ್ದೆ. ವಿಪರೀತ ಸೆಕೆ, ಬಾಯಾರಿಕೆ, ಊರಿನಲ್ಲಿದ್ದಾಗಲೇ ಹಲವಾರು ಬಾರಿ ನೀರು ಕುಡಿದಿದ್ದೆ. 'ನಿಮಗೇಕೆ ಭಾವ

ಹೀಗೆ ದಾಹ ಈ ದಿನ?' ಎಂದು ನನ್ನ ನಾದಿನಿ ಕೇಳುವುದೂ ಆಗಿತ್ತು. ಬಸ್ ಚಲಿಸಿದ ಮೇಲೆ ಅರ್ಧ ನಿದ್ರೆ, ಅರ್ಧ ಜಾಗೃತಾವಸ್ಥೆಯಿಂದಾಗಿ ಮೇಲಿನ ಬ್ರೀಫ್‌ಕೇಸನ್ನು ಮರೆತಿದ್ದರೂ ಪಕ್ಕದಲ್ಲಿದ್ದ ಚೀಲದ ಮೇಲೆಯೇ ನನ್ನ ನಿಗಾ ಎಲ್ಲಾ! ನನ್ನ ಪಕ್ಕದಲ್ಲಿ ಹೊಸದಾಗಿ ಆಸೀನರಾಗಿದ್ದ ಮುದುಕರು ಒಮ್ಮೆ ಹೇಳಿದರು 'ಅದನ್ನು ಮೇಲಿಡಿ' ಎಂದು: ಅದು ಉರುಳಿ ಹೋದೀತು. ಎಂಬ ನನ್ನ ಕಾತುರವನ್ನು ಸ್ಪಷ್ಟಪಡಿಸಲಾಗದೆ ಸುಮ್ಮನೆ ಇದ್ದೆ.

ರಾಮನಗರ ದಾಟಿತು. ಚನ್ನಪಟ್ಟಣ ಬಂತು. ೪.೪೫ ಅಥವಾ ೫. ವಿಪರೀತ ದಾಹ. ಹತ್ತು ನಿಮಿಷ ನಿಲ್ಲುತ್ತದೆ ಎಂದಿದ್ದ ಕಂಡಕ್ಟರ್. ನಾಲ್ಕೈದು ನಿಮಿಷಗಳು ಕುಳಿತೇ ಇದ್ದೇ. ಕೊನೆಗೊಮ್ಮೆ ನೀರು ಕುಡಿಯೋಣವೆನಿಸಿ ಬಸ್‌ನಿಲ್ದಾಣದ ಕ್ಯಾಂಟೀನ್‌ಗೆ ಹೋದೆ. ಅದರ ಗಲೀಜು ನೋಡಿಯೇ ಬೇಸರ ಬಂತು. ಕೊನೆಗೊಮ್ಮೆ ಫಾಂಟಾ ಕುಡಿದು ಹೊರ ಬಂದಾಗ ನೋಡಿದ್ದೇನು? ನಾನು ಬಂದ ಬಸ್ ಮುಂದಕ್ಕೆ, ನನ್ನ ಕೈಗೆ ಸಿಗಲಾರದಷ್ಟು ಹೋದದನ್ನು! ಅದುವರೆವಿಗೂ ಕವಿದಿದ್ದ ಮಂಪರು ಒಮ್ಮಿಂದೊಮ್ಮೆಲೇ ಹಾರಿ ಹೋಯಿತು. ನನಗೆ ನೆನಪಾದದ್ದು ಕೈಚೀಲ, ಬ್ರೀಫ್‌ಕೇಸಲ್ಲ! ಆ ಒಂದು ಕ್ಷಣ ಮಾತ್ರ ಆ ಚೀಲವನ್ನು ಸೀಟಿನ ಮೇಲೆ ಜಾಗರೂಕತೆಯಿಂದ ಇಟ್ಟು ಅಗಲಿದ್ದೆ, ಈಗ? ಏನು ಮಾಡಲಿ? ಕೆ. ಎಸ್. ಆರ್. ಟಿ. ಸಿ. ಯ ನಿರ್ವಾಹಕನನ್ನು ಅನುಸರಿಸಿದೆ. ಟ್ಯಾಕ್ಸಿ ಸಿಗುತ್ತದೆಯೇ, ಮುಂದಿನ ನಿಲ್ದಾಣಕ್ಕೆ ವಿಷಯ ತಿಳಿಸುತ್ತೀರಾ ಎಂದೆಲ್ಲಾ ಗೋಗರೆದೆ. ಆತ ಒಳ್ಳೆಯವ. 'ಸ್ವಾಮಿ, ಹೆದರಬೇಡಿ ಇದೀಗ ಇನ್ನೊಂದು ಬಸ್ ಬಂದಿದೆ; ಅದೂ ಅದೇ ಮಾರ್ಗದಲ್ಲಿ ಹೋಗುತ್ತದೆ. ಆದರೆ ನಿಮ್ಮ ಬಸ್ ಮದ್ದೂರಿಗೆ ಹೋಗಿ ಮಂಡ್ಯಕ್ಕೆ ಹೋಗುತ್ತದೆ. ಇದು ನೇರವಾಗಿ ಮಂಡ್ಯಕ್ಕೆ ಹೋಗುತ್ತದೆ. ಆದ್ದರಿಂದ ನಿಮಗೆ ಆ ಬಸ್ ಅಲ್ಲಿ ಸಿಗುತ್ತೆ' ಎಂದು ಧೈರ್ಯ ಕೊಟ್ಟ. ಆ ಇನ್ನೊಂದು ಬಸ್‌ನ ಕಂಡಕ್ಟರ್‌ಗೆ ನನ್ನನ್ನು ಒಯ್ಯುವಂತೆ ಸೂಚನೆ ಕೊಟ್ಟ. ಸರಿ ಇದೂ ಹೊರಟಿತು. ನನ್ನ ದೃಷ್ಟಿ ಎಲ್ಲಾ ಮುಂದುಗಡೆಯೇ. ಏನೆಲ್ಲಾ ನೆನಪುಗಳು. ದರಿದ್ರ ಬಾಯಾರಿಕೆ ಆಗಲೇ ಆಗಬೇಕೆ? ಆ ಚೀಲ ಕುಲುಕಾಡಿ ಕೆಳಗೆ ಬಿದ್ದರೆ! ಅದರೊಳಗಿನ ವಸ್ತುಗಳು ಹೊರಗೆ ಬಿದ್ದರೆ! ಅಯ್ಯೋ, ಇದೇನಿದು ಅಶುಭ ಸೂಚನೆ? ಎಂದೆಲ್ಲಾ ಯೋಚನೆಗಳು. ನಾನು ಟಿಕೆಟ್ ತೆಗೆದಿರುವುದು ಶ್ರೀರಂಗಪಟ್ಟಣಕ್ಕೆ. ಅಲ್ಲಿಳಿದು ಏನು ಮಾಡಲಿ? ಯಾವ ಪುರುಷಾರ್ಥಕ್ಕೆ ಅಲ್ಲಿ ಇಳಿಯಲಿ? ಇದೇ ತರದ ಯೋಚನೆಗಳು.

ಇಷ್ಟರಲ್ಲಿ ನಮ್ಮ ಬಸ್ ಮದ್ದೂರನ್ನು ಸಮೀಪಿಸಿತು. ಊರೊಳಗೆ ಹೋಗುವ ಮಾರ್ಗದಲ್ಲಿ ನಾನು ಬಂದಿದ್ದ ಬಸ್ ಹೋಗುತ್ತಿತ್ತು. ಈ ಬಸ್ ಅದನ್ನು ಬಿಟ್ಟು ಬಲಕ್ಕೆ ತಿರುಗಿ, ಮಂಡ್ಯದ ಕಡೆ ಧಾವಿಸಿತು. ಸದ್ಯ ಆ ಬಸ್ ಇನ್ನೂ ಹಿಂದೆ ಇದೆ ಎಂಬ ಧೈರ್ಯ! ಆದರೆ ಆ ಮುದುಕ? ಅವನಿಗೆ ನನ್ನ ಪರಿಸ್ಥಿತಿ ಗೊತ್ತಿದೆ. ಅವನೇನೋ ಮಂಡ್ಯಕ್ಕೆ ಹೋಗುವದಾಗಿ ಹೇಳಿದ್ದ. ಆದರೆ ನನ್ನ ಬ್ರೀಫ್‌ಕೇಸನ್ನು ಹಾರಿಸಿ ಅಲ್ಲಿಯೇ ಇಳಿದು ಬಿಟ್ಟರೆ? ಅದರಲ್ಲಿ ಬಟ್ಟೆಬರೆಗಳೇನೂ ಇರಲಿಲ್ಲ. ಬರೀ ಟೂತ್‌ಪೇಸ್ಟ್, ಬ್ರಷ್, ಸೋಪು ಮತ್ತು ಸುಮಾರು ೧೫೦ ರೂ. ಗಳನ್ನೊಳಗೊಂಡ ಪರ್ಸ. ಬೀಗವೇನೋ ಹಾಕಿದೆ. ಆದರೆ ಅದೇನು ಮಹಾ? ಅದು ಹೋದರೂ ಹೋಗಲಿ. ಆ ಮುದುಕ ನನ್ನ ಕೈಚೀಲ ಹಾರಿಸಿದರೆ? ಹಾರಿಸಿರಲಾರ ಎನಿಸಿತು. ದೇವರೇ, ಬ್ರೀಫ್‌ಕೇಸ್ ಹೋಗಲಪ್ಪಾ, ಚೀಲ ಮಾತ್ರ ಅಲ್ಲೇ ಇರಲಿ ಎಂದೆಲ್ಲಾ ಪ್ರಾರ್ಥನೆ ಸಲ್ಲಿಸಿದೆ.

ಮಂಡ್ಯ ಬಂತು. ಈ ಬಸ್ ಇಳಿದೆ. ಆ ಬಸ್ಸಿಗಾಗಿ ಕಾದೆ. ೧೫–೨೦ ನಿಮಿಷಗಳ ನಂತರ ಅದೂ ಬಂತು. ಅದರ ಬಾಗಿಲ ಬಳಿ ಧಾವಿಸಿದೆ. ಮುದುಕ ಕುಳಿತೇ ಇದ್ದ. ಆತನ ಕೈ ನೋಡಿದೆ. ಖಾಲಿ! 'ಏನಜ್ಜಾವರೇ?' ಎಂದೆ.

ನನ್ನ ಮುಖ ನೋಡಿದ. 'ಬಸ್ ಸಿಕ್ಬಿಡ್ತಾ' ಎಂದ. ಬರಿಗೈ ಬೀಸಿಕೊಂಡು ಮುಂದೆ ಸಾಗಿದ. ಧೈರ್ಯವಾಯಿತು. ಇಳಿಯುವವರಿಗಾಗಿ ಕಾದು ೩-೪ ನಿಮಿಷಗಳ ಬಳಿಕ ಹತ್ತಿ ನೋಡುತ್ತೇನೆ. ನನ್ನ ಬ್ರೀಫ್‌ಕೇಸ್ ಮೇಲೆ ಸ್ವಸ್ಥವಾಗಿ ಕುಳಿತಿದೆ. ಆದರೆ ಚೀಲ? ದೇವರೇ ಗತಿ! ಚೀಲವೇ ಇಲ್ಲ! ಕೂಡಲೇ ಓಡಿ ಬಂದು ಕೆಳಗಿಳಿದೆ. ಆ ಕಂಡಕ್ಟರನಿಗೆ ಸೂಕ್ಷ್ಮವಾಗಿ ನನ್ನ ಕತೆ ಹೇಳಿದೆ. ಆತ, 'ಆ ಮುದುಕನ ಜೊತೆಯಲ್ಲಿ ಇನ್ನೊಬ್ಬ ಹುಡುಗನೂ ಇದ್ದ ಸರ್. ಆ ಹುಡುಗ "ಬಸ್ ಹೊರಟು ಹೋಗುತ್ತೆ ಬೇಗ ಇಳಿ ಅಜ್ಜ" ಎಂತ ಅವಸರ ಪಡಿಸುತ್ತಾ ಇದ್ದ. ಅಲ್ಲಿ ನಿಂತಿದೆ ನೋಡಿ ಬೆಳ್ಳೂರಿಗೆ ಹೋಗೋ ಬಸ್, ಅದರಲ್ಲಿರಬೇಕು ನೋಡಿ' ಎಂದ.

ಆ ಬಸ್ ಹತ್ತಿ ನೋಡಿದೆ. ಊಹುಂ! ಇಳಿದೆ. ಇನ್ನೊಂದು ಬಸ್ ಹತ್ತಿದೆ. ಇಳಿದೆ. ಅಷ್ಟರಲ್ಲಿ ಯೋಚನೆ ಬಂತು. ಕಂಡಕ್ಟರನಿಗೆ ನನಗಾಗಿ ಕಾಯಬೇಕೆಂದು ಪ್ರಾರ್ಥಿಸಿಕೊಂಡು ಮಂಡ್ಯದ ರೈಲ್ವೆಗೇಟ್ ಕಡೆ ಓಡಿದೆ. ಅಗೋ, ಅಲ್ಲಿ ನಿಧಾನವಾಗಿ ಹೋಗುತ್ತಿದ್ದಾನೆ ಮುದುಕ! ಕೈ ಖಾಲಿ! ಆದರೆ ಆತನ ಮುಂದೆ ಒಬ್ಬ ಯುವಕ. ಆತನ ಕೈಯಲ್ಲಿ ನನ್ನ ಚೀಲ! ಒಂದೇ ಏಟಿಗೆ ಹಾರಿ 'ಗಬ್' ಎಂತ ಮುದುಕನ ಭುಜ ಹಿಡಿದೆ. ತಿರುಗಿ ನೋಡಿದ. ಹೆದರಿಕೆ. 'ಏಯ್ ಏಯ್' ಎಂದ. 'ಎಲ್ಲೋ ಚೀಲ?' ಎಂದರಚಿದೆ. 'ತಪ್ಪಾ, ತಪ್ಪಾ' ಎಂದ. ಆ ಯುವಕ ಓಡಿ ಬಂದ. ಚೀಲ ಮುಂದಕ್ಕೆ ಚಾಚಿದ. 'ನಿಮ್ಮದೇ?' ಎಂದ. 'ನಿಮ್ಮಪ್ಪನದ್ದೇ?' ಎಂದೆ. 'ಏನಿತ್ಲೋ, ಏನೋ, ಪಾಪ!' ಎಂದ ಮುದುಕ. 'ಇತ್ತು ಸುಡುಗಾಡಿನ ಮೂಳೆಗಳು!' ಎಂದೆ. ಬಸ್‌ನ ನೆನಪು ಬಾರದಿದ್ದಲ್ಲಿ ಏನು ಮಾಡುತ್ತಿದ್ದೆನೋ ಏನೋ! 'ಹೋಗ್ರೋ, ಶನೇಶ್ವರರಾ' ಎಂದು ಕೂಗಿ ಹಿಂದಕ್ಕೆ ಓಡಿ ಬಂದೆ. ಬಸ್ಸಿನಲ್ಲಿ ಕುಳಿತೆ. ಎಲ್ಲಾ ಮಂಜು, ಮಂಜು, ಮುಸಕು.

ಇದ್ದದ್ದೇ ನಾವು ಸುಮಾರು ಹತ್ತು ಜನ ಪ್ರಯಾಣಿಕರು ಅದರಲ್ಲಿ. ಬಸ್ ಹೊರಟಿತು. ಜೊತೆಗೆ ರಭಸವಾಗಿ ಮಳೆಯೂ ಬೀಳತೊಡಗಿತು. ಇಷ್ಟೆಲ್ಲಾ ಆಗುವ ವೇಳೆಗೆ ೭ ಘಂಟೆ ದಾಟಿ ಬಿಟ್ಟಿತ್ತು. ಪಾಪ, ಕಂಡಕ್ಟರ್ ನನ್ನ ಅವಸ್ಥೆಗೆ ಮರುಗಿರಬೇಕು. ನನಗಾಗಿ ಬಸ್ ನಿಲ್ಲಿಸಿದ್ದಕ್ಕೆ ಕೃತಜ್ಞತೆ ಸಲ್ಲಿಸಿದೆ. ಮುಂದೆ ಹೋದಂತೆಲ್ಲಾ ಮಳೆ ಹೆಚ್ಚಾಯಿತು. ಶ್ರೀರಂಗಪಟ್ಟಣದಲ್ಲಿ ಇಳಿಯಬೇಕಾದವನು ನಾನೊಬ್ಬನೇ! ಅಲ್ಲಿ ಇಳಿಯುವದೇಕೆ ಎಂದು ಕೇಳಿದ ಕಂಡಕ್ಟರ್, ನನ್ನ ಚೀಲದ ಜವಾಬ್ದಾರಿ ತಿಳಿಸಿದೆ. ಇಲ್ಲಿ ಇಳಿದು ಅಸ್ಥಿವಿಸರ್ಜನೆ ಮಾಡಿ, ಪ್ರಾರ್ಥನೆ ಸಲ್ಲಿಸಿ, ಕೈಕಾಲು ತೊಳೆದು ಮುಂದಿನ ಬಸ್ಸಿನಲ್ಲಿ ಮೈಸೂರಿಗೆ ಹೋಗುವ ನನ್ನ ಕಾರ್ಯಕ್ರಮ ವಿವರಿಸಿದೆ. 'ಈ ಮಳೆಯಲ್ಲಿ ನದೀಗೆ ಹೇಗೆ ಹೋಗುತ್ತೀರಾ ಸ್ವಾಮಿ. ಕತ್ತಲು ಬೇರೆ' ಎಂದ. 'ಏನಾದರಾಗಲಿ' ಎಂದೆ. ಆತನಿಗೆ ಏನನಿಸಿತೋ ಏನೋ! 'ಸ್ವಾಮಿ, ಕಾವೇರಿ ಬಳಿ ಬಸ್ ನಿಲ್ಲಿಸುತ್ತೇನೆ. ನೀವು ನಿಮ್ಮ ಕೆಲಸ ಮುಗಿಸಿ ೧೫ ನಿಮಿಷ ಆದರೂ ಪರವಾಗಿಲ್ಲ ಹೇಗೂ ಲೇಟಾಗಿದೆ' ಎಂದ. ಶ್ರೀರಂಗಪಟ್ಟಣದ ಹತ್ತಿರದ ಸೇತುವೆ ಬಹಳ ಎತ್ತರ. 'ಈ ಕಾವೇರಿಗಿಂತ ಪಶ್ಚಿಮವಾಹಿನಿಯದು ಹೆಚ್ಚು ಅನುಕೂಲ' ಎಂದೆ. 'ಅದೂ ಸಿಗುತ್ತಲ್ಲ' ಎಂದ. ಸರಿ ಒಳ್ಳೆಯದಾಯಿತು ಎನಿಸಿತು. ಘಂಟೆಗಳ ಕಾಲ ಅಸ್ತವ್ಯಸ್ತವಾಗಿದ್ದ ಮನಸ್ಸಿಗೆ ನೆಲೆ ಸಿಕ್ಕಂತಾಯಿತು. ಆತ ಡ್ರೈವರ್‌ಗೆ ಹೇಳಿದ. ಆತನೂ ಒಪ್ಪಿದ. ನದಿಯ ಬಳಿ ನಿಲ್ಲಿಸಿದ. ಇಳಿದು ಹೋಗಿ ಕಾರ್ಯಕ್ರಮ ಮುಗಿಸಿ ಹಿಂತಿರುಗಿದೆ. ಮನೆ ಸೇರಿದಾಗ ರಾತ್ರಿ ಒಂಬತ್ತು ದಾಟಿತ್ತು. ಮಳೆಯ ಹೊಡೆತ ಜೋರಾಗಿಯೇ ಇತ್ತು! ✡



# ನಾ...ನು

ನಾನೆಂಬ ಈ ಪ್ರಾಣಿ
ಇಷ್ಟು ಸುಂದರ ನೋಟದ
ಘಾಟಿಗೆ
ಇನ್ನೂ ಮಲಗಿದ್ದು ಅಲ್ಲೇ ಒದ್ದಾಡುವುದು
ದೌರ್ಭಾಗ್ಯದಲ್ಲೂ ಹೊಂಗಿರಣವೇ
ಎಂಬುದು ಜಿಜ್ಞಾಸೆ.
ಇದು ಹೀಗೆ ಹಾಗೆ
ಹೇಗೆ;- ಮಾತ್ರ ಕಂಡದ್ದು
ಬೇಗೆ.
ಒಂದೂರಿನ ಬೆಲ್ಲ
ಇಲ್ಲೂ ಸಿಹಿಯೇ ಆದದ್ದು
ನನ್ನ ಸೌಭಾಗ್ಯವೇನಲ್ಲ;
ಸರ್ವೇ ಜನಾಃ ಸುಖಿನೋ ಭವಂತು! ಅಷ್ಟೇ!
ಎಷ್ಟು ಸುಖಿಗಳಯ್ಯಾ ನೀವು=
ಮೂರೂಟ ಮೂರ್ಕಾಫಿ ಮೂರು
ಪ್ಯಾಕೇಟ ಸಿಗರೇಟು
ಅನ್ನುವುದಕ್ಕಿಂತ, ಈ ಸುಖಿ
ಬಿಟ್ಟ ಹೊಗೆ,
ಸುಡುಗಾಡನ್ನೂ ನಾಚಿಸುತ್ತಿದೆ.
ಚಕ್ರವಂತೆ ಕೊಂಡಿಯಂತೆ,
ಕಳಚುವುದೂ ಅಂತೆಲ್ಲಾ
ಕೊಚ್ಚು, ತಿರುಗಿ, ತಿರುವ –
ನಂತ(ಃ)ಪುರಕ್ಕೆ!
ಎಷ್ಟು ಗಳಿಗೆಗೋ ಈ 'ಬಣ್ಣ ಗಾಗಲ್ಲು'!
ಹಸಿಲೊಟ್ಟೆ ಈ ಪ್ರಾಣಿ ಅನ್ನುವುದು
ಒಳಗೆ ವೇದನೆ ಅಂತ
ಪುಟಗಟ್ಟಲೆ ಗೀಚಿ, ಗೀಚಿ,
ಅವರಿವರ ದೋಚಿ, ದೋಚಿ,
ನನ್ನದೆಂದು ನಾಚಿಕೆಯೇ ಇಲ್ಲದೆ
ಒಂದೇ ಉಸಿರಿಗೆ ಬಿಗಿದ ಭಾಷಣ
ಇನ್ನೂ ಉಳಿಯುವಷ್ಟು ಅಳಿದಿದೆ. ನೋಡಿ!
ಒಳಹೊಕ್ಕು ನೋಡಿದರೆ ಈ ಪ್ರಾಣಿ,
ಹೇಳುವುದನ್ನು ಮಾಡಿದ್ದು
ಮಾಡಿದ್ದನ್ನು ಹೇಳಿದ್ದು
ಕೈಬೆರಳೆಣಿಕೆ ಅಷ್ಟೇ.
ಮತ್ತೆಲ್ಲಿಯ ಕೊಂಡಿಯೋ ಬಂಡಿಯೋ?
ಒಂದಕ್ಕೂ ಬುರುಡೆಯಿಲ್ಲ ಎಂಬ
'ಬುರುಡೆ'ಯೇ ಬಿಟ್ಟು
ಖಾಲಿ ಬುರುಡೆಯೊಳಗೆ
ಪೂರ್ಣಮದಃ ಪೂರ್ಣಮಿದಂ ಜಪಿಸಿ,
ಹಳೇ ಬೀರು ಹೊಸ ಬುರುಡೆ ಮಾಡಿ
ಪೂರ್ಣವಾಯ್ತು ಸ್ವಾಮಿ.
ಈ ಬೆಳಗೆ ಈ ಪ್ರಾಣಿ
ಹೊತ್ತ ನೀರೂ ಅಲ್ಪ
ಉತ್ತ ಗದ್ದೆಯೂ ಅಲ್ಪ
ಜನ್ಮನಾ ಜಾಯತೇ ಜಂತುಃ
ಪ್ರಾಣಿಯಾಗುವ ಈ ಸುಯೋಗ
ಅಲೆಮಾರಿಯೊಳಗೆ ತುರುಕಿದ್ದೇ ತುರುಕಿದ್ದು
ಆ ತಲೆ, ಈ ತಲೆ, ಬೈತಲೆ
ತ್ರೈತರೆಯಾದ್ದೂ ಆದ್ದೇ.
ಕೋಣನ ಹೊತ್ತ ಎಮ್ಮೆ
ಸುಖದ ನೋವಿಗೆ ಬೊ-
ಬ್ಬಿರಿದದ್ದೂ ಬರಿದದ್ದೇ
ಈ ಸಾಮರಸ್ಯ, ಗಳಸ್ಯ ಕಂಠಸ್ಯ
ಹಾಲು ನೀರಿನ ಹಾಗೆ ಕಲೆದದ್ದೂ ಉಂಟು!
ಹೆರಿಗೆ ನೋವ ಹೆತ್ತಬ್ಬೆ ಬಲ್ಲಳಲ್ಲದೆ
ಹಸುಳೆಯೇನು ಬಲ್ಲುದು ಅಂತ
ಮೂಗು ಮುಚ್ಚಿ ಜಪಿಸಿದ್ದೇ
ಪಂಚಾಕ್ಷರಿ!
ಆ ನೋವ ಸುಖ, ಮಗುವ ಮುಖದ
ಚೀರುವಿಕೆಯ ಎಳೆನಗುವ
ಕಂಡಾಗ ಅಷ್ಟಾಕ್ಷರಿ!
ಕೊನೆಗೊಮ್ಮೆ ಚಕ್ರದ ಬಂಧವೋ ಹಲ್ಲೋ
ಕಳಚುವಿಕೆಯ ಅರಿವು
ಕೊನರೊಡೆದಾಗ
ಈ ಪ್ರಾಣಿ ಕಲ್ಪಿಸಿದ್ದು ಗಾಯತ್ರಿ!;
ಗಾಯಂತಿ, ಗಾರ್ಗಿಯರ —
ಗಮಪದನಿಸ
ಈ ಷಡ್ಜ ಆ ನಿಷಾದದ
ನವಿಲೂ ಆನೆಯೂ
ಮದಗಜಗಮನೆಯ ನೆನಪು
ಹುಟ್ಟಿಸಿ
ತಿರುಗು ಚಕ್ರದ ಶ್ರುತಿಯ ಮೀರಿ
ಓಮಿತ್ಯೇಕಾಕ್ಷರಂ ಆಗಿ
ಪೂರ್ಣವಾಯ್ತೋ?
ಈ ಪ್ರಾಣಿಯ ಚಕ್ರ ನೋಡಿ, ಹಲ್ಲು ನೋಡಿ!
ಕೂಡಿದೆಯೇ? ಕಳಚಿದೆಯೆ??

—ಹರಿಕೃಷ್ಣ

# ಅಗ್ಗದ ಪುಸ್ತಕದಿಂದಾದ ಕೋಲಾಹಲ

**ಗಂಗಾಧರ**

೧೭೪೪ರಲ್ಲಿ ಲಂಡನ್ನಿನಲ್ಲಿ ಎರಡು ಶಿಲಿಂಗುಗಳಿಗೆ ಒಂದು ಕುತೂಹಲಕಾರಿ ಪುಸ್ತಕವನ್ನು ಜನ ಕೊಳ್ಳಬಹುದಾಗಿತ್ತು. ಈ ಪುಸ್ತಕದ ಹೆಸರು "ಸಿರಿಸ್ : ಡಾಂಬರ ನೀರಿನ ಗುಣಾಂಶಗಳ ಬಗ್ಗೆ ಆಲೋಚನೆ" ಮತ್ತು ತಾತ್ವಿಕಚಿಂತನೆ ಎಂದಿತ್ತು. ಮೊದಲನೆಯ ವರ್ಷದಲ್ಲೇ ಇದರ ಮೂರು ಆವೃತ್ತಿಗಳು ಹೊರಟವು. ೧೭೪೬ ಮತ್ತು ೧೭೪೮ ರಲ್ಲಿ ಇನ್ನೆರಡು ಆವೃತ್ತಿಗಳು ಪ್ರಕಟವಾದವು. ೧೭೪೫ರಲ್ಲಿ ಈ ಪುಸ್ತಕ ಫ್ರೆಂಚ್ ಮತ್ತು ಜರ್ಮನ್ ಭಾಷೆಗೆ, ೧೭೪೬ರಲ್ಲಿ ಪೋರ್ತುಗೀಜ್ ಮತ್ತು ಡಚ್ ಭಾಷೆಗೆ ಅನುವಾದಿತವಾಗಿ ಪ್ರಕಟವಾಯಿತು. ಮುಂದಿನ ಎರಡು ದಶಕಗಳಲ್ಲಿ ಇದರ ಬಗ್ಗೆ ವಾದ–ಪ್ರತಿವಾದಗಳು ಪಾಶ್ಚಾತ್ಯ ದೇಶಗಳಲ್ಲಿ ಬಿರುಸಾಗಿ ನಡೆದವು.

ಈ ಪುಸ್ತಕ ಜನಮನವನ್ನು ಇಷ್ಟೊಂದು ಆಕರ್ಷಿಸಿದ್ದು ಹೇಗೆ? ಮುಖ್ಯವಾಗಿ ಎರಡು ಕಾರಣಗಳಿಂದ. ಮೊದಲನೆಯದಾಗಿ, ಡಾಂಬರ ನೀರು ನಾಗರಿಕ ಮಾನವನಿಗೆ ಗೊತ್ತಿರುವ ಹೆಚ್ಚು ಕಡಿಮೆ ಸಕಲ ವ್ಯಾಧಿಗಳನ್ನೂ ಗುಣಪಡಿಸಬಲ್ಲದು ಮತ್ತು ತಾನು ಗುಣಪಡಿಸಲಾಗದ ರೋಗಗಳಲ್ಲೂ ಉಪಶಮನಗೊಳಿಸಿ ವೇದನೆಯನ್ನು ಕಡಿಮೆಮಾಡಬಲ್ಲುದು ಎಂಬುದಾಗಿ ಈ ಪುಸ್ತಕದಲ್ಲಿ ಬರೆದಿದ್ದು. ಎರಡನೆಯದಾಗಿ ಇದನ್ನು ತಯಾರಿಸುವ ವಿಧಾನವನ್ನು ಸಕಲರಿಗೂ ತಿಳಿಯುವಂತೆ ಸುಲಭವಾಗಿ ವಿವರಿಸಿದ್ದು.

ಆದರೆ ಡಾಂಬರ ನೀರಿನಿಂದ ಆರಂಭವಾಗಿ ವೇದಾಂತದಲ್ಲಿ ಮುಗಿಯುತ್ತಿದ್ದ ಈ ಪುಸ್ತಕದಲ್ಲಿ ರೋಗಪೀಡಿತ ಜನ ವೇದಾಂತ ಭಾಗವನ್ನು ಕಡೆಗಣಿಸಿ ಡಾಂಬರ ನೀರಿನ ಭಾಗವನ್ನೇ ಆಶ್ರಯಿಸಿದ್ದರಲ್ಲಿ ಆಶ್ಚರ್ಯವೇನಿಲ್ಲ. ಇದಕ್ಕಾಗಿಯೇ 'ಸಿರಿಸ್' ಬೇರೆ ಬೇರೆ ಭಾಷೆಗಳಲ್ಲಿ ಭಾಷಾಂತರಿಸಲ್ಪಟ್ಟಾಗ ಅದು ಡಾಂಬರ ನೀರಿನ ಭಾಗವಷ್ಟನ್ನೇ ಹೊಂದಿತ್ತು. ಈ ಅದ್ಭುತ ಪುಸ್ತಕದ ಲೇಖಕ ಕ್ಲೋಯ್ನ್‌ನ ಬಿಶಪ್ ಜಾರ್ಜ್ ಬರ್ಕ್ಲೆ ಎಂಬಾತ.

ಬರ್ಕ್ಲೆಗೆ ಡಾಂಬರ ನೀರಿನ ಗುಣಧರ್ಮ ಗೊತ್ತಾದದ್ದು ಆತ ೧೭೨೮ ರಿಂದ ೧೭೩೧ ರ ವರೆಗೆ ಬರ್ಮುಡಾದಲ್ಲಿ ಒಂದು ಕಾಲೇಜನ್ನು ಸ್ಥಾಪಿಸುವುದರ ಸಲುವಾಗಿ ಚಂದಾ ಎತ್ತಲೆಂದು 'ನೂತನ ಜಗತ್ತಿ'ನಲ್ಲಿ (ಅಮೇರಿಕ) ಸಂಚರಿಸಿದಾಗಲೇ. ಈ ನೂತನ ಜಗತ್ತಿನ ನಿವಾಸಿಗಳಾಗಿದ್ದ ಇಂಡಿಯನ್ನರು ಪ್ಲೇಗ್ ಬೇನೆಗೆ ಡಾಂಬರ ನೀರನ್ನು ಔಷಧಿಯೆಂದು ಉಪಯೋಗಿಸುತ್ತಿದ್ದುದು ಆಗ ಬರ್ಕ್ಲೆಯ ಗಮನಕ್ಕೆ ಬಂತು. ೧೭೪೧ರಲ್ಲಿ ಐರ್ಲಂಡಿನ ಕ್ಲೋಯ್ನ್ ಪಟ್ಟಣದಲ್ಲಿ ಪ್ಲೇಗ್ ಬೇನೆ ಹಬ್ಬಿದಾಗ ಡಾಂಬರ ನೀರನ್ನು ರೋಗಿಗಳಿಗೆ ಕೊಟ್ಟು ಅದು ಗುಣಕಾರಿ ಎಂದು ಬಿಶಪ್ ಬರ್ಕ್ಲೆ ಕಂಡುಕೊಂಡ. "ನನಗೆ ಗೊತ್ತಿದ್ದ ಮಟ್ಟಿಗೆ ಡಾಂಬರ ನೀರು ಕುಡಿದವರಿಗೆ ಬೇನೆ ತಗಲಲಿಲ್ಲ ಮತ್ತು ತಗಲಿದವರಲ್ಲಿ ಬೇನೆ ಸೌಮ್ಯವಾಗಿತ್ತು" ಎಂದಿದ್ದಾನೆ ಬರ್ಕ್ಲೆ. ತನಗಾಗಿಯೂ ಕಡು ದಾರಿದ್ರ್ಯದಲ್ಲಿ ಜೀವಿಸುತ್ತಿದ್ದ ತನ್ನ ನಗರ ನಿವಾಸಿಗಳಿಗಾಗಿಯೂ ತೀರಾ ಅಗ್ಗವಾದ ಹಾಗೂ ಸಕಲ ರೋಗೋಪಹಾರಕವಾದ ಔಷಧಿಯೊಂದನ್ನು ಕಂಡುಹಿಡಿಯುವುದು ಬರ್ಕ್ಲೆಗೆ ಅಗತ್ಯವಾಗಿ ಕಂಡಿತು. ಅದಕ್ಕಾಗಿ ಆತ ಧೂಳು ತಿನ್ನುತ್ತಾ ಬಿದ್ದಿದ್ದ ಹಳೆಗಾಲದ ಪುಸ್ತಕಗಳನ್ನೆಲ್ಲಾ ಮುಗುಚಿಹಾಕಿದ. ಅಷ್ಟಕ್ಕೂ ತೃಪ್ತನಾಗದೆ ಪುರಾತನ ಕಾಲದಲ್ಲಿ ಗ್ರೀಕ್, ರೋಮನ್ ವಿದ್ವಾಂಸರು ಬರೆದ ತತ್ವಶಾಸ್ತ್ರಕ್ಕೆ ಸಂಬಂಧಿಸಿದ ಪುಸ್ತಕಗಳಲ್ಲಿಯಾದರೂ ಈ ಬಗ್ಗೆ ಸುಳಿವು ಸಿಗಬಹುದೇನೋ ಎಂದು ಅವುಗಳನ್ನೂ ಕೂಲಂಕಷವಾಗಿ ಅಭ್ಯಸಿಸಿದ. ಇದಾಗಿ ಕೆಲವು ಕಾಲದ

ನಂತರ ದಕ್ಷಿಣ ಅಮೇರಿಕದಲ್ಲಿ ಸಂಚರಿಸಿದ ನಂತರ ದೊರೆತ ಅನುಭವದ ಫಲವಾಗಿ ಈ ಪುಸ್ತಕ ವಿಜ್ಞಾನ–ತತ್ವಶಾಸ್ತ್ರಗಳ ಮಿಶ್ರಣ ರೂಪದಲ್ಲಿ ಹೊರಬಂತು.

ಮೈಲಿ, ಕರುಳಿನ ವ್ರಣ, ದೂಷಿತ ರಕ್ತ, ಕ್ಷಯ, ಜ್ವರ, ಅಗ್ನಿಮಾಂದ್ಯ, ದಮ್ಮು, ಅಪಸ್ಮಾರ ಇತ್ಯಾದಿ ಹಲವಾರು ಕಠಿಣ ರೋಗಗಳಲ್ಲಿ ಡಾಂಬರ ನೀರು ಪರಿಣಾಮಕಾರಿಯಾಗಿರುವುದು ಕಂಡುಬಂದಿದೆ ಎಂದು ಬರ್ಕ್ಲಿ ತನ್ನ ಪುಸ್ತಕದಲ್ಲಿ ಹೇಳಿದ್ದಾನೆ.

'ಸಿರಿಸ್' ಪ್ರಕಟಿಸಿದ ಎಂಟು ವರ್ಷಗಳ ನಂತರ ಬರ್ಕ್ಲಿ ಸತ್ತ. ಸಾಯುವುದಕ್ಕೆ ಮೂರು ತಿಂಗಳ ಮುಂಚೆ ಅವನು ಕ್ಯಾನ್ಸರ್, ಕುಷ್ಠ, ಹುಚ್ಚು ಮುಂತಾದವುಗಳಿಗೂ ಡಾಂಬರ ನೀರು ಗುಣಕಾರಿಯಾಗಿದೆ ಎಂದೂ ಸಾರಿದ. ಸ್ತ್ರೀಯರಿಗೆ ವಯಸ್ಸಾಗಿ ಮುಟ್ಟು ನಿಲ್ಲುವ ಕಾಲದಲ್ಲಿ ತಲೆದೋರುವ ವಿಕಾರಗಳಿಗೆ ಡಾಂಬರ ನೀರು ಪ್ರಯೋಜನಕಾರಿ, ಗಾಯಗಳಿಗೆ ಲೇಪಿಸುವುದರಿಂದ ಮತ್ತು ಹೊಟ್ಟೆಯಲ್ಲಿ ಸೇವನೆ ಮಾಡುವುದರಿಂದ ಅವು ಮಾಯುತ್ತವೆ ಎಂದು ಕೂಡ ಆತ ಪ್ರತಿಪಾದಿಸಿದ.

ಸ್ವತಃ ರೋಗಿಷ್ಠನಾಗಿದ್ದ ಬರ್ಕ್ಲಿ ಆಗಾಗ ಡಾಂಬರ ನೀರು ಕುಡಿಯುತ್ತಿದ್ದ. ತನ್ನ ಕುಟುಂಬದವರಿಗೂ ತನ್ನ ಚರ್ಚಿನ ಅನುಯಾಯಿಗಳಿಗೂ ಅದನ್ನು ಕುಡಿಸುತ್ತಿದ್ದ. ಈ ಅನುಭವದ ಬಲದಿಂದ ಮತ್ತು ಅಪರಿಚಿತ ಜನ ಕೂಡ ಡಾಂಬರ ನೀರಿನಿಂದ ತಮ್ಮ ಕಾಯಿಲೆ ವಾಸಿಯಾದ ಬಗ್ಗೆ ಅವನಿಗೆ ಬರೆಯುತ್ತಿದ್ದ ಪತ್ರಗಳ ಆಧಾರದಿಂದ ಡಾಂಬರ ನೀರು ರಾಮಬಾಣ ಔಷಧಿ ಎಂದು ಬರ್ಕ್ಲಿ ಸಾರಿದ.

ಡಾಂಬರ ನೀರಿನ ರಾಸಾಯನಿಕ ಅಂಶಗಳ ಬಗ್ಗೆ ಬರ್ಕ್ಲಿ ಹೇಳಿರುವ ವಿಚಾರಗಳು ಅಪೂರ್ಣ ಮತ್ತು ಸರಿಯಾದವುಗಳಲ್ಲವಾದರೂ ಆತ ತುಂಬ ಅಭ್ಯಾಸ ಮತ್ತು ಪರಿಶ್ರಮದಿಂದ ಪುಸ್ತಕವನ್ನು ಬರೆದಿದ್ದಾನೆನ್ನುವುದು ಸುಳ್ಳಲ್ಲ.

ಇಷ್ಟೊಂದು ಸತ್ವಶಾಲಿ ಔಷಧವೆಂದು ಪ್ರಸಿದ್ಧವಾದ ಡಾಂಬರ ನೀರು ಆಗ ಬಲು ತುಟ್ಟಿಯಾಗಿರಬೇಕು ಎಂದು ಅನಿಸುವುದು ಸ್ವಾಭಾವಿಕ. ಆದರೆ ಹಾಗಾಗಲಿಲ್ಲ. ಕೆಲವೇ ಪೈಸೆಗಳನ್ನು ಖರ್ಚು ಮಾಡಿದರೆ ಒಂದು ಬ್ಯಾರೆಲ್ ತುಂಬ ಡಾಂಬರ ನೀರನ್ನು ಉತ್ಪಾದಿಸಬಹುದಾಗಿತ್ತು. ಡಾಂಬರ ನೀರನ್ನು ತಯಾರಿಸುವ ವಿಧಾನವನ್ನು ಬರ್ಕ್ಲಿ ತನ್ನ ಪುಸ್ತಕದಲ್ಲಿ ಹೇಳಿದ್ದಾನೆ. ಅದು ಅತ್ಯಂತ ಸುಲಭವಾಗಿದ್ದು ಯಾರೂ ಬೇಕಾದರೂ ಮನೆಯಲ್ಲಿ ಡಾಂಬರ ನೀರನ್ನು ತಯಾರಿಸಿಕೊಳ್ಳಬಹುದಿತ್ತು. ಬರ್ಕ್ಲಿ ತನ್ನ ಬೇರೆ ಬೇರೆ ಪುಸ್ತಕಗಳಲ್ಲಿ ಅದನ್ನು ತಯಾರಿಸುವ ವಿಧಾನಗಳಲ್ಲಿ ತುಸು ಹೆಚ್ಚು ಕಡಿಮೆ ಇದ್ದಂತೆ ರೋಗಿ ತೆಗೆದುಕೊಳ್ಳಬೇಕಾದ ಪ್ರಮಾಣದಲ್ಲೂ ಹೆಚ್ಚು ಕಡಿಮೆ ಕಾಣಿಸುತ್ತದೆ. ಕೂಸುಗಳಿಗೆ ದಿನಕ್ಕೆ ಕಾಲು ಪಿಂಟ್, ದೊಡ್ಡವರಿಗೆ ಒಂದು ಪಿಂಟ್‌ನಿಂದ ಹಿಡಿದು ಒಂದು ಕ್ವಾರ್ಟ್‌ವರೆಗೆ ಕೊಡಬೇಕು, ಸ್ವಲ್ಪ ಹೆಚ್ಚು ಕುಡಿದರೂ ಅಪಾಯವಿಲ್ಲ ಎಂದಾತ ಹೇಳಿದ್ದಾನೆ. ಕೆಲ ರೋಗಿಗಳಿಗೆ ಡಾಂಬರ ನೀರು ಕುಡಿದಾಗ ವಾಂತಿಯ ಲಕ್ಷಣಗಳು ಕಾಣಿಸಿಕೊಳ್ಳುತ್ತಿದ್ದವು. ಅಂಥ ರೋಗಿಗಳು ಕಡಿಮೆ ಪ್ರಮಾಣದಲ್ಲಿ ಕುಡಿಯಬೇಕು ಅಥವಾ ಕುಡಿಯುವದನ್ನು ನಿಲ್ಲಿಸಬೇಕು ಇಲ್ಲವೆ ಮದ್ಯದೊಂದಿಗೆ ಸೇರಿಸಿ ಕುಡಿಯಬೇಕು ಎಂದು ಬರ್ಕ್ಲಿ ಸೂಚಿಸಿದ್ದಾನೆ.

ಬೆವರು, ಮೂತ್ರ, ಮಲ ಮುಂತಾದ ರೂಪದಿಂದ ಡಾಂಬರ ನೀರು ಶರೀರದಲ್ಲಿರುವ ವ್ಯಾಧಿ ವಿಷವನ್ನು ಹೊರಗೆ ಹಾಕುತ್ತದೆ. ಅದು ಇನ್ನಿತರ ಔಷಧಿ ರೂಪದಲ್ಲೂ ಕೆಲಸ ಮಾಡುತ್ತದೆ ಎಂದು ಬರ್ಕ್ಲಿಯ ಅಭಿಮತ. ನೈಸರ್ಗಿಕವಾಗಿ ಬರುವ ಬೇನೆಗಳಿಗೆ ನಿಸರ್ಗದಲ್ಲಿಯೆ ಪರಿಹಾರದ ಏರ್ಪಾಟಿದೆ ಎನ್ನುವುದು ಬರ್ಕ್ಲಿಯ ಮೂಲ ಸಿದ್ಧಾಂತ. ✡

ಈ ಆಧುನಿಕ ಶಾಸ್ತ್ರದ ಮೂಲ ಭಾರತೀಯವೇ ಆಗಿದೆ

# ಸರೂಪಿಕ ಶಸ್ತ್ರಚಿಕಿತ್ಸೆ

ಡಾ. ಟಿ. ಎನ್. ವ್ಯಾಸರಾವ್

ಸರೂಪಿಕ ಶಸ್ತ್ರಕ್ರಿಯೆ ಅಥವಾ ಪ್ಲಾಸ್ಟಿಕ್ ಸರ್ಜರಿಯಲ್ಲಿ ಪ್ಲಾಸ್ಟಿಕ್ ಅಥವಾ ಇನ್ನಾವ ಸಂಯೋಜಿತ (Synthetic) ವಸ್ತುಗಳ ಅಳವಡಿಕೆ ಇರುವುದಿಲ್ಲ. ಆದುದರಿಂದ ಆಂಗ್ಲ ಭಾಷೆಯಲ್ಲಿ ಇದಕ್ಕೆ ಇಟ್ಟಿರುವ ಪ್ಲಾಸ್ಟಿಕ್ ಸರ್ಜರಿ ಎಂಬ ಹೆಸರು ಅಷ್ಟೊಂದು ಅರ್ಥ-ಗರ್ಭಿತವಾಗಿ ತೋರುವುದಿಲ್ಲ. ಕನ್ನಡಾನುವಾದದಲ್ಲಿ ಬಂದಿರುವ ಸರೂಪಿಕ ಶಸ್ತ್ರಕ್ರಿಯೆಯು ಅರ್ಥಗರ್ಭಿತವಾಗಿರುತ್ತದಲ್ಲದೆ ಈ ಶಸ್ತ್ರಕ್ರಿಯೆಯ ಬಗೆಗಿರುವ ಸರಿಯಾದ ಅಭಿಪ್ರಾಯವನ್ನು ಓದುಗರಿಗೆ ಉಂಟು ಮಾಡುತ್ತದೆ.

ಸರೂಪಿಕ ಶಸ್ತ್ರಕ್ರಿಯೆಯ ಆರಂಭವು ಹಿಂದೂ ದೇಶದಲ್ಲಿಯೇ ಆಯಿತು ಎನ್ನುವುದರಲ್ಲಿ ಸಂದೇಹವಿಲ್ಲ. ಪಾಶ್ಚಾತ್ಯ ಶಾಸ್ತ್ರಜ್ಞರೂ ಈ ವಿಷಯವನ್ನು ಒಪ್ಪಿಕೊಂಡಿರುತ್ತಾರೆ. ಕ್ರಿ. ಶ. ೩ನೇ ಶತಮಾನಗಳ ಹಿಂದಿದ್ದ ಸುಶ್ರುತನೇ ಈ ಶಾಸ್ತ್ರದ ಪಿತಾಮಹನೆನ್ನಬಹುದು. ಆಗಿನ ಕಾಲದಲ್ಲಿ ಗಂಡಸರು ತಮ್ಮ ಹೆಂಡತಿಯ ಪಾವಿತ್ರ್ಯವನ್ನು ಶಂಕಿಸಿದಲ್ಲಿ ಅವರ ಕಿವಿ ಮೂಗುಗಳನ್ನು ಕೊಯ್ದು ಅಂಗವಿಕಲರನ್ನಾಗಿ ಮಾಡುತ್ತಿದ್ದರು. ರಾಮಾಯಣ-ದಲ್ಲಿಯೂ ರಾಮನ ಮನ ಸೆಳೆಯಲೆತ್ನಿಸಿದ ಶೂರ್ಪಣಖಿಯ ಕಿವಿ ಮೂಗುಗಳನ್ನು ಕೊಯ್ದು ಲಕ್ಷ್ಮಣನು ಅವಳನ್ನು ಲಂಕೆಗೆ ಅಟ್ಟಿದನೆಂಬ ಉಲ್ಲೇಖವಿದೆ. ಹಾಗೆಯೇ ಯಾತ್ರಾರ್ಥಿಗಳಾಗಿ ದಿನಗಟ್ಟಳೆ, ವಾರಗಟ್ಟಳೆ ಕಾಲ್ನಡಿಗೆಯಲ್ಲಿಯೇ ಹೋಗುತ್ತಿದ್ದ ಪಯಣಿಗರನ್ನು ಕಳ್ಳಕಾಕರು ನಡುದಾರಿಯಲ್ಲಿ ಅಡ್ಡಗಟ್ಟಿ ಅವರಲ್ಲಿರುವ ವಸ್ತುಗಳನ್ನು ದೋಚಿಕೊಂಡು ಹೋಗುತ್ತಿದ್ದರಲ್ಲದೆ ಅವರ ಕಿವಿ ಮೂಗುಗಳನ್ನು ಕೊಯ್ದು ಹಾಕುತ್ತಿದ್ದರು. ಈಗಲೂ ಮಧ್ಯಪ್ರದೇಶ, ಬಿಹಾರ ಮುಂತಾದೆಡೆಗಳಲ್ಲಿ ಲೂಟಿಕೋರರು ಗ್ರಾಮಗಳ ಸುಲಿಗೆ ಮಾಡುತ್ತಿರುವಾಗ ಅಡ್ಡಬಂದವರ ಮೂಗು ಕೊಯ್ಯುವುದು ಸರ್ವೇಸಾಮಾನ್ಯವಾಗಿದೆ. ಸುಶ್ರುತನು ತನ್ನ 'ಸುಶ್ರುತ ಸಂಹಿತೆ'ಯಲ್ಲಿ ಹಣೆಯ ಚರ್ಮವನ್ನು ಅಳವಡಿಸಿಕೊಂಡು ಹೊಸ ಮೂಗನ್ನು ರಚಿಸುವ ಬಗೆಗಿನ ಕ್ರಮ-ವನ್ನು ಈ ರೀತಿ ವಿವರಿಸುತ್ತಾನೆ: "ಮೊದಲು ಹದನಾಗಿ ಮೆತ್ತಗಾದ ಮೇಣವನ್ನು ತುಂಡರಿಸಿದ ಮೂಗಿನ ಮೇಲಿರಿಸಿ ಮಾಮೂಲು ಆಕಾರ ಬರುವಂತೆ ಅಳವಡಿಸಬೇಕು. ಅನಂತರ ಆ ಮೇಣದ ತುಂಡನ್ನು ಚಪ್ಪಟೆಯಾಗಿ ಮಾಡಿ ಹಣೆಯಲ್ಲಿ ಮಧ್ಯಭಾಗದಲ್ಲಿಟ್ಟು ಬಣ್ಣದ ಕುಂಚದಿಂದ ಗುರುತಿಸಿಕೊಳ್ಳಬೇಕು. ತದನಂತರ ಕೆಳಭಾಗವೊಂದನ್ನು ಬಿಟ್ಟು ಉಳಿದ ಮೂರು ಭಾಗಗಳನ್ನು ಹರಿತವಾದ ಶಸ್ತ್ರದಿಂದ ತುಂಡರಿಸಿ ಅದನ್ನು ತುಂಡರಿಸಿದ ಮೂಗಿನ ಮೇಲೆ ಬರುವಂತೆ ಮಾಡಬೇಕು ಹಾಗೂ ತುಂಡರಿಸಿದ ಮೂಗಿನ ಚರ್ಮವನ್ನು ಹದನಾಗಿ ಕತ್ತರಿಸಿ, ಹೊಸತಾಗಿಸಿ, ಹಣೆಯ ಚರ್ಮವನ್ನು ಮೂಗಿನ ಚರ್ಮಕ್ಕೆ ಸೂಜಿ ದಾರದಿಂದ ಹೊಲಿಯಬೇಕು. ಕುದುರೆಯ ಬಾಲದ ಕೂದಲನ್ನು ದಾರವಾಗಿ ಬಳಸಬೇಕು.

ತುಪ್ಪದಲ್ಲಿ ಅದ್ದಿದ ಬಟ್ಟೆಯನ್ನು ಶಸ್ತ್ರಕ್ರಿಯೆಯಾದ ಜಾಗದ ಮೇಲೆ ಇರಿಸಬೇಕು. ಇಪ್ಪತ್ತೈದು ದಿವಸಗಳ ನಂತರ ಹಣೆಯ ಚರ್ಮಕ್ಕಿದ್ದ ಒಂದೇ ಸಂಬಂಧವನ್ನು ಬೇರ್ಪಡಿಸಬೇಕು." ಈ ವಿವರಣೆಯನ್ನು ವೀಕ್ಷಿಸಿದವರಿಗೆ ಆಗಿನ ಕಾಲದ ಹಿಂದೂ ದೇಶದಲ್ಲಿ ಶಸ್ತ್ರಕ್ರಿಯೆಯು ಯಾವ ಮಟ್ಟಕ್ಕೆ ಹೋಗಿತ್ತೆಂಬುದರ ಅರಿವಾಗುತ್ತದೆ. ಹೊಸ ಮೂಗಿನ ರಚನೆಗೆ ಅಳವಡಿಸುವ ಈ ಕ್ರಮಕ್ಕೆ ಈಗಲೂ 'Indian Method of Rhinoplasty' ಎಂಬ ಹೆಸರೇ ಶಾಶ್ವತವಾಗಿ ನಿಂತಿರುತ್ತದೆ.

ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿಯೂ ಈ ಶಸ್ತ್ರಕ್ರಿಯೆಯು ಉಲ್ಲೇಖವಿರುತ್ತದೆ. ಮದ್ರಾಸ್ ಗಜೆಟ್ಟಿನಲ್ಲಿ ಈ ಉಲ್ಲೇಖವಿದೆ.



ಸೀಳುತುಟಿ: a) ಶಸ್ತ್ರಕ್ರಿಯೆಗೆ ಮೊದಲು b) ಅನಂತರ

೧೭೯೩ರ "ಕೊವಾಸ್‌ಜಿ ಎಂಬ ಮರಾಠಾ ಸೈನಿಕನು ಬ್ರಿಟಿಷ್ ಸೈನ್ಯದಲ್ಲಿ ಗಾಡಿ ಹೊಡೆಯುವ ಉದ್ಯೋಗದಲ್ಲಿದ್ದನು. ಅವನು ೧೭೯೨ರ ಯುದ್ಧದಲ್ಲಿ ಟಿಪ್ಪುವಿನಿಂದ ಸೆರೆ ಹಿಡಿಯಲ್ಪಟ್ಟನು ಹಾಗೂ ಅವನ ಮೂಗು ಮತ್ತು ಒಂದು ಕೈಯನ್ನು ತುಂಡರಿಸಲಾಯಿತು. ಬಂಧನದಿಂದ ಬಿಡುಗಡೆಯಾದ ಮೇಲೆ ಅವನು ಸೆರಿಂಗಪಟವ್ (ಶ್ರೀರಂಗಪಟ್ಟಣ)ನಲ್ಲಿ ಬೊಂಬಾಯಿ ಸೈನ್ಯವನ್ನು ಸೇರಿದನು. ಈಗ H. E. T. ಕಂಪನಿಯ ಪಿಂಚನಿದಾರನಾಗಿದ್ದು ಹನ್ನೆರಡು ತಿಂಗಳುಗಳ ವರೆಗೆ ಅವನು ಮೂಗು ಕಳೆದುಕೊಂಡೇ ಇದ್ದನು. ಆದರ ನಂತರ ಪುಣೆಯ ಹತ್ತಿರದ ಕುಮಾರ ಎಂಬಲ್ಲಿ ಒಬ್ಬ ಮರಾಠಾ ಸರ್ಜನನು ಅವನಿಗೆ ಹೊಸ ಮೂಗನ್ನು ಅಳವಡಿಸಿಕೊಟ್ಟನು. ಇಂತಹ ಶಸ್ತ್ರಕ್ರಿಯೆಗಳು ಭಾರತಕ್ಕೆ ಹೊಸತೇನಲ್ಲ. ತಲೆ ತಲಾಂತರಗಳಿಂದ ನಡೆಯುತ್ತಾ ಬಂದಿವೆ."

ಕಾಲದ ಮುನ್ನಡೆಯೊಂದಿಗೆ ಈ ಶಸ್ತ್ರಚಿಕಿತ್ಸೆಯು ಇತರ ದೇಶಗಳಲ್ಲಿಯೂ ವ್ಯಾಪಿಸಿಕೊಂಡಿತು. ಆದರೆ ಒಂದನೆಯ ಹಾಗೂ ಎರಡನೆಯ ಮಹಾಯುದ್ಧಗಳು ಈ ಶಸ್ತ್ರಚಿಕಿತ್ಸೆಯ ಶೀಘ್ರ ಮುನ್ನಡೆಗೆ ದಾರಿ ಮಾಡಿಕೊಟ್ಟವು. ಬಾಂಬುಗಳ ಸ್ಫೋಟ, ಬಂದೂಕು ಸ್ವಯಂಚಾಲಿತ ಸ್ಟೆನ್‌ಗನ್ ಹಾಗೂ ಟ್ಯಾಂಕುಗಳ ಬಳಕೆಯಿಂದುಂಟಾದ ಅಂಗಾಂಗ ವೈಕಲ್ಯಗಳು ಹಾಗೂ ಸುಟ್ಟ ಗಾಯಗಳು ತೀವ್ರ ಸಮಸ್ಯೆಗಳಾಗಿ ಪರಿಣಮಿಸಿದವು. ಅನೇಕ ಜನರು ಅಂಗಾಂಗಗಳನ್ನು ಸರಿಪಡಿಸಲೋಸುಗ ಇಂಗ್ಲೆಂಡ್, ಅಮೇರಿಕಾ ದೇಶಗಳಿಗೆ ಪ್ರಯಾಣ ಬೆಳೆಸಿದರು. ಇಂಗ್ಲೆಂಡಿನ ಡಾ. ಗಿಲ್ಲೆಸ್ ಎಂಬ ಶಸ್ತ್ರತಜ್ಞರು ಯುದ್ಧ ಕಾಲದ ಗಾಯಾಳುಗಳ ಶುಶ್ರೂಷೆಗಾಗಿಯೇ ಕೆಲ ಕಾಲ ಒಂದು ಆಸ್ಪತ್ರೆಯನ್ನು ನಡೆಸಿದರು. ಆಗ ಅವರು ನಡೆಸಿದ ಪ್ರಯೋಗಗಳು ಈ ಶಸ್ತ್ರಕ್ರಿಯಾ ಭಾಗದ ಮುಂದಿನ ಬೆಳವಣಿಗೆಗೆ ನಾಂದಿಯಾಯಿತು. ಹಿಂದೂ ದೇಶದಿಂದ ಡಾ. ಬಾಲಕೃಷ್ಣನ್ ಎಂಬ ಶಸ್ತ್ರ ಚಿಕಿತ್ಸಕ

ರೊಂದಿಗೆ ಕೆಲಸ ಮಾಡಿ ಅನುಭವ ಪಡೆಯಲು ಬ್ರಿಟಿಷ್ ಸರಕಾರವು ಕಳುಹಿಸಿಕೊಟ್ಟಿತು. ಅವರು ಹಿಂತಿರುಗಿ ಬಂದ ನಂತರ ಭಾರತದಲ್ಲಿ ಸರೂಪಿಕ ಶಸ್ತ್ರಕ್ರಿಯೆಯ ಬೆಳವಣಿಗೆಗೆ ನಾಂದಿ ಹಾಕಿದರು.

ಸರೂಪಿಕ ಶಸ್ತ್ರಕ್ರಿಯೆಯಿಂದ ಸರಿಪಡಿಸ ಬಹುದಾದ ಕುಂದುಕೊರತೆಗಳನ್ನು ಸ್ಥೂಲ ವಾಗಿ ಈ ಕೆಳಗಿನಂತೆ ವಿಂಗಡಿಸಬಹುದು.

೧) ಹುಟ್ಟಿನಿಂದಲೇ ಇರಬಹುದಾದ ಊನ ಹಾಗೂ ಅಂಗ ವೈಕಲ್ಯಗಳು. ಉದಾ : ಸೀಳು ದುಟಿ ಹಾಗೂ ಸೀಳಿದಂಗುಳ, ಒಂದ ಕ್ಕೊಂದು ಜೋಡಿಸಲ್ಪಟ್ಟ ಬೆರಳುಗಳು, ಊನಕರ್ಣ, ಆನೆ ಕಾಲು ಇತ್ಯಾದಿ. ಇದಲ್ಲದೆ ಹುಟ್ಟಿನಿಂದಲೇ ಬಂದಿರುವ ಸೊಟ್ಟ ಮೂಗು, ಆನೆ ಕಿವಿಗಳು, ಮುಖದ ಮೇಲಿರುವ ಉಬ್ಬು ತಗ್ಗುಗಳು ಸಹ ತಿದ್ದುಪಡಿ ಚಿಕಿತ್ಸೆ ಯಲ್ಲಡಗಿವೆ.

೨) ಹುಟ್ಟಿದ ನಂತರ ಬರಬಹುದಾದ ಗಾಯಗಳು. ಹಲವು ಸಂದರ್ಭಗಳಲ್ಲಿ ಕಾಲಿನ ರಕ್ತನಾಳಗಳು ಊದಿಕೊಂಡು ಕಾಲಿನಲ್ಲಿಯ ರಕ್ತ ಪರಿಚಲನೆಗೆ ತೊಂದರೆಯುಂಟಾಗುತ್ತದೆ ಹಾಗೂ ಕೆಳಗಾಲಿನಲ್ಲಿ ಗಾಯವುಂಟಾಗಿ ಅದು ಆರುವುದಿಲ್ಲ. ಇಂತಹ ಗಾಯಗಳು ಇತರ ಅಪಘಾತಗಳಿಂದಲೂ ಆಗಬಹುದು. ಉದಾ: ರಸ್ತೆಯಲ್ಲಿ ವಾಹನಗಳಿಂದುಂಟಾಗುವ ಅನಾಹುತಗಳು, ಉಟ್ಟ ಬಟ್ಟೆಗೆ ಬೆಂಕಿ ಹತ್ತುವುದರಿಂದುಂಟಾಗಬಹುದಾದ ಗಾಯ ಗಳು. ಇವುಗಳನ್ನು ಗುಣಪಡಿಸಲು ಶರೀರದ ಇತರ ಭಾಗಗಳಿಂದ ತೆಳು ಚರ್ಮ (Split thickness) ವನ್ನು ವಿಶೇಷವಾಗಿ ನಿರ್ಮಿ ಸಿದ ಕತ್ತಿ (Skin grafting knife) ಯಿಂದ ತೆಗೆದು ಗಾಯದ ಮೇಲೆ ಹರಡಿದಲ್ಲಿ ಗಾಯಗಳು ಕಾಲಕ್ರಮೇಣ ಒಣಗುತ್ತವೆ. ಗಾಯಗಳು ರಕ್ತನಾಳದ ಉಬ್ಬುವಿಕೆ ಯಿಂದುಂಟಾದಲ್ಲಿ ತೆಳುಚರ್ಮ ಹಾಸುವುದ ರೊಂದಿಗೆ ತೊಡೆಯಲ್ಲಿ ರಕ್ತನಾಳವನ್ನು ತುಂಡರಿಸಬೇಕಾಗುತ್ತದೆ.

೩. ಪಡಿಗಂತಿಯ ಸಂಪೂರ್ಣ ನಿರ್ಮೂಲ ನವು ಆದರ ಬಾಲ್ಯಾವಸ್ಥೆಯಲ್ಲಿಯೇ ಶಸ್ತ್ರ-ಚಿಕಿತ್ಸೆಯ ಮೂಲಕ ಕಳೆದುಹಾಕುವುದರಿಂದ ಸಾಧ್ಯ. ಹಾಗೆ ಸಂಪೂರ್ಣವಾಗಿ ತೆಗೆದು ಹಾಕಿದ ಭಾಗವನ್ನು ಮುಚ್ಚದಿದ್ದರೆ ಅದು ಅಸಹ್ಯವಾಗಿ ತೋರುವುದು. ಅಂತಹ ಭಾಗದ ಕೊರತೆಯನ್ನು ನೀಗಲು ದಪ್ಪವಾದ ಚರ್ಮವನ್ನು ಹೊಟ್ಟೆ ಅಥವಾ ಶರೀರದ ಭಾಗಗಳಿಂದ ಹಂತಹಂತವಾಗಿ ಊನವಿರುವ ಭಾಗಕ್ಕೆ ತರಬೇಕಾಗುತ್ತದೆ. ಇದಕ್ಕೆ 'Tube pedicale graft' ಎಂದು ಹೆಸರು ಹಾಗೂ ಮಣಿಗಂಟನ್ನು ವಾಹಕವಾಗಿ ಉಪಯೋಗಿಸ ಬೇಕಾಗುತ್ತದೆ.

೪. ನಮ್ಮ ದೇಶದಲ್ಲಿ ಬಹಳ ಹೆಚ್ಚು ಪ್ರಮಾಣದಲ್ಲಿ ಕಂಡುಬರುವ ಕುಷ್ಠರೋಗವು ನರಗಳನ್ನು ಸೇರಿ ಬಲಹೀನಗೊಳಿಸುತ್ತದಲ್ಲದೆ



ವಯಸ್ಸಿಗೆ ಮೀರಿ ಬೆಳೆದ ಸ್ತನಗಳು: a) ಶಸ್ತ್ರ-ಕ್ರಿಯೆಗೆ ಮೊದಲು b) ಅನಂತರ

ಚರ್ಮದ ಹಲವು ಭಾಗಗಳಲ್ಲಿ ಸ್ಪರ್ಶಪ್ರಜ್ಞೆ ಯನ್ನು ಕಳೆದು ಬಿಡುತ್ತದೆ. ಆದುದರಿಂದ ಅಂತಹ ವ್ಯಕ್ತಿಯು ಕೈಯನ್ನು ಸಿಗರೇಟು, ಬೀಡಿ ಅಥವಾ ಬಿಸಿಯಾದ ಪದಾರ್ಥಗಳಿಂದ ಗಾಯಗೊಳಿಸಿಕೊಳ್ಳುತ್ತಾನೆ. ಕ್ರಮೇಣ ಕುಷ್ಠರೋಗಿಯ ಮುಖವು ವಿಕಾರಗೊಂಡು ಸುಕ್ಕುಗಟ್ಟುತ್ತದೆ. ಮೂಗು ಚಪ್ಪಟೆಯಾಗುತ್ತದೆ. ಹುಬ್ಬುಗಳು ಬಿದ್ದುಹೋಗಿ ಕಿವಿಯು ಜೋತು ಬೀಳುತ್ತದೆ. ಕಣ್ಣು ಸಹ ಗಾಯಗಳಿಗೊಳಗಾಗಬಹುದಲ್ಲದೆ ದೃಷ್ಟಿಮಾಂದ್ಯವೂ ಆಗಬಹುದು. ಕೈಗಳ ಮಾಂಸಖಂಡಗಳು ಬಲಹೀನವಾಗಿ ಸ್ಪರ್ಶಜ್ಞಾನ ಶೂನ್ಯವಾಗುವುದರಿಂದ ಅವುಗಳ ಉದ್ದವು ಕಮ್ಮಿಯಾಗುತ್ತಾ ಬರುತ್ತದೆ. ಇಂತಹ ವ್ಯಕ್ತಿಯು ನಳಚರಿತ್ರೆಯ ಕಾರ್ಕೋಟಕನನ್ನು ಹೋಲುತ್ತಾನೆ. ಇಂತಹರು ನೋಡಲು ಅಸಹ್ಯವಾಗಿ ಕಾಣುವುದರಿಂದ ಹೆಚ್ಚಿನವರು ಸಂಸಾರದಿಂದ ಹೊರದೂಡಲ್ಪಟ್ಟು ತಮ್ಮ ದೈನಂದಿನ ಕಾಲಯಾಪನೆಗೆ ಭಿಕ್ಷೆಯನ್ನೇ ಮುಖ್ಯ ವೃತ್ತಿಯನ್ನಾಗಿ ಅವಲಂಬಿಸುತ್ತಾರೆ. ಇಂಥವರನ್ನು ಸಮಾಜ ಪುನಃ ಸ್ವೀಕರಿಸುವಂತೆ ಮಾಡುವುದು ಅಗತ್ಯವಿರುವುದರಿಂದ ತೀಕ್ಷ್ಣ ರೀತಿಯ ಕುಷ್ಠವನ್ನು ಯೋಗ್ಯ ಔಷಧೋಪಚಾರದಿಂದ ನಿಯಂತ್ರಿಸಿದ ನಂತರ ಉಳಿದ ಊನಗಳನ್ನು ಸರ್ಜಿಕ ಶಾಸ್ತ್ರದ ಮೂಲಕ ಸರಿಪಡಿಸಬಹುದು. ಕೈ ಬೆರಳುಗಳನ್ನು ಸರಿಪಡಿಸುವುದಕ್ಕೆ ಬಲಗುಂದದಿರುವ ಮಾಂಸಖಂಡಗಳನ್ನು ಬೆರಳುಗಳಿಗೆ ಜೋಡಿಸಿದಲ್ಲಿ ಅವುಗಳ ಚಲನೆಯು ಉತ್ತಮಗೊಳ್ಳುವುದು. ಇದಕ್ಕೆ Tendon Transfer ಎಂದು ಕರೆಯುತ್ತಾರೆ. (ಸ್ನಾಯು ವರ್ಗಾವಣೆ) ಹಾಗೆಯೇ ಚಪ್ಪಟೆಗೊಂಡ ಮೂಗನ್ನು ಸೊಂಟದ ಕೀಲಿನ 'Ileum' ಎಂಬ ಎಲುಬಿನಿಂದ ತೆಗೆದ ಎಲುಬು ತುಂಡಿನಿಂದ ಎತ್ತಿಹಿಡಿಯಬಹುದು. ಕುಷ್ಠರೋಗದ ಬಗ್ಗೆ ಬರೆಯುವಾಗ ಡಾ. ಪಾಲ್ ಬ್ರ್ಯಾಂಡ್ ಎಂಬ ಸರ್ಜನರ ಹೆಸರನ್ನು ಮರೆಯುವಂತಿಲ್ಲ. ಅವರು ವೆಲ್ಲೂರಿನ ಮಿಶನ್ ಆಸ್ಪತ್ರೆಯಲ್ಲಿ ಕೆಲಸಮಾಡುತ್ತಿದ್ದಾಗ ಕುಷ್ಠರೋಗಿಗಳಿಗೆಂದೇ ಒಂದು ಚಿಕಿತ್ಸಾವಿಭಾಗವನ್ನು ತೆರೆದುದಲ್ಲದೆ, ಇಂಥವರು ರೋಗವನ್ನು ವಾಸಿ ಮಾಡಿಕೊಂಡು ಸಮಾಜಕ್ಕೆ ಹಿಂದಿರುಗಿ ಬಂದು ಸಾಮಾನ್ಯರಂತೆ ಬಾಳಬಹುದೆಂದು ತೋರಿಸಿಕೊಟ್ಟರು. ಪ್ರಪಂಚದ ಸಾವಿರಾರು ಕುಷ್ಠರೋಗಿಗಳ ಜೀವನದ ಅಂಧಕಾರವನ್ನು ಅವರು ಶಾಶ್ವತವಾಗಿ ನೀಗಿಸಿರುತ್ತಾರೆ.

ವಾಹನ ಸೌಕರ್ಯ ಹೆಚ್ಚಿರುವ ಈ ಸಮಯದಲ್ಲಿ ಹಾಗೂ ಬಾಂಬು ಅಥವಾ ಇತರ ಸ್ಫೋಟಕ ವಸ್ತು ಹಾಗೂ ಇಂಧನಗಳ ವಿಸ್ಫೋಟನದಿಂದುಂಟಾಗಬಹುದಾದ ಅಂಗವಿಕಲತೆಯ ಪ್ರಮಾಣ ಹೆಚ್ಚುತ್ತಿದೆ. ಅದರಲ್ಲೂ ಕಾರ್ಮಿಕನಿಗೆ ಕೈಯೇ ಜೀವನಾಧಾರವಾಗಿರುವಾಗ ಅವನ ಕೈಯಲ್ಲಿ ಊನ ಉಂಟಾದರೆ ಇಡೀ ಕುಟುಂಬವೇ ದಿಕ್ಕು ಪಾಲಾಗುವ ಸಂದರ್ಭ ಒದಗೀತು. ಇಂತಹ ಪರಿಸ್ಥಿತಿಯಲ್ಲಿ ಕೈಯಲ್ಲಿ ಆದಷ್ಟು ಭಾಗಗಳನ್ನು ಉಳಿಸುವ ಪ್ರಯತ್ನ ಕೈಗೊಳ್ಳಬೇಕಾಗುತ್ತದೆ. ಹೆಬ್ಬೆರಳು ಮತ್ತು ಇನ್ನೊಂದು ಬೆರಳು ಉಳಿಸಿಕೊಂಡರೂ ಅವು ಚಿವುಟಲಿಕ್ಕೆ ಹಾಗೂ ಬಿಗಿಹಿಡಿತಕ್ಕೆ ಉಪಯೋಗವಾಗುವುವು. ಈ ದಿಸೆಯಲ್ಲಿ ತಿದ್ದುಪಡಿ ಚಿಕಿತ್ಸಕನ ಪಾತ್ರ ಮಹತ್ವದ್ದಾಗಿರುತ್ತದೆ. ಚರ್ಮವು ಅಪಘಾತದಲ್ಲಿ ಹೊರದಬ್ಬಲ್ಪಟ್ಟು, ಸ್ನಾಯುಗಳು, ರಕ್ತನಾಳಗಳು, ಎಲುಬುಗಳು ಹೊರಗೆ ಕಾಣಿಸುತ್ತಿದ್ದರೆ ಅವುಗಳನ್ನು ಕೂಡಲೇ ತೆಳು ಚರ್ಮದಿಂದಾಗಲಿ ದಪ್ಪ ಚರ್ಮದಿಂದಾಗಲಿ ಮುಚ್ಚಬೇಕು. ಪೂರ್ತಿ ದಪ್ಪದ ಚರ್ಮವನ್ನು ಹಂತವಾಗಿ ಹೊಟ್ಟೆಯಿಂದಾಗಲಿ ಶರೀರದ ಇತರ ಭಾಗಗಳಿಂದಾಗಲೀ ತೆಗೆದುಕೊಳ್ಳಬೇಕಾಗುತ್ತದೆ.

ಇದಲ್ಲದೆ ನಮ್ಮ ದೇಶದಲ್ಲಿ ಬಹಳವಾಗಿ ಕಂಡು ಬರುವ ಸುಟ್ಟಗಾಯಗಳ ಚಿಕಿತ್ಸೆಯು ತಿದ್ದುಪಡಿ ಶಸ್ತ್ರಚಿಕಿತ್ಸಕನಿಗೆ ಸೇರಿದುದಾಗಿರುತ್ತದೆ. ನಮ್ಮ ದೇಶದಲ್ಲಿ ಬಹಳಷ್ಟು ಸುಟ್ಟಗಾಯಗಳು ವಾಯಿಲ್, ನೈಲಾನ್, ಟೆರಿಲಿನ್, ನೈಲೆಕ್ಸ್ ಮುಂತಾದ ಕೃತಕ ಬಟ್ಟೆಗಳನ್ನುಟ್ಟುಕೊಂಡು ಒಲೆಯ ಹತ್ತಿರ

ಹೋಗುವುದರಿಂದ ಉಂಟಾಗುತ್ತವೆ. ಒಂದು ಸಲ ಬೆಂಕಿ ಹತ್ತಿಕೊಂಡರೆ ಇಡೀ ಸೀರೆಯು ಬಿಸಿಯಿಂದ ಮೆತ್ತಗಾಗಿ ಶರೀರವನ್ನು ಸುಡುತ್ತದೆ. ಹಾಗೂ ಪ್ರೆಷರ್ ಸ್ಟೌವ್‌ಗಳೂ ಸಹ ಸುಟ್ಟ ಗಾಯಗಳಿಗೆ ಇನ್ನೊಂದು ಕಾರಣವಾಗಿರುತ್ತವೆ. ಹದಮೀರಿ ಗಾಳಿ ಒತ್ತಡ ಹಾಕಿದರೆ ಸೀಮೆ ಎಣ್ಣೆಯು ಭುಗ್ಗೆಂದು ಮುಖದ ಮೇಲೆ ಬೆಂಕಿಯೊಂದಿಗೆ ಹಾರಬಹುದು ಅಥವಾ ಸ್ಟೌವ್ ಒಡೆದು ಹೋಗಿ ಸುಟ್ಟ ಗಾಯಗಳಾಗಬಹುದು. ಸುಟ್ಟ ಗಾಯಗಳು ಇಡೀ ಚರ್ಮವನ್ನು ಸುಟ್ಟಿದ್ದರೆ ಅಂತಹ ಗಾಯ ಆರಲು ಹಲವು ತಿಂಗಳುಗಳಾಗಬಹುದು. ಇದರಿಂದಾಗಿ ಅಂಗವಿಕಲತೆಯಾಗಬಹುದು. ಇದನ್ನು ತಡೆಗಟ್ಟಲು ಇರುವ ಒಂದೇ ಒಂದು ಮಾರ್ಗವೆಂದರೆ ಸುಟ್ಟ ಗಾಯವಾಗಿ ೨-೩ನೇ ವಾರದಲ್ಲಿ ಸುಟ್ಟ ಚರ್ಮವನ್ನು ಕತ್ತರಿಸಿ ತೆಗೆದು ಆ ಭಾಗವನ್ನು ಶರೀರದ ಇತರ ಭಾಗದಿಂದ ತೆಗೆದ ತೆಳು ಚರ್ಮ (Split thickness) ದಿಂದ ಮುಚ್ಚುವುದು. ಇದಕ್ಕೆ Skin grafting ಎಂದು ಹೆಸರು. ತೆಳು ಚರ್ಮವನ್ನು ಹಾಸುಗಳಾಗಿ ತೆಗೆಯಲು ಅದಕ್ಕಾಗಿಯೇ ನಿರ್ಮಿಸಲ್ಪಟ್ಟ Humby's knife ಅನ್ನು ಉಪಯೋಗಿಸಬೇಕಾಗುತ್ತದೆ. ಈ ಶಸ್ತ್ರಕ್ರಿಯೆಯನ್ನು ಸರಿಯಾದ ಸಮಯದಲ್ಲಿ ಉಪಯೋಗಿಸಿದ್ದರೆ ಅದೆಷ್ಟು ಮಂದಿ ಅಂಗವಿಕಲತೆಯಿಂದ ಪಾರಾಗುತ್ತಿದ್ದರೊ! ಹಲವರಂತೂ ಅಂಗವೈಕಲ್ಯದಿಂದಾಗಿ ಹೊಟ್ಟೆ ಪಾಡಿಗೋಸ್ಕರ ಅಂತಿಮ ಮಾರ್ಗವಾಗಿ ಭಿಕ್ಷೆಯನ್ನೇ ಮುಖ್ಯವೃತ್ತಿಯನ್ನಾಗಿ ಅವಲಂಬಿಸಿರುತ್ತಾರೆ.

ವಾಹನ ಅಪಘಾತಗಳು ಹೆಚ್ಚುತ್ತಿರುವ ಈ ಆಧುನಿಕ ಯುಗದಲ್ಲಿ ತಲೆ ಬುರುಡೆಯ ಎಲುಬುಗಳು ಮುರಿಯುವುದು ಸಹಜ. ಹೀಗಾದಾಗ ಅವುಗಳೂ ಸ್ಥಾನಪಲ್ಲಟ ಹೊಂದಿದ್ದರೆ ಆ ಪಾರ್ಶ್ವವು ಪ್ರತ್ಯೇಕವಾಗಿ ತೋರುವುದು ಮತ್ತು ಉಬ್ಬಿರುವುದು. ಹಲ್ಲುಗಳು ಸಹ ಒಂದೇ ಸಾಲಿನಲ್ಲಿರುವುದಿಲ್ಲ. ಕಣ್ಣು ಒಳಗಿಳಿದಂತೆ ಸ್ಥಾನಪಲ್ಲಟಗೊಂಡು ನೋಡುವುದಕ್ಕೆ ಅಸಹ್ಯವಾಗಿರಬಹುದು. ಅಂತಹ ಸ್ಥಾನಪಲ್ಲಟಗೊಂಡ ಎಲುಬುಗಳನ್ನು ಸರಿಯಾದ ಸ್ಥಾನದಲ್ಲಿರಿಸಿ ಅವುಗಳನ್ನು ಉಕ್ಕಿನ ತಂತಿಗಳ ಮುಖಾಂತರ ಭದ್ರವಾಗಿ ಹಿಡಿದಿರಿಸುವುದರಿಂದ ಅವುಗಳ ಜೋಡಣೆಯು ಸುಲಭವಾಗುತ್ತದೆ. ಈ ದಿಸೆಯಲ್ಲಿಯೂ ತಿದ್ದುಪಡಿ ಶಸ್ತ್ರಚಿಕಿತ್ಸಕನು ಪ್ರಮುಖ ಪಾತ್ರ ವಹಿಸುತ್ತಾನೆ. ಮುಖದ ಎಲುಬುಗಳನ್ನು ಸರಿಯಾದ ಸ್ಥಳದಲ್ಲಿ ಇರಿಸುವುದರಿಂದ ಮುಖವು ಸೊಟ್ಟಾಗುವುದಿಲ್ಲ.

ಮಹಿಳೆಯರಿಗೆ ೧೮-೨೫ ವರ್ಷ ವಯಸ್ಸು ಪ್ರಾಪ್ತವಾದಾಗ ಅವರ ಶರೀರದ ಬೆಳವಣಿಗೆಯೊಂದಿಗೆ ಅವರ ಸ್ತನಗಳೂ ಅದೇ ಪ್ರಮಾಣದಲ್ಲಿ ಬೆಳೆಯಬೇಕು. ಆದರೆ ಹಲವು ಹಾರ್ಮೋನುಗಳ ಅಸಮತೆಯಿಂದಾಗಿ ಸ್ತನಗಳ ಬೆಳವಣಿಗೆಯಾಗದಿರಬಹುದು. ಸರಿಯಾಗಿ ಬೆಳೆಯದೆ ಜೋತು ಬಿದ್ದ ಸ್ತನಗಳು ಮಹಿಳೆಯರ ಮನಸ್ಸಿನ ಮೇಲೆ ವಿಪರೀತ ಪರಿಣಾಮ ಬೀರಿ ಮಾನಸಿಕ ರೋಗಕ್ಕೆ ಕಾರಣವಾಗಬಹುದು. ಅಂತಹ ಮಹಿಳೆಯು ಮದುವೆಯಾಗದೆಯೇ ಉಳಿಯುವ ಸಂದರ್ಭಗಳೂ ಇವೆ. ಇಂತಹ ಬೆಳೆಯದ ಸ್ತನಗಳನ್ನು ಮುಂಬರಿಸುವುದಕ್ಕೆ ಪಾಶ್ಚಾತ್ಯ ದೇಶಗಳಲ್ಲಿ ತೆಳುವಾದ ಸೈಲಾಸ್ಟಿಕ್ (Silastic) ಚೀಲಗಳು ದೊರೆಯುತ್ತವೆ. ಇವುಗಳನ್ನು ಶಸ್ತ್ರಚಿಕಿತ್ಸೆಯ ಮೂಲಕ ಸ್ತನದ ಹಿಂಬದಿಯಲ್ಲಿರಿಸಿ ಸಿಲಿಕೋನ್ ಜೆಲ್ (Siliconegel) ನಿಂದ ಅಥವಾ ನೀರಿನಿಂದ ತುಂಬಬಹುದು ಹಾಗೂ ಬೇಕಾದ ಅಳತೆಯ ಸ್ತನಗಳನ್ನು ಮಹಿಳೆಯರಿಗೆ ಒದಗಿಸಬಹುದು. ಇತ್ತೀಚೆಗಿನ ದಿವಸಗಳಲ್ಲಿ ಅಳತೆಗೆ ತಯಾರಿಸಿದ ಸಿಲಿಕೋನ್ ಜೆಲ್ ಇಮ್‌ಪ್ಲಾಂಟ್ (Siliconegel implant) ಗಳು ದೊರೆಯುತ್ತಿವೆ. ಅವು ತುಂಬಾ ಸ್ವಾಭಾವಿಕ ಹಾಗೂ ಮೆದುವಾಗಿರುತ್ತವೆ. ಇದಲ್ಲದೆ ವಯಸ್ಸಿಗೆ ಮೀರಿ ಬೆಳೆದ ಸ್ತನಗಳನ್ನು ಹದನಾದ ಅಳತೆಗೆ ತರುವುದಕ್ಕೂ, ವಯಸ್ಸಿನೊಂದಿಗೆ ಜೋತು ಬಿದ್ದ ಸ್ತನಗಳನ್ನು ಮೇಲೆತ್ತಿ ಮುಂದೂಡಿಸಲಿಕ್ಕೂ ರೆ

ಸರೂಪಿಕ ಶಸ್ತ್ರ ಚಿಕಿತ್ಸಕನಿಗೆ ಸಾಧ್ಯವಿರುತ್ತದೆ.

ಸಿಡುಬು ರೋಗದಿಂದಾಗಿ ಮುಖವಿಡೀ ಗುಳಿ ಬಿದ್ದ ಕಲೆಗಳು ಶಾಶ್ವತವಾಗಿ ಉಳಿಯುತ್ತವೆ. ಈ ಕಲೆಗಳು ನೋಡಲು ಅಸಹ್ಯವಾಗಿರುತ್ತವೆ. ಇಂತಹ ಕಲೆಗಳನ್ನು 'Dermabrasion' ಎಂಬ ಶಸ್ತ್ರಕ್ರಿಯೆಯಿಂದ ಆಚಾರಿಯು ಮರಕ್ಕೆ ಕೀಸುಳಿ ಇಟ್ಟು ಮರುಳು ಕಾಗದದಿಂದ ಒರೆಸಿ ನುಣುಪುಗೊಳಿಸುವಂತೆ ಸ್ವರೂಪಿಕ ಚಿಕಿತ್ಸಕನು ನುಣುಪುಗೊಳಿಸುತ್ತಾನೆ. ಈಗ ವಿದ್ಯುತ್ ಚಾಲಿತ ಚರ್ಮ ಕೀಸುಳಿಗಳು (Dermabrador) ಬಳಕೆಯಲ್ಲಿವೆ. ಆದರೆ ಇವುಗಳ ಪ್ರಯೋಗವನ್ನು ನುರಿತವರೇ ಮಾಡಬೇಕು. ಇಲ್ಲದಲ್ಲಿ ಶಸ್ತ್ರಚಿಕಿತ್ಸೆಯಿಂದ ಆಗುವ ಗಾಯವು ಮುಖವನ್ನು ಮೊದಲಿಗಿಂತ ಹೆಚ್ಚು ವಿರೂಪಗೊಳಿಸಬಹುದು.

ಕೆಲವು ಮಕ್ಕಳು ಹುಟ್ಟಿನಲ್ಲಿಯೇ ಗಂಡು ಮತ್ತು ಹೆಣ್ಣಿನ ಎರಡೂ ಲಿಂಗಾಂಗಳುಳ್ಳವಾಗಿರುತ್ತವೆ. True Hermaphroditism ಅಥವಾ ಹೊರ ಅಂಗಾಂಗಗಳ ಬೆಳವಣಿಗೆಯ ವೈಪರೀತ್ಯ ಹುಟ್ಟಿದ ಮಗುವಿನ ಲಿಂಗವನ್ನು ಎಣಿಸಿ ಹಾಗೆಯೇ ಬೆಳೆಸಿಕೊಂಡು ಬಂದಿರುತ್ತಾರೆ. ಇಂತಹ ಮಕ್ಕಳು ಸರೂಪಿಕ ಶಸ್ತ್ರ ಚಿಕಿತ್ಸಕನ ಕುಶಲತೆಯಿಂದ ಯಾವುದಾದರೊಂದು ಲಿಂಗಕ್ಕೆ ಮಾರ್ಪಡಿಸಲ್ಪಟ್ಟು ಸಮಾಜದಲ್ಲಿ ಮುಂದುವರಿಯಲಿಕ್ಕೆ ಅರ್ಹರಾಗುತ್ತಾರೆ. ಇತ್ತೀಚೆಗೆ ಪಾಶ್ಚಾತ್ಯ ದೇಶಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ನಡೆಯುತ್ತಿರುವ ಲಿಂಗಪರಿವರ್ತನೆಯ ಶಸ್ತ್ರಕ್ರಿಯೆಗಳು ಇದಕ್ಕೆ ಒಂದು ನಿದರ್ಶನವಾಗಿರುತ್ತದೆ.

ಪಾಶ್ಚಾತ್ಯ ಜಗತ್ತಿನಲ್ಲಿ ಮಹಿಳೆಯ ವಯಸ್ಸು ಹೆಚ್ಚಿದಂತೆ ಅವಳ ಕೆಲಸಕ್ಕೆ ಚ್ಯುತಿ ಬರಬಹುದು ಅಥವಾ ಗಂಡಂದಿರು ವಿವಾಹ ವಿಚ್ಛೇದನ ಪಡೆಯುವ ಸಾಧ್ಯತೆ ಇದೆ. ಆದುದರಿಂದ ಮಹಿಳೆಯು ತಿದ್ದುಪಡಿ ಚಿಕಿತ್ಸಕನ ಮೊರೆಹೋಗುತ್ತಾಳೆ. ಸರೂಪಿಕ ಶಸ್ತ್ರಕ್ರಿಯೆಯಿಂದಾಗಿ ಸುಕ್ಕುಬಿದ್ದು ಸಡಿಲಗೊಂಡ ಮುಖದ ಚರ್ಮವನ್ನು ಬಿಗಿಯಾಗಿಸಿ (face lift-operation) ಕೊಳ್ಳುತ್ತಾರೆ. ಅಲ್ಲದೆ ಶರೀರ ಶಿಲ್ಪಶಾಸ್ತ್ರ (Body sculpturing) ವೆಂಬ ಉಪವಿಭಾಗವು ಹದಮೀರಿ ಬೆಳೆದ ಹೊಟ್ಟೆಯ ಹಾಗೂ ಪೃಷ್ಠಗಳ ಕೊಬ್ಬನ್ನು ಅಥವಾ ಸಡಿಲವಾಗಿ ಜೋತುಬಿದ್ದಿರುವ ಕೈಯ ಜೋಲುಗಳನ್ನು ತೆಗೆದು ಮಹಿಳೆಯಂತ ವಯಸ್ಸು ಕಡಿಮೆಯಾದಂತೆ ತೋರಿಸುವಲ್ಲಿ ಯಶಸ್ವಿಯಾಗಿದೆ.

ಬೊಚ್ಚುತಲೆಯವರು ಇನ್ನು ಮುಂದೆ ಹತಾಶರಾಗಬೇಕಾಗಿಲ್ಲ. ಹೆಚ್ಚು ಕೂದಲಿರುವ ಪಾರ್ಶ್ವಗಳಿಂದ ಕೂದಲುಗಳನ್ನು ಬೇರುಸಮೇತ ತೆಗೆದು ಅದನ್ನು ಮುಂದಲೆಗೆ ಕಸಿ ಮಾಡಿದಲ್ಲಿ (hair grafting) ಕ್ರಮೇಣ ಕೂದಲು ತಲೆಯ ಮೇಲ್ಭಾಗದಲ್ಲಿ ಬೆಳೆಯುವ ಸಾಧ್ಯತೆ ಇದೆ.

ಜಪಾನಿ ಮಹಿಳೆಯರಿಗೆ ಕಣ್ಣುಗಳು ಓರೆಯಾಗಿರುತ್ತವೆ. ಹಾಗೂ ಮೂಗು ಚಪ್ಪಟೆಯಾಗಿರುತ್ತದೆ. ಜಪಾನೀಯರು ಪಾಶ್ಚಾತ್ಯ ದೇಶದವರನ್ನು ಹೆಚ್ಚು ಹೆಚ್ಚಾಗಿ ಅನುಕರಿಸುತ್ತಿರುವಂತೆಯೇ ತಮ್ಮ ಕಣ್ಣುಗಳನ್ನು ನೇರ ಮಾಡಿಸಲು ಹಾಗೂ ಮೂಗನ್ನು ಚೂಪಾಗಿ ಮಾಡಿಸಿಕೊಳ್ಳಲು ತಿದ್ದುಪಡಿ ಶಸ್ತ್ರಚಿಕಿತ್ಸಕನ ಮೊರೆಹೋಗುತ್ತಾರೆ. ಅಂತೂ ಇವೆಲ್ಲವನ್ನೂ ಪರಿಶೀಲಿಸಿದಲ್ಲಿ ಒಂದು ವಿಷಯವು ಸ್ಪಷ್ಟವಾಗುತ್ತದೆ. ಸರೂಪಿಕ ಶಸ್ತ್ರಚಿಕಿತ್ಸಕನು ಕೇವಲ ಶಸ್ತ್ರಚಿಕಿತ್ಸಕನಲ್ಲ, ಅವನೊಬ್ಬ ಕಲಾವಿದನೂ ಆಗಿದ್ದಾನೆ, ಆಗಿರಬೇಕಾಗುತ್ತದೆ.

ಅಂದ ಮಾತ್ರಕ್ಕೆ ಅವನು ನ್ಯೂನತೆಗಳನ್ನು ಸಂಪೂರ್ಣವಾಗಿ ಅಳಿಸಿ ಮುಖಕ್ಕೆ ಅಥವಾ ಇತರ ಭಾಗಗಳಿಗೆ ಸಂಪೂರ್ಣ ಸ್ವಾಭಾವಿಕತನವನ್ನು ಕೊಡಲಾರ. ಆದರೆ ವಸ್ತುಸ್ಥಿತಿಯನ್ನು ಶೇಕಡಾ ೭೦-೮೦ ರಷ್ಟು ಉತ್ತಮಗೊಳಿಸಬಲ್ಲ. ✡



# ಸಾಗರದಿಂದ ವಿದ್ಯುತ್ತು

ಪ್ರೊ. ಸ. ಅನಂತಸ್ವಾಮಿ

ನಾಗರಿಕತೆ ಬೆಳೆದಂತೆ ವಿಶ್ವದ ಎಲ್ಲ ದೇಶಗಳಲ್ಲೂ ಔದ್ಯೋಗೀಕರಣ ಭರದಿಂದ ಸಾಗಿದೆ. ಇದಕ್ಕಾಗಿ ಬೇಕಾದ ಸಾಧನಗಳಲ್ಲಿ ವಿದ್ಯುಚ್ಛಕ್ತಿಯೂ ಬಹು ಮುಖ್ಯವಾದದ್ದು. ಮಾನವಸಾಧ್ಯವಾದ ಎಲ್ಲ ಮಾರ್ಗಗಳಿಂದಲೂ ಈ ವಿದ್ಯುತ್ತನ್ನು ಉತ್ಪಾದಿಸಲು ಪ್ರಯತ್ನ ನಡೆದಿದೆ. ಕಲ್ಲಿದ್ದಲು, ತೈಲ ಮತ್ತು ಜಲಪಾತಗಳಿಂದ ವಿದ್ಯುತ್ತನ್ನು ತಯಾರಿಸುವುದು ಸಾಮಾನ್ಯ ಮಾರ್ಗಗಳು. ಭೂಗರ್ಭೋಷ್ಣ, ಅಣುಶಕ್ತಿ ಮತ್ತು ಸಮುದ್ರದ ಉಬ್ಬರವಿಳಿತದಿಂದಲೂ ಸಹ ವಿದ್ಯುತ್ಪಾದನೆ ಸಾಧ್ಯ.

೧೧ ನೇ ಶತಮಾನದಲ್ಲಿಯೇ ಉಬ್ಬರವಿಳಿತಗಳಿಂದ ಯಾಂತ್ರಿಕ ಶಕ್ತಿಯನ್ನು ಪಡೆಯಲು ಪ್ರಯತ್ನ ನಡೆಯಿತು. ಇದಕ್ಕಾಗಿ ಜಲಚಕ್ರ (water wheel)ಗಳನ್ನು ಉಪಯೋಗಿಸಲಾಯಿತು. ಏರಿಳಿತಗಳಿಂದ ವಿದ್ಯುತ್ತನ್ನು ತಯಾರಿಸಲು ಟರ್ಬೈನು (turbine)ಗಳನ್ನು ೧೯ನೇ ಶತಮಾನದ ಉತ್ತರಾರ್ಧದಲ್ಲಿ ಮೊದಲಬಾರಿಗೆ ಬಳಸಲಾಯಿತು. ೧೯೧೩ ರಲ್ಲಿ ಉತ್ತರ ಜರ್ಮನಿಯಲ್ಲಿರುವ ಹೂಸಂ ಎಂಬ ಊರಿನ ಬಳಿ ಉತ್ತರ ಸಮುದ್ರ (North Sea)ದ ದಂಡೆಯಲ್ಲಿ ಈ ರೀತಿಯ ಪ್ರಾಯೋಗಿಕ ವಿದ್ಯುದಾಗಾರವನ್ನು ನಿರ್ಮಿಸಲಾಯಿತು. ಅಲ್ಲಿಂದೀಚೆಗೆ ಈ ರೀತಿಯ ವಿದ್ಯುದಾಗಾರಗಳ ಸಂಖ್ಯೆ ಬೆಳೆಯುತ್ತಿವೆ.

ಚಂದ್ರಗ್ರಹವು ಪೃಥ್ವಿಯ ಸುತ್ತ ತನ್ನ ಕಕ್ಷೆಯಲ್ಲಿ ತಿರುಗುತ್ತಾ ಪೃಥ್ವಿಯ ಹತ್ತಿರ ಬಂದಾಗ ಚಂದ್ರ ಮತ್ತು ಪೃಥ್ವಿಯ ಗುರುತ್ವಾಕರ್ಷಣೆಯಿಂದ ಈ ಏರಿಳಿತಗಳು ದಿನದಲ್ಲಿ ಎರಡು ಬಾರಿ ಉಂಟಾಗುತ್ತವೆ. ಇದರಿಂದ ಸಮುದ್ರದಲ್ಲಿ ಕೆಲವು ವೇಳೆ ೧೫ ಮೀಟರುಗಳಿಂದಲೂ ದೊಡ್ಡದಾದ ಉಬ್ಬರವಿಳಿತ ನಿರ್ಮಾಣವಾಗುತ್ತದೆ. ಏರಿಳಿತದ ಈ ನೀರಿನ ಮಟ್ಟವನ್ನು ಉಪಯೋಗಿಸಿಕೊಂಡು ವಿದ್ಯುತ್ತನ್ನು ವಿದ್ಯುದಾಗಾರಗಳಲ್ಲಿ ತಯಾರಿಸಬಹುದು. ಇದಕ್ಕಾಗಿ ಬೇಕಾದ ನೀರಿನ ಪಾತ್ರವು ಸಮುದ್ರದಿಂದ ಬೇರೆಯಾಗಿದ್ದು ಸಾಕಷ್ಟು ಆಳ ಮತ್ತು ವಿಸ್ತಾರವಾಗಿರಬೇಕು. ಪಾತ್ರದಲ್ಲಿ ಸಣ್ಣ ಸಣ್ಣ ದ್ವೀಪಗಳಿದ್ದರೆ ಅನುಕೂಲ. ಈ ದ್ವೀಪಗಳನ್ನು ಸೇರಿಸಿ ಅಣೆಕಟ್ಟನ್ನು ನಿರ್ಮಿಸುವುದರಿಂದ ಖರ್ಚು ಎಷ್ಟೋ ಉಳಿತಾಯವಾಗಬಹುದು. ಪಾತ್ರಕ್ಕೂ ಸಮುದ್ರಕ್ಕೂ ನಡುವೆ ಬರುವ ಈ ಅಣೆಕಟ್ಟಿನಲ್ಲಿಯೇ ವಿದ್ಯುದಾಗಾರವನ್ನು ಮತ್ತು ತೂಬು (Sluice gate)ಗಳನ್ನೂ ಅಳವಡಿಸಬಹುದು (ಚಿತ್ರ ೧).




ಚಿತ್ರ ೧

ಏರಿಳಿತಗಳ ವಿದ್ಯುದಾಗಾರಗಳನ್ನು ಕೆಳಗೆ ಕಂಡಂತೆ ತಾಂತ್ರಿಕವಾಗಿ ವಿಂಗಡಿಸಬಹುದು :

೧) ಏಕ-ಪಾತ್ರ ವಿದ್ಯುದಾಗಾರ.

೨) ದ್ವಿ ಪಾತ್ರ ವಿದ್ಯುದಾಗಾರ.

ನೀರನ್ನು ಟರ್ಬೈನುಗಳ ಮೂಲಕ ಸಮುದ್ರಕ್ಕೆ ಬಿಡಲಾಗುವುದು. ಪಾತ್ರದ ನೀರು ಸಮುದ್ರಕ್ಕೆ ಹಿಂತಿರುಗಿ ಹರಿಯುವುದರಿಂದ ಪಾತ್ರದ ನೀರಿನ ಮಟ್ಟವೂ ಕಡಿಮೆಯಾಗುವುದು.




ಈ ಪದ್ಧತಿಗಳನ್ನು ಈಗ ಸ್ಥೂಲವಾಗಿ ಪರಿಶೀಲಿಸೋಣ.

**ಏಕ-ಇಳಿತ-ಚಕ್ರ ಪದ್ಧತಿ** (Single ebb-cycle system) ಚಿತ್ರ ೧ ರಲ್ಲಿ, ಸಮುದ್ರದ ನೀರಿನ ಮತ್ತು ಪಾತ್ರ (basin)ದ ನೀರಿನ ಮಟ್ಟಗಳು ಕಾಲಕ್ಕನುಗುಣವಾಗಿ ಯಾವ ರೀತಿ ಬದಲಾಗುತ್ತವೆ ಎಂಬುದನ್ನು ನಿರೂಪಿಸಲಾಗಿದೆ. ಸಮುದ್ರದ ಮಟ್ಟ ಪಾತ್ರದ ನೀರಿನ ಮಟ್ಟಕ್ಕಿಂತ ಹೆಚ್ಚಾಗಿ ಏರಿದಂತೆ ಸಮುದ್ರದ ನೀರು ತೂಬುಗಳ ಮೂಲಕ ಪಾತ್ರದೊಳಗೆ ಹರಿದು ಪಾತ್ರದ ನೀರಿನ ಮಟ್ಟವೂ ಏರುತ್ತಾ ಹೋಗುವುದು. ಇದನ್ನು 'ತೂಬುವಿಕೆ' (Sluicing) ಎಂದು ಕರೆಯೋಣ. ಕಾಲಕ್ರಮೇಣ ಸಮುದ್ರದ ಮಟ್ಟವು ಇಳಿಯಲಾರಂಭಿಸುವುದು. ಪಾತ್ರದ ನೀರು ಮೇಲ್ಪಟ್ಟದಲ್ಲಿದ್ದು ಇದರ ಮಟ್ಟಕ್ಕೂ ಇಳಿಯುತ್ತಿರುವ ಸಮುದ್ರಮಟ್ಟಕ್ಕೂ ಅಂತರ ಸಾಕಷ್ಟು ಹೆಚ್ಚುತ್ತಾ ಕನಿಷ್ಠ ಅಂತರ (minimum head) ವನ್ನು ತಲುಪಿದಾಗ, ಪಾತ್ರದ

ಆದರೆ ಸಮುದ್ರದ ಮಟ್ಟ ಇದಕ್ಕಿಂತ ವೇಗವಾಗಿ ಇಳಿಯುವುದರಿಂದ ವಿದ್ಯುತ್ಪಾದನೆಗೆ ಬೇಕಾದ ಮಟ್ಟದ ಅಂತರ ಹೆಚ್ಚುತ್ತಾ ಹೋಗಿ ವಿದ್ಯುದುತ್ಪಾದನೆಗೆ ಸಹಾಯವಾಗುವುದು. ಕಾಲಕ್ರಮೇಣ ಸಮುದ್ರದ ಉಬ್ಬರ ಆರಂಭವಾಗಿ ಅದರ ನೀರಿನ ಮಟ್ಟ ಪುನಃ ಏರಲಾರಂಭಿಸುವುದು. ಇದರಿಂದ ನೀರಿನ ಮಟ್ಟಗಳ ಅಂತರ ಕಡಿಮೆಯಾಗುತ್ತಾ ಟರ್ಬೈನುಗಳನ್ನು ನಡೆಸಲು ಅವಶ್ಯಕವಾದ ಕನಿಷ್ಠ ಅಂತರ ತಲುಪಿದಾಗ ಟರ್ಬೈನುಗಳನ್ನು ನಿಲ್ಲಿಸಲಾಗುವುದು. ಇದಕ್ಕಿಂತ ಕಡಿಮೆ ಅಂತರದಿಂದ ಟರ್ಬೈನುಗಳನ್ನು ನಡೆಸಲು ಸಾಧ್ಯವಿಲ್ಲ.

ಪುನಃ ಸಮುದ್ರದ ಮಟ್ಟ ಏರುತ್ತಾ ಪಾತ್ರದ ಮಟ್ಟಕ್ಕಿಂತ ಹೆಚ್ಚಲು ಆರಂಭವಾದಾಗ ತೂಬುಗಳನ್ನು ಪುನಃ ತೆಗೆದು ಪಾತ್ರಕ್ಕೆ ನೀರನ್ನು ತುಂಬಲಾಗುವುದು. ಈ ರೀತಿಯಲ್ಲಿ ಚಕ್ರವು (cycle) ಮತ್ತೆ ಆರಂಭವಾಗುವುದು.

ಈ ಪದ್ಧತಿಯಲ್ಲಿ ಸಮುದ್ರದ ಇಳಿತ ಕಾಲದಲ್ಲಿ ವಿದ್ಯುತ್ತಿನ ಉತ್ಪಾದನೆ ಆಗುವುದ

ರಿಂದ ಇದಕ್ಕೆ 'ಏಕ— ಇಳಿತ— ಚಕ್ರ ಪದ್ಧತಿ' ಎಂದು ಹೆಸರಿಡಲಾಗಿದೆ.

**ಏಕ— ಏರು— ಚಕ್ರ ಪದ್ಧತಿ** (Single tide—cycle system): (ಚಿತ್ರ ೨). ಈ ಪದ್ಧತಿಯಲ್ಲಿ ಸಮುದ್ರದಲ್ಲಿ ಉಬ್ಬರ ವಿದ್ದಾಗ ವಿದ್ಯುತ್ತನ್ನು ಉತ್ಪಾದಿಸಲಾಗುವುದು. ಉಬ್ಬರ ಆರಂಭವಾದಾಗ ಪಾತ್ರದ ನೀರಿನ ಮಟ್ಟ ಸಾಕಷ್ಟು ಕೆಳಗಿರುವುದರಿಂದ ಸಮುದ್ರದ ನೀರನ್ನು ತಿರ್ಬಾನುಗಳ ಮೂಲಕ ಪಾತ್ರದೊಳಗೆ ಬಿಡಲಾಗುವುದು. ಇದರಿಂದ ಪಾತ್ರದ ನೀರಿನ ಮಟ್ಟ ಏರುವುದ ಲ್ಲದೆ ವಿದ್ಯುತ್ಪಾದನೆಯೂ ಆಗುವುದು. ಕಾಲ ಕ್ರಮೇಣ ಸಮುದ್ರದ ಇಳತ ಆರಂಭವಾಗಿ ಎರಡು ನೀರಿನ ಮಟ್ಟಗಳು ಕನಿಷ್ಠ ಅಂತರ ವನ್ನು ತಲುಪಿದಾಗ ತಿರ್ಬಾನುಗಳನ್ನು ನಿಲ್ಲಿಸಲಾಗುವುದು. ಸಮುದ್ರದ ಮಟ್ಟ ವೇಗದಿಂದ ಇನ್ನೂ ಇಳಿಯಲಾರಂಭಿಸಿ ಪಾತ್ರದ ನೀರಿನ ಮಟ್ಟಕ್ಕಿಂತ ಕಡಿಮೆಯಾದಾಗ ತೂಬುಗಳನ್ನು ತೆರೆದು ಪಾತ್ರದ ನೀರನ್ನು ಸಮುದ್ರಕ್ಕೆ ಹಿಂತಿರುಗಿ ಬಿಡಲಾಗುವುದು. ಇದರಿಂದ ಪಾತ್ರದ ನೀರಿನ ಮಟ್ಟವು ಸಹ ಕೆಳಗೆ ಇಳಿಯುವುದು. ಎರಡು ನೀರಿನ ಮಟ್ಟಗಳು ಈ ರೀತಿ ಇಳಿಯಲಾರಂಭಿಸಿ ಪುನಃ ಉಬ್ಬರ ಆರಂಭವಾದಾಗ ಎರಡು ಮಟ್ಟಗಳು ಒಂದು ಸಮಯದಲ್ಲಿ ಸಮನಾಗುವವು. ಅನಂತರ ಸಮುದ್ರದ ಮಟ್ಟವು ವೇಗದಿಂದ ಏರಲಾರಂಭಿಸುವುದು. ಮಟ್ಟಗಳ ಕನಿಷ್ಠ ಅಂತರ ತಲುಪಿದಾಗ ತಿರ್ಬಾನುಗಳ ಮೂಲಕ ಸಮುದ್ರದ ನೀರನ್ನು ಪಾತ್ರದೊಳಗೆ ಬಿಟ್ಟು ವಿದ್ಯುತ್ತನ್ನು ಉತ್ಪಾದಿಸಲಾಗುವುದು. ಸಮುದ್ರವು ಉಬ್ಬರದಲ್ಲಿ ದಲ್ಲಿದ್ದಾಗ ವಿದ್ಯುತ್ತನ್ನು ಉತ್ಪಾದಿಸುವುದರಿಂದ ಇದಕ್ಕೆ 'ಏಕ— ಏರು— ಚಕ್ರ ಪದ್ಧತಿ' ಎಂದು ಕರೆಯಲಾಗಿದೆ.

ಎರಡು ಪದ್ಧತಿಗಳಲ್ಲೂ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಸಮುದ್ರದ ಮಟ್ಟವು ಪಾತ್ರದ ನೀರಿನ ಮಟ್ಟಕ್ಕಿಂತ ವೇಗವಾಗಿ ಏರುವುದು ಹಾಗೂ ಇಳಿಯುವುದು.

**ಏಕ—ಪಾತ್ರ ದ್ವಿಚಕ್ರ ಪದ್ಧತಿ**

(Single basin double cycle system) (ಚಿತ್ರ ೩)

ಈ ಪದ್ಧತಿಯಲ್ಲಿ ಸಮುದ್ರವು ಉಬ್ಬರದಲ್ಲಿದ್ದಾಗಲೂ ಹಾಗೂ ಇಳಿತದಲ್ಲಿದ್ದಾಗಲೂ ಒಂದೇ ಪಾತ್ರವನ್ನು ಉಪಯೋಗಿಸಿ ಇಳಿತ— ಚಕ್ರ ಹಾಗೂ ಏರು— ಚಕ್ರಗಳಲ್ಲಿ ಮೇಲ್ಕಂಡಂತೆ ವಿದ್ಯುತ್ತನ್ನು ಉತ್ಪಾದಿಸುವುದರಿಂದ ಇದಕ್ಕೆ ಹೀಗೆ ಹೆಸರಿಡಲಾಗಿದೆ.

ಏಕ– ಏರು– ಚಕ್ರ ಮತ್ತು ಏಕ– ಇಳಿತ– ಚಕ್ರಗಳಲ್ಲಿ ಕೆಳಗೆ ಕಂಡಂತೆ ಕೆಲವು ನ್ಯೂನತೆಗಳಿವೆ.

೧) ಇಳಿತ– ಚಕ್ರ ಅಥವಾ ಏರು– ಚಕ್ರ ಒಂದನ್ನೇ ಉಪಯೋಗಿಸಿದಲ್ಲಿ ವಿದ್ಯುದುತ್ಪಾದನೆಯಲ್ಲಿ ಮತ್ತು ತಿರ್ಬಾನುಗಳ ನಿಲ್ಲುವಿಕೆ



ಚಿತ್ರ ೨

ಯಲ್ಲಿನ ಅಂತರ ಸುಮಾರು ೬ ತಾಸುಗಳಷ್ಟು ಇದ್ದು ಈ ವೇಳೆಯಲ್ಲಿ ತಿರ್ಬಾನುಗಳನ್ನೂ ಹಾಗೂ ವಿದ್ಯುದುತ್ಪಾದನೆಯನ್ನು ನಿಲ್ಲಿಸಬೇಕಾಗುವುದು. ಇದರಿಂದ ವಿದ್ಯುದುತ್ಪಾದನೆ ಅವಿಚ್ಛಿನ್ನವಾಗಿರಲು ಸಾಧ್ಯವಿಲ್ಲ ಮತ್ತು ಒಟ್ಟು ವಿದ್ಯುತ್ಪಾದನೆಯ ಪ್ರಮಾಣ ಕಡಿಮೆಯಾಗುವದು.

೨) ತಿರ್ಬಾನುಗಳನ್ನು ಸತತವಾಗಿ ನಡೆಸಲಾಗದೆ ನಿಲ್ಲಿಸಿ ನಿಲ್ಲಿಸಿ ನಡೆಸುವುದು ಅನಿವಾರ್ಯವಾಗುವುದು.

ಏಕ-ಪಾತ್ರ- ದ್ವಿಚಕ್ರ- ಪದ್ಧತಿಯಲ್ಲಿ ಎರಡನೆಯ ನ್ಯೂನತೆ ಇದ್ದರೂ ನಿಲ್ಲುವಿಕೆ ಮತ್ತು ಚಾಲನೆಗಳ ಕಾಲಾಂತರ ಕಡಿಮೆಯಾಗಿದ್ದು ಒಟ್ಟು ವಿದ್ಯುತ್ಪಾದನೆ ಹೆಚ್ಚುವುದು ವುದು ಮತ್ತು ಹೆಚ್ಚು ಸತತವಾಗಿರುವುದು ಎನ್ನಬಹುದು. ವಿಶೇಷ ವ್ಯವಸ್ಥೆ ಇಲ್ಲದಿದ್ದರೆ ಈ ಪದ್ಧತಿಯಲ್ಲಿ ತಿರ್ಬಾನುಗಳು ಎರಡು ದಿಕ್ಕಿನಲ್ಲಿಯೂ ತಿರುಗಬೇಕಾಗುವುದು.

**ಪರ್ಯಾಯ-ದ್ವಿಪಾತ್ರ- ಪದ್ಧತಿ** (System of alternately operating basins) (ಚಿತ್ರ ೪);

ಈ ಪದ್ಧತಿಯಲ್ಲಿ ಎರಡು ಪಾತ್ರಗಳಿದ್ದು ಪ್ರತಿಯೊಂದು ಪಾತ್ರದಲ್ಲಿಯೂ ಬೇರೆ ಬೇರೆ ತಿರ್ಬಾನು ತಂಡಗಳ ಎರಡು ವಿದ್ಯುದಾಗಾರಗಳು ಇರುವವು. ೧ನೇ ಪಾತ್ರದ ತಿರ್ಬಾನುಗಳು ಇಳಿತದಲ್ಲಿಯೂ (ಇಳಿತ- ಚಕ್ರ) ೨ ನೇ ಪಾತ್ರದ ತಿರ್ಬಾನುಗಳು ಉಬ್ಬರದಲ್ಲಿಯೂ (ಏರು- ಚಕ್ರ) ವಿದ್ಯುತ್ತನ್ನು ತಯಾರಿಸುವವು ಅಂದರೆ ೧ನೇ ಪಾತ್ರದಿಂದ ಕೇವಲ ಇಳಿತದಲ್ಲಿಯೂ ೨ನೇ ಪಾತ್ರದಿಂದ ಕೇವಲ ಉಬ್ಬರದಲ್ಲಿಯೂ ವಿದ್ಯುತ್ತನ್ನು ತಯಾರಿಸಲಾಗುವುದು. ಪ್ರತಿಯೊಂದು ಪಾತ್ರದಿಂದ ಸತತವಾಗಿ ವಿದ್ಯುತ್ತನ್ನು ತಯಾರಿಸದಿದ್ದರೂ ಎರಡು ಪಾತ್ರಗಳಿಂದ ಒಟ್ಟಿಗೆ ಸತತವಾಗಿ ವಿದ್ಯುತ್ತನ್ನು ತಯಾರಿಸಲು ಈ ಪದ್ಧತಿಯಲ್ಲಿ ಸಾಧ್ಯವಿದೆ.

ಉಬ್ಬರದಲ್ಲಿ ೧ನೇ ಪಾತ್ರದ ತೂಬುಗಳನ್ನು ತೆರೆದು ಅದರಲ್ಲಿ ನೀರನ್ನು ತುಂಬಲಾಗುವುದು. ೧ನೇ ಪಾತ್ರದ ತಿರ್ಬಾನುಗಳು ಆಗ ಕೆಲಸ






ಆ ಚಿತ್ರ ೪

ಮಾಡುವುದಿಲ್ಲ. ಅದೇ ಸಮಯದಲ್ಲಿ ೨ನೇ ಪಾತ್ರದ ತೂಬುಗಳು ಮುಚ್ಚಿದ್ದು ಸಮುದ್ರದ ನೀರು ೨ನೇ ಪಾತ್ರದ ತಿರ್ಬಾನುಗಳ ಮೂಲಕ ಆ ಪಾತ್ರಕ್ಕೆ ಹರಿದು ವಿದ್ಯುತ್ತು ತಯಾರಾಗುವುದು.

ಇಳಿತದಲ್ಲಿ ೧ನೇ ಪಾತ್ರದ ತೂಬುಗಳು ಮುಚ್ಚಿದ್ದು ಆ ಪಾತ್ರದ ತಿರ್ಬಾನುಗಳ ಮೂಲಕ ಹರಿದು ಸಮುದ್ರವನ್ನು ಸೇರುವುದು ಹಾಗೂ ವಿದ್ಯುತ್ತು ತಯಾರಾಗುವುದು. ಅದೇ ಸಮಯದಲ್ಲಿ ೨ನೇ ಪಾತ್ರದ ತಿರ್ಬಾನುಗಳು ಕೆಲಸ ಮಾಡದೆ ಆ ಪಾತ್ರದ ನೀರು ಮಾತ್ರ ೨ನೇ ಪಾತ್ರದ ತೂಬುಗಳ ಮೂಲಕ ಸಮುದ್ರವನ್ನು ಸೇರುವುದು. ಈ ರೀತಿಯಲ್ಲಿ ಸತತ ವಿದ್ಯುದುತ್ಪಾದನೆ ಸಾಧ್ಯವಾಗುತ್ತದೆ.

ಉತ್ಪಾದನಾ ಶಕ್ತಿಯು ನೀರಿನ ಮಟ್ಟಗಳ ಅಂತರವನ್ನು ಅವಲಂಬಿಸಿರುತ್ತದೆ. ಅಂತರ ಹೆಚ್ಚಿದಂತೆ ಉತ್ಪಾದನೆಯೂ ಹೆಚ್ಚಾಗುವುದು. ಚಿತ್ರ ೪ ರಲ್ಲಿ ನೀರಿನ ಮಟ್ಟಗಳ ಅಂತರದಲ್ಲಿ ಸಾಕಷ್ಟು ಏರುಪೇರು ಇರುವುದನ್ನು ಕಾಣಬಹುದು. ಆದ್ದರಿಂದ ಉತ್ಪಾದನಾ ಶಕ್ತಿಯಲ್ಲಿಯೂ ಸಹ ಏರುಪೇರು ಇರುವುದು ಸಹಜ.

ಯೋಗ್ಯವಾದ ತೂಬುಗಳ ಆಕಾರದಿಂದ ಈ ಏರುಪೇರುಗಳು ಹೆಚ್ಚಾಗಿರದಂತೆ ನೋಡಿಕೊಂಡರೆ ಉತ್ಪಾದನಾ ಶಕ್ತಿಯ ಪ್ರಮಾಣವೂ ಸಹ ಹೆಚ್ಚು ಕಡಿಮೆ ಒಂದೇ ಸಮನಾಗಿರುವುದು. ಇದನ್ನು ಚಿತ್ರ ೫ ರಲ್ಲಿ ಕಾಣಬಹುದು.

ಈ ಪದ್ಧತಿಯಲ್ಲಿ ಒಂದು ಪಾತ್ರವು ಕೇವಲ ಇಳಿತದಲ್ಲಿಯೂ ಇನ್ನೊಂದು ಪಾತ್ರವು ಕೇವಲ ಉಬ್ಬರದಲ್ಲಿಯೂ ಪರ್ಯಾಯವಾಗಿ ಕೆಲಸ ಮಾಡುವುದರಿಂದ ಇದನ್ನು ಪರ್ಯಾಯ–ದ್ವಿಪಾತ್ರ–ಪದ್ಧತಿ' ಎಂದು ಕರೆಯಲಾಗಿದೆ.

**ಸಹಕಾರ-ದ್ವಿಪಾತ್ರ-ಪದ್ಧತಿ-** (System of cooperating basins) (ಚಿತ್ರ ೬).

ಈ ಪದ್ಧತಿಯಲ್ಲಿ ಎರಡು ಪಾತ್ರಗಳ ನಡುವೆ ಅಡ್ಡ ಕಟ್ಟೆ ಇದ್ದು ಅದರಲ್ಲಿ ವಿದ್ಯುದಾಗಾರವನ್ನು ಸ್ಥಾಪಿಸಲಾಗುವುದು.

೧ನೇ ಪಾತ್ರ (ಉನ್ನತ ಪಾತ್ರ) ದ ನೀರಿನ




ಚಿತ್ರ ೪







ಚಿತ್ರ ೫



ಮಟ್ಟವು ೨ನೇ ಪಾತ್ರ (ನಿಮ್ನ ಪಾತ್ರ)ದ ನೀರಿನ ಮಟ್ಟಕ್ಕಿಂತ ಯಾವಾಗಲೂ ಹೆಚ್ಚಾಗಿರುವುದು ಮತ್ತು ಉನ್ನತ ಪಾತ್ರ (Upper basins)ದ ನೀರಿನ ಮಟ್ಟವು ಸಾಮಾನ್ಯ ಸಮುದ್ರ ಮಟ್ಟ (Mean sea level) ಕ್ಕಿಂತ ಯಾವಾಗಲೂ ಹೆಚ್ಚಾಗಿರುವುದು. ಹಾಗೆಯೇ ನಿಮ್ನ ಪಾತ್ರ (Lower basin)ದ ನೀರಿನ ಮಟ್ಟವು ಸಾಮಾನ್ಯ ಸಮುದ್ರ ಮಟ್ಟಕ್ಕಿಂತ ಯಾವಾಗಲೂ ಕೆಳಗಿರುವುದು. ಇದರಿಂದ ಉನ್ನತ ಪಾತ್ರದಿಂದ ನಿಮ್ನ ಪಾತ್ರಕ್ಕೆ ನೀರು ಸತತವಾಗಿ ಟರ್ಬೈನುಗಳ ಮೂಲಕ ಹರಿದು ಅವಿಚ್ಛಿನ್ನವಾಗಿ ವಿದ್ಯುತ್ತನ್ನು ತಯಾರಿಸಬಹುದು.

ಸಮುದ್ರದಲ್ಲಿ ಉಬ್ಬರವಿದ್ದು ಸಮುದ್ರದ ಮಟ್ಟವು ಉನ್ನತ ಪಾತ್ರದ ಮಟ್ಟಕ್ಕಿಂತ ಹೆಚ್ಚಾದಾಗ ಸಮುದ್ರದ ನೀರು ತೂಬುಗಳ ಮೂಲಕ ಉನ್ನತ ಪಾತ್ರಕ್ಕೆ ಹರಿಯುವುದು. ಕ್ರಮೇಣ ಇಳಿತವು ಆರಂಭವಾಗಿ ಎರಡು ನೀರಿನ ಮಟ್ಟಗಳೂ ಸಮವಾದಾಗ ಉನ್ನತ ಪಾತ್ರದ ತೂಬುಗಳನ್ನು ಮುಚ್ಚಲಾಗುವುದು. ಅನಂತರ ಸಮುದ್ರದ ಮಟ್ಟವು ಇಳಿಯುತ್ತಾ ಹೋಗುವುದು. ಈ ಇಳಿತದಲ್ಲಿ ಸಮುದ್ರದ ನೀರಿನ ಮಟ್ಟವು ನಿಮ್ನ ಪಾತ್ರದ ನೀರಿನ ಮಟ್ಟಕ್ಕಿಂತ ಕೆಳಗೆ ಇಳಿಯಲು ಆರಂಭವಾದಾಗ ನಿಮ್ನ ಪಾತ್ರದ ತೂಬುಗಳನ್ನು ತೆರೆದು ಆ ಪಾತ್ರದ ನೀರನ್ನು ಸಮುದ್ರಕ್ಕೆ ಬಿಡಲಾಗುವುದು. ಉಬ್ಬರವು ಪುನಃ ಆರಂಭವಾಗಿ ನಿಮ್ನ ಪಾತ್ರದ ಹಾಗೂ ಸಮುದ್ರದ ಎರಡೂ ಮಟ್ಟಗಳು ಸಮವಾದಾಗ ಈ ತೂಬುಗಳನ್ನು ಮುಚ್ಚಲಾಗುವುದು. ಅಲ್ಲಿಂದಾಚೆಗೆ ಉಬ್ಬರವು ಏರುತ್ತಾ ಹೋಗಿ ಮೊದಲಿನಂತೆ ನೀರು ಉನ್ನತ ಪಾತ್ರಕ್ಕೆ ಹರಿಯುವುದು.

ಸಮುದ್ರದ ನೀರು ಉಬ್ಬರದಲ್ಲಿ ಉನ್ನತ ಪಾತ್ರವನ್ನು ಸೇರಿ ಟರ್ಬೈನುಗಳ ಮೂಲಕ ನಿಮ್ನ ಪಾತ್ರಕ್ಕೆ ಹರಿದು ಇಳಿತದಲ್ಲಿ ಪುನಃ ಸಮುದ್ರಕ್ಕೆ ಹಿಂತಿರುಗುವುದು. ಈ ರೀತಿಯಲ್ಲಿ ಎರಡೂ ಪಾತ್ರಗಳ ನೀರಿನ ಮಟ್ಟಗಳ ಅಂತರ ಸ್ಥಿರವಾಗಿದ್ದು ಅವಿಚ್ಛಿನ್ನವಾಗಿ ವಿದ್ಯುದುತ್ಪಾದನೆಯಾಗುವುದು.

ಮೇಲ್ಕಂಡ ಎಲ್ಲ ಪದ್ಧತಿಗಳ ವಿದ್ಯುದಾಗಾರಗಳಲ್ಲಿಯೂ ನೀರಿನ ಮಟ್ಟಗಳ ಅಂತರ ಅಲ್ಪವಿದ್ದು ಈ ಅಂತರದಲ್ಲಿ ಸಾಕಷ್ಟು ಏರು ಪೇರುಗಳು ಇರುವುದರಿಂದ ಕೇವಲ ಕಪ್ಲಾನ್ ಟರ್ಬೈನು (Kaplan turbine)ಗಳು ಮಾತ್ರ ಬಳಕೆಗೆ ಯೋಗ್ಯವಾಗಿವೆ. ಫ್ರಾನ್ಸ್ ದೇಶದ ನೇರ್‌ಪಿಕ್ (Neyrpic) ಮತ್ತು ಸ್ವಿಟ್ಜರ್‌ಲೆಂಡ್‌ನ ಎಷರ್–ವಿಸ್ (Escher-wyss) ಕಂಪೆನಿಗಳು ಎರಡೂ ದಿಕ್ಕಿನಲ್ಲಿ ತಿರುಗಲು ಸಾಧ್ಯವಾದ ನಳಿಕೆ ಟರ್ಬೈನು (Tubular turbine)ಗಳನ್ನು ಏರಿಳಿತ ವಿದ್ಯುದಾಗಾರಕ್ಕಾಗಿ ತಯಾರಿಸಿವೆ.

ಏರಿಳಿತ ವಿದ್ಯುದಾಗಾರಕ್ಕಾಗಿ ತಗಲುವ ವೆಚ್ಚ ಅಪಾರ; ಹಾಗೂ ನಿಸರ್ಗದತ್ತವಾದ ಏರಿಳಿತಗಳ ಅಂತರ (Amplitude) ಮತ್ತು ಯೋಗ್ಯವಾದ ಪಾತ್ರಗಳು ಜಗತ್ತಿನ ಎಲ್ಲ ಕಡೆಗಳಲ್ಲೂ ದೊರೆಯಲಾರವು. ಈ ಕಾರಣಗಳಿಂದ ಈ ರೀತಿಯ ವಿದ್ಯುದಾಗಾರಗಳ ಸಂಖ್ಯೆ ಜಗತ್ತಿನಲ್ಲಿ ಹೆಚ್ಚಿಲ್ಲ. ಆದರೆ ವಿದ್ಯುತ್ತಿನ ಬೇಡಿಕೆ ಏರುತ್ತಿರುವುದರಿಂದ ಇವುಗಳ ಸಂಖ್ಯೆಯೂ ಏರಲಾರಂಭಿಸಿದೆ.

ಅಮೇರಿಕಾ ಸಂಯುಕ್ತ ಸಂಸ್ಥಾನಗಳು ಮತ್ತು ಕೆನಡ ದೇಶಗಳ ಸೀಮೆಯ ಬಳಿ ಪಸಮಕೋಡಿ ಕೊಲ್ಲಿ (Bay of passama-quoddy)ಯಲ್ಲಿ ೨೦೦,೦೦೦ ಕಿಲೋವಾಟ್‌ಗಳ ವಿದ್ಯುದಾಗಾರದ ನಿರ್ಮಾಣ ಕಾರ್ಯ ಸಾಗಿದೆ. ಇದಕ್ಕೆ ತಗಲುವ ವೆಚ್ಚ ಸುಮಾರು ೪೦ ದಶಲಕ್ಷ ಅಮೇರಿಕನ್ ಡಾಲರುಗಳು.

ಫ್ರಾನ್ಸ್ ದೇಶವು ಏರಿಳಿತ–ವಿದ್ಯುದಾಗಾರಗಳ ನಿರ್ಮಾಣದಲ್ಲಿ ಅಗ್ರಸ್ಥಾನ ಪಡೆದಿದೆ. ರಾನಸ್ ನದಿಯ (Rance river) ನದೀಮುಖಜ ಭೂಮಿ (Estuary)ಯಲ್ಲಿ ಈಗ ಕೇವಲ ಕೆಲವು ವರ್ಷಗಳ ಹಿಂದೆ ನಿರ್ಮಿತವಾದ ಏರಿಳಿತ–ಬೃಹದಾಗಾರವು ಬಹುಶಃ ಜಗತ್ತಿನಲ್ಲೇ ಈ ರೀತಿಯ ಮೊದಲನೆಯ ಬೃಹದಾಗಾರವೆನ್ನಬಹುದು. ಇದರ ಉತ್ಪಾದನಾ

ಶಕ್ತಿ ೨೪೦,೦೦೦ ಕಿಲೋವಾಟ್‌ಗಳು. ೧೦,೦೦೦ ಕಿಲೋವಾಟ್‌ಗಳ ೨೪ ನಳಿಕೆ ಟರ್ಬೈನುಗಳು ಈ ಶಕ್ತಿಯನ್ನು ಉತ್ಪಾದಿಸುವವು. ಏರಿಳಿತಗಳ ಮಟ್ಟದ ಅಂತರ (Amplitude) ೮.೫ ಮೀಟರಿಂದ ೧೩.೫ ಮೀಟರುಗಳ ವರೆಗೂ ಈ ವಿದ್ಯುದಾಗಾರಕ್ಕೆ ದೊರೆಯುತ್ತವೆ.

ಫ್ರಾನ್ಸ್ ದೇಶದ ಮತ್ತೊಂದು ಯೋಜನೆಯು ಹುತದಲ್ಲಿರುವ ಏರಿಳಿತ–ವಿದ್ಯುದಾಗಾರವೆಂದರೆ ಮೌಂಟ್ ಸೇಂಟ್ ಮೈಕೇಲ್ (Mt. St. Michael) ಬಳಿ ಕೊಲ್ಲಿಗೆ ಅಣೆಕಟ್ಟು ಹಾಕಿ ನಿರ್ಮಿಸಲಾಗುವ ಅತಿ ಹಿರಿದಾದ ವಿದ್ಯುದಾಗಾರ. ಇದರ ಉತ್ಪಾದನಾ ಶಕ್ತಿ ಸುಮಾರು ೧೦ ದಶಲಕ್ಷ ಕಿಲೋವಾಟ್‌ಗಳು (೧೦,೦೦೦ ಮೆಗಾವಾಟ್); ಅಂದರೆ ಪ್ರಮಾಣದಲ್ಲಿ ಇದು ಸುಮಾರು ದಶಲಕ್ಷ ಕಿಲೋವಾಟ್ (೧೦೦೦ ಮೆಗಾವಾಟ್) ಉತ್ಪಾದನೆ ಇರುವ ಶರಾವತಿ ಪ್ರಕಲ್ಪದ ೧೦ ರಷ್ಟು ಹಿರಿಯದೆಂದಾಯಿತು.

ಆರ್ಜಂಟೈನಾ ದೇಶದ ಸ್ಯಾನ್ ಜೋಸ್ ಪ್ರಕಲ್ಪ (San Jose Scheme) ಇನ್ನೊಂದು ಹಿರಿದಾದ ಏರಿಳಿತ–ವಿದ್ಯುದಾಗಾರದ ಯೋಜನೆ. ಇದರಲ್ಲಿ ೩೭೬ ಟರ್ಬೈನುಗಳಿದ್ದು ಸುಮಾರು ೨ ದಶಲಕ್ಷ ಕಿಲೋವಾಟ್ (೨೦೦೦ ಮೆಗಾವಾಟ್) ಗಳ ಉತ್ಪಾದನೆ ಮಾಡುವ ಯೋಜನೆ ಇದೆ.

ಕೆನಡಾ ದೇಶದ ಫಂಡಿಕೊಲ್ಲಿಯಲ್ಲಿ ನಿರ್ಮಿಸಲಾಗುವ ವಿದ್ಯುದಾಗಾರದಿಂದ ೩.೮ ದಶಲಕ್ಷ ಕಿಲೋವಾಟ್ (೩೮೦೦ ಮೆಗಾವಾಟ್) ಗಳಷ್ಟು ಶಕ್ತಿಯನ್ನು ಉತ್ಪಾದಿಸುವ ಯೋಜನೆ ಇದೆ. ಅದಕ್ಕಾಗಿ ತಗಲುವ ವೆಚ್ಚ ಸುಮಾರು ೨೦೦ ಮಿಲಿಯನ್ ಅಮೆರಿಕನ್ ಡಾಲರ್‌ಗಳು.

ಪಶ್ಚಿಮ ಆಸ್ಟ್ರೇಲಿಯದಲ್ಲಿ ನಿರ್ಮಿಸಲಾಗುವ ಏರಿಳಿತ–ವಿದ್ಯುದಾಗಾರದಿಂದ ೮ ದಶಲಕ್ಷ ಕಿಲೋವಾಟ್ (೮೦೦೦ ಮೆಗಾವಾಟ್)ಗಳಷ್ಟು ಶಕ್ತಿಯನ್ನು ಉತ್ಪಾದಿಸುವ ಯೋಜನೆ ಇದೆ.

ನಮ್ಮ ಭಾರತದಲ್ಲಿಯೂ ಸಹ ಗುಜರಾತಿನ ಪಶ್ಚಿಮ ತೀರದ ಕ್ಯಾಂಬೇ ಮತ್ತು ಕಚ್-ಕೊಲ್ಲಿಗಳಲ್ಲಿ ಮತ್ತು ಬಂಗಾಳದ ಸುಂದರಬನ್ ತೀರದಲ್ಲಿ ಏರಿಳಿತಗಳ ಅಂತರ ೧೪ ಮೀಟರುಗಳಿಗಿಂತಲೂ ಹೆಚ್ಚಿದ್ದು ಇವು ವಿದ್ಯುದಾಗಾರಗಳ ನಿರ್ಮಾಣಕ್ಕೆ ಯೋಗ್ಯವಾದ ಸ್ಥಳಗಳಾಗಿವೆ. ಆದರೆ ಅಪಾರ ವೆಚ್ಚದಿಂದಾಗಿ ಈ ಯೋಜನೆಗಳನ್ನು ಇನ್ನೂ ಕೈಗೊಂಡಿಲ್ಲ.

**ಕುಗ್ಗು ಮಟ್ಟದ ವಿದ್ಯುದಾಗಾರ** (Depression power plant) (ಚಿತ್ರ ೭)

ಸಮುದ್ರದ ವಿದ್ಯುದಾಗಾರಗಳಲ್ಲಿ ಇದೊಂದು ವಿಶೇಷ ರೀತಿಯಲ್ಲಿ ವಿದ್ಯುದಾಗಾರ. ಈ ರೀತಿಯ ವಿದ್ಯುದಾಗಾರಕ್ಕೆ ಬೇಕಾದ ಮುಖ್ಯ ಸಾಧನಗಳೆಂದರೆ ಸಮುದ್ರದ ನೀರು ಬೇಗ ಆವಿಯಾಗಿ (Evaporation) ಹೋಗಲು ಸಹಾಯಕವಾದ ಉಷ್ಣ ಹವಾಮಾನ ಮತ್ತು ಯೋಗ್ಯವಾದ ಪಾತ್ರ. ಸಮುದ್ರದಿಂದ ಈ ಪಾತ್ರಕ್ಕೆ ಒಂದು ಕಾಲುವೆಯನ್ನು ನಿರ್ಮಿಸಿ ಅದರ ಮೂಲಕ ಪಾತ್ರಕ್ಕೆ ನೀರನ್ನು ತುಂಬಲಾಗುವುದು. ಈ ಪಾತ್ರದ ವಿಸ್ತೀರ್ಣ ಸಾಕಷ್ಟು ಹೆಚ್ಚಿದು



ಚಿತ್ರ ೭

ನೀರು ಆವಿಯಾಗಿ ಹೋಗಿ ಪಾತ್ರದ ನೀರಿನ ಮಟ್ಟ ಕೆಳಗೆ ಇಳಿಯುವುದು. ಆಗ ಕಾಲುವೆಯಿಂದ ಸಮುದ್ರದ ನೀರನ್ನು ಟರ್ಬೈನುಗಳ ಮೂಲಕ ಪಾತ್ರಕ್ಕೆ ಬರಿಸಿ ವಿದ್ಯುತ್ತನ್ನು ತಯಾರಿಸಬಹುದು.

ಪಾತ್ರಕ್ಕೆ ಹರಿದು ಬರುವ ನೀರಿನ ಪ್ರಮಾಣ ಮತ್ತು ನೀರು ಆವಿಯಾಗಿ ಹೋಗುವ ಪ್ರಮಾಣ ಇವು ಎರಡೂ ಸಮನಾದರೆ, ವಿದ್ಯುದುತ್ಪಾದನೆಗೆ ಬೇಕಾದ ನೀರಿನ ಮಟ್ಟದ ಅಂತರ ನಿರಂತರವಾಗಿ ದೊರೆಯುವುದು.

ಈ ರೀತಿಯ ವಿದ್ಯುದಾಗಾರವನ್ನು ಈಜಿಪ್ಟಿನ ಎಲ್ ಕಟ್ಟಾರಾ (El Qattara) ದಲ್ಲಿ ನಿರ್ಮಿಸುವ ಯೋಜನೆ ಇದೆ. ಈ ಸ್ಥಳವು ಭೂಮಧ್ಯ ಸಮುದ್ರ (Mediteraniarn Sea) ದ ದಕ್ಷಿಣಕ್ಕೆ ೭೦ ಕಿಲೋಮೀಟರುಗಳ ದೂರದಲ್ಲಿದ್ದು ಸಮುದ್ರ ಮಟ್ಟಕ್ಕಿಂತ ೫೦ ಮೀಟರ್ ಕೆಳಗಿದೆ. ಈ ವಿದ್ಯುದಾಗಾರದಲ್ಲಿ ಭೂಮಧ್ಯ ಸಮುದ್ರದ ನೀರನ್ನು ಉಪಯೋಗಿಸಿ ಸುಮಾರು ೨೦೦,೦೦೦ ಕಿಲೋವಾಟ್‌ಗಳ ವಿದ್ಯುತ್ತನ್ನು ಉತ್ಪಾದಿಸುವ ಯೋಜನೆ ಇದೆ.

ಇದೇ ರೀತಿಯ ಇನ್ನೊಂದು ಯೋಜನೆಯೂ ಭೂಮಧ್ಯ ಸಮುದ್ರಕ್ಕೆ ಸಂಬಂಧಿಸಿದೆ. ಈ ಸಮುದ್ರಕ್ಕೆ ಹರಿಯುವ ಐರೋಪ್ಯ ನದಿಗಳ ನೀರಿನ ಪ್ರಮಾಣ ಸಮುದ್ರದಿಂದ ಆವಿಯಾಗಿ ಹೋಗುವ ನೀರಿನ ಪ್ರಮಾಣಕ್ಕಿಂತ ಕಡಿಮೆ ಇದೆ. ಆದ್ದರಿಂದ ಸದ್ಯದಲ್ಲಿ ಅಟ್ಲಾಂಟಿಕ್ ಮಹಾಸಾಗರದಿಂದ ನೀರು ಜಿಬ್ರಾಲ್ಟರ್ ಜಲಸಂಧಿಯ ಮೂಲಕ ಭೂಮಧ್ಯ ಸಮುದ್ರಕ್ಕೆ ಹರಿದು ನೀರಿನ ಮಟ್ಟಗಳು ಸಮನಾಗುತ್ತವೆ. ಈ ಸಮುದ್ರಕ್ಕೆ ಹರಿಯುವ ನದಿಗಳ ನೀರನ್ನು ಮತ್ತು ಜಿಬ್ರಾಲ್ಟರ್ ಜಲಸಂಧಿಯಿಂದ ಹರಿಯುವ ನೀರನ್ನು ತಡೆಗಟ್ಟಿದರೆ ಕಾಲಾನುಕ್ರಮದಲ್ಲಿ ಭೂಮಧ್ಯ ಸಮುದ್ರದ ನೀರು ಆವಿಯಾಗಿ ಹೋಗಿ ಸಮುದ್ರದ ಮಟ್ಟವು ಕುಗ್ಗುವುದು.

ಈ ನೀರಿನ ಮಟ್ಟದ ಅಂತರ ಸಾಕಷ್ಟು ತಲುಪಿದಾಗ ಅಟ್ಲಾಂಟಿಕ್ ಮಹಾಸಾಗರದ ನೀರನ್ನು ಜಿಬ್ರಾಲ್ಟರ್ ಜಲಸಂಧಿಯಲ್ಲಿ ನಿರ್ಮಿಸಿದ ವಿದ್ಯುದಾಗಾರದ ಮೂಲಕ ಭೂಮಧ್ಯ ಸಮುದ್ರಕ್ಕೆ ಬಿಟ್ಟು ವಿದ್ಯುತ್ತನ್ನು ಉತ್ಪಾದಿಸಬಹುದು. ಈ ನೀರಿನ ಪ್ರಮಾಣ ಮತ್ತು ಭೂಮಧ್ಯ ಸಮುದ್ರದಿಂದ ಆಗುವ ಆವಿಯ ಪ್ರಮಾಣ ಇವು ಎರಡೂ ಸಮನಾದರೆ ವಿದ್ಯುದುತ್ಪಾದನೆಗೆ ಬೇಕಾದ ನೀರಿನ ಮಟ್ಟ ಚಿರಸ್ಥಾಯಿಯಾಗಿ ದೊರೆತು ವಿದ್ಯುದುತ್ಪಾದನೆಯನ್ನು ಅನವರತವಾಗಿ ಮಾಡಬಹುದು.

ಈ ಯೋಜನೆಯ ಮುಖ್ಯ ನ್ಯೂನತೆ ಎಂದರೆ ನೀರು ಆವಿಯಾಗಿ ಹೋಗಿ ೫೦ ಮೀಟರುಗಳಷ್ಟು ನೀರಿನ ಮಟ್ಟದ ಅಂತರವನ್ನು ಪಡೆಯಲು ಸುಮಾರು ೨೦ ವರ್ಷಗಳು ಕಾಯಬೇಕಾಗಬಹುದು. ಅಲ್ಲಿಯತನಕ ಅಣೆಕಟ್ಟನ್ನು ಕಟ್ಟಲು ತಗಲಿದ ಖರ್ಚನ್ನು ಹಿಂತಿರುಗಿ ಪಡೆಯಲು ನಿರೀಕ್ಷಿಸುವಂತಿಲ್ಲ.

ಈ ರೀತಿಯ ಯೋಜನೆಗಳು ಸದ್ಯಕ್ಕೆ ಕನಸಿನ ರಾಜ್ಯಗಳಂತೆ ತೋರಬಹುದು. ಆದರೆ ಹೆಚ್ಚಿನ ಶಕ್ತಿಗಾಗಿ ಹಸಿದು ಕಾದು ಕುಳಿತಿರುವ ಈ ಜಗತ್ತಿನಲ್ಲಿ ಇದು ಅಸಂಭವವಲ್ಲ ಎಂಬುದನ್ನು ಮರೆಯಬಾರದು. ✡



ಸ್ವಲ್ಪ ಅತಿಪ್ರಸರಣವಾಗಿದೆಯೆಂದು ಹೇಳಿದರೆ ಒಬ್ಬಳು ಸ್ವಲ್ಪವೇ ಗರ್ಭಿಣಿಯಾಗಿದ್ದಾಳೆ ಎಂದು ಹೇಳಿದ ಹಾಗಾದೀತು. ಎರಡೂ ಬೆಳೆಯುತ್ತವೆ.

– ಲಿಯಾನ್ ಹೆಂಡರಸನ್



# ಶ್ರೀ ಕೃಷ್ಣ ವಿವಿಧ ಕಲ್ಪನೆಗಳು

ನ. ನ. ಮೂರ್ತಿ

ಭಾರತೀಯ ಪುರಾಣ, ಕಾವ್ಯ ಮತ್ತು ಇತಿಹಾಸಗಳಲ್ಲಿನ ಶ್ರೀಕೃಷ್ಣನ ಪಾತ್ರ ವಿಚಾರ ವಿವೇಚನಾತ್ಮಕವಾದದ್ದು. ಭಾರತೀಯರ ದೃಷ್ಟಿಯಲ್ಲಿ ಅವನ ಅಸ್ತಿತ್ವ ದೈವಿಕವಾದದ್ದು. ಕೇವಲ ಅವನ ಹೆಸರೊಂದೇ ಸಾವಿರಾರು ವರ್ಷಗಳಿಂದ ಕೃಷ್ಣಮಂತ್ರ ಭಾರತೀಯರ ಆತ್ಮೋದ್ಧಾರಕ್ಕೆ ತಾರಕಮಂತ್ರವಾಗಿದೆ. ಬಹುಪಾಲು ಭಾರತೀಯರ ಅಭಿಪ್ರಾಯದಲ್ಲಿ ಕೃಷ್ಣ ಅವತಾರ ಪುರುಷನಾದ ಭಗವಂತ!.

ಭಾರತೀಯ ಪುರಾಣ- ಕಾವ್ಯಗಳ ವಿಚಾರದಲ್ಲಾಗಲಿ, ಅವುಗಳಲ್ಲಿ ಪ್ರತಿನಿಧಿಸಲ್ಪಟ್ಟ ಅಲೌಕಿಕ ವ್ಯಕ್ತಿ–ಶಕ್ತಿಗಳ ನೈಜ ಅಸ್ತಿತ್ವದ ಬಗೆಗಾಗಲಿ ಸಂಶಯ ಪಡಲು, ಭಾರತೀಯರು ಮೊದಮೊದಲು ಹಿಂಜರಿಯುತ್ತಿದ್ದರು. ಕಳೆದ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರು ಭಾರತೀಯ ಸಾಹಿತ್ಯದಲ್ಲಿ ತಲೆಹಾಕಿ ವಿಚಾರ ಮಾಡಲು ಪ್ರಾರಂಭಿಸಿದಾಗ ಅವುಗಳ ಮೌಲ್ಯಕ್ಕೆ ಧಕ್ಕೆಯೊದಗಿ ಪ್ರತಿ ಪಾತ್ರ ಸನ್ನಿವೇಶಗಳೂ ಸಂಶಯಕ್ಕೊಳಗಾದವು. ಹಾಗೆಯೇ, ಕೃಷ್ಣನ ಜೈವಿಕ–ದೈವಿಕ ಅಸ್ತಿತ್ವ ಹಾಗೂ ಮಾನುಷ–ಅಮಾನುಷ ಕ್ರಿಯೆಗಳ ಬಗ್ಗೆ ವಾದ--ವಿವಾದಗಳು ನಡೆದವು; ನಡೆಯುತ್ತಲೇ ಇವೆ.

## ವಿಭಿನ್ನ ಕೃಷ್ಣರು

ಕೃಷ್ಣ ಒಬ್ಬನೆ? ಅಥವಾ ಅದೇ ಹೆಸರಿನ ಅನೇಕ ಕೃಷ್ಣರಿದ್ದರೆ?

ಪ್ರಮುಖವಾಗಿ ನಮ್ಮ ಮುಂದೆ ನಿಲ್ಲುವುದು ಎರಡು ಹೆಸರುಗಳು: ೧) ವಸುದೇವ–ದೇವಕಿಯರ ಮಗ- ಯಾದವಕುಲ ಸಂಜಾತ, ಪೌರಾಣಿಕ ವ್ಯಕ್ತಿ; ೨) ಛಾಂದೋಗ್ಯೋಪನಿಷದ್ ಪ್ರೋಕ್ತ—ಪಾಂಡವರ ಸಲಹೆಗಾರ, ಮಹಾಭಾರತದ ವ್ಯಕ್ತಿ.

ಪುರಾಣಗಳ ಕೃಷ್ಣನೂ, ಮಹಾಭಾರತದ ಕೃಷ್ಣನೂ ಪ್ರತ್ಯೇಕ ವ್ಯಕ್ತಿಗಳು. (ಹಾಗೆಯೇ, ಗೋಕುಲದ ಕೃಷ್ಣನೂ, ಪಾಂಡವರ ಗೆಳೆಯ ಕೃಷ್ಣನೂ ಒಬ್ಬನೇ ಆಗಿರಲಾರ.)

ಋಗ್ವೇದದಲ್ಲಿ ಕೃಷ್ಣನ ಹೆಸರಿದೆ. ಆದರೆ ಇವನು ಅಸುರ. ಇವನಿಗೂ ಪುರಾಣದ ಕೃಷ್ಣನಿಗೂ ಯಾವ ವಿಧವಾದ ಸಂಬಂಧವೂ ಇಲ್ಲ.

ಬೌದ್ಧಶಾಸ್ತ್ರಗಳಲ್ಲಿ ಮೊದಲನೆಯದಾದ 'ಸೂತ್ರ ಪಿಟಕ'ದಲ್ಲಿ ಕೃಷ್ಣನ ಹೆಸರಿದೆ. ಅದರ ಪ್ರಕಾರವೂ ಅವನು ಅಸುರ. ಬಹುಶಃ ಋಗ್ವೇದದ ಅಸುರ ಕೃಷ್ಣನನ್ನು ಇಲ್ಲಿ ಉಲ್ಲೇಖಿಸಿರಬಹುದು. ಇಲ್ಲವಾದರೆ ಆಗಲೇ ರೂಢಿಯಲ್ಲಿದ್ದು, ಅವರ ಧರ್ಮ ಪ್ರಚಾರಕ್ಕೆ ಅಡ್ಡಿಯಾಗಿದ್ದ ಕೃಷ್ಣೋಪಾಸನೆಯು,

ಮೂರ್ತಿ ಪೂಜಕರಲ್ಲದ ಬೌದ್ಧರು ಈ ಅಭಿಪ್ರಾಯಕ್ಕೆ ಬರಲು ಕಾರಣವಾಗಿರಬಹುದು.

(ಪೌರಾಣಿಕ ಕೃಷ್ಣ, ಮಹಾಭಾರತದ ಕೃಷ್ಣ ಮತ್ತು ಗೀತೆಯ ಕೃಷ್ಣ ಎಂದು ಮೂವರು ವಿಭಿನ್ನ ಕೃಷ್ಣರಿದ್ದರೆಂಬ ವಾದವೂ ಇದೆ.)

## ವಾಸುದೇವ ಕೃಷ್ಣ

ಪೌರಾಣಿಕವಾಗಿ, ಕೃಷ್ಣನ ಪೂರ್ವಜರು ಚಂದ್ರವಂಶಕ್ಕೆ ಸೇರಿದ ಯಾದವರಲ್ಲಿ ಸಾತ್ವತ ಪಂಗಡಕ್ಕೆ ಸೇರಿದವರು. ಆದರೆ ಹರಿವಂಶದ ವಿಷ್ಣುಪರ್ವವು, ಅವರು ಸೂರ್ಯವಂಶಕ್ಕೆ ಸೇರಿದವರೆಂದು ತಿಳಿಸುತ್ತದೆ (ಏವಂ ಇಕ್ಷ್ವಾಕುವಂಶಾದ್ಧಿ ಯದುವಂಶೋ ವಿನಿಸೃತಃ).

ಮೊದಮೊದಲು ಭಾಗವತ ಧರ್ಮವು ಸೂರ್ಯೋಪಾಸನೆಯ ಬೆಳವಣಿಗೆಯಲ್ಲಿತ್ತು; ವಿಷ್ಣು ಸೌರದೇವತೆಯಾಗಿದ್ದ (ಆದರೆ ಭಾಗವತವು ಸೂರ್ಯಾರಾಧನೆಯ ಪ್ರಭಾವದಿಂದ ರಚನೆಯಾದದ್ದೆಂಬುದಕ್ಕೆ ಆಧಾರವಿಲ್ಲ.)

ಮಹಾಭಾರತದ ವಾಸುದೇವ, ಕೃಷ್ಣರು ಅಭಿನ್ನ ವ್ಯಕ್ತಿಗಳು. ಆರ್. ಜಿ. ಭಂಡಾರ್ಕರ್‌ರವರ ಪ್ರಕಾರ ಕೃಷ್ಣ, ವಾಸುದೇವರು ಮೂಲದಲ್ಲಿ ಪ್ರತ್ಯೇಕ ವ್ಯಕ್ತಿಗಳಾಗಿದ್ದು ಕ್ರಮೇಣ ಒಂದೇ ವ್ಯಕ್ತಿತ್ವವನ್ನು ಪಡೆದರು. ಆದರೆ ಎ. ಡಿ. ಪುಸಾಳಕರ ಅವರು ಈ ವಾದವನ್ನು ತಳ್ಳಿ ಹಾಕುತ್ತಾರೆ.

ಮಹಾಭಾಷ್ಯವು "ಅಸಾಧುರ್ಮಾತುಲೇ ಕೃಷ್ಣಃ, ಜಘಾನ ಕಂಸಂ ಕಿಲ ವಾಸುದೇವಃ" ಮತ್ತು ಪ್ರಹಾರಾ ದೃಶ್ಯಂತೆ ಕಂಸಸ್ಯ ಚ ಕೃಷ್ಣಸ್ಯ ಚ"– ಎಂದು ಅವರಿಬ್ಬರ ಅನನ್ಯತೆಯನ್ನು ಉದ್ಧರಿಸಿದೆ. ಇದೇ ರೀತಿಯ ಉಲ್ಲೇಖಗಳು ಮಹಾಭಾರತ ಮತ್ತು ಜಾತಕ ಕತೆಗಳಲ್ಲೂ ದೊರೆಯುತ್ತವೆ. ಆದ್ದರಿಂದ ವಾಸುದೇವ ಕೃಷ್ಣರು ಪ್ರತ್ಯೇಕ ವ್ಯಕ್ತಿಗಳಾಗಲು ಸಾಧ್ಯವಿಲ್ಲ.

ಮಹಾಭಾರತ, ಜಾತಕ ಕಥೆಗಳು, ಮಹಾ

ನನ್ನು ವಸುದೇವ– ದೇವಕೀ ಪುತ್ರನೆಂದೇ ಹೇಳುತ್ತವೆ. ಆಗ ವಾಸುದೇವ, ಕೃಷ್ಣರು ಬೇರೆಯಾಗಲು ಸಾಧ್ಯವಿಲ್ಲ.

ಪ್ರಾರಂಭದ ಭಾರತೀಯ ಶಾಸನ ಸಾಹಿತ್ಯಗಳಲ್ಲಿ ವಾಸುದೇವನನ್ನು ಕೃಷ್ಣನೆಂದು ಕರೆದಿಲ್ಲ. ಮಹಾಭಾರತ, ಘಟಜಾತಕ, ಮತ್ತು ಮಹಾಭಾಷ್ಯಗಳಲ್ಲಿ ಉಲ್ಲೇಖಿಸಿರುವಂತೆ ಕೃಷ್ಣನ ಹೆಸರಿನ ಬಳಕೆಯು ಕ್ರಿಸ್ತಪೂರ್ವ ಕಾಲದಲ್ಲಿಯೇ ಆರೋಪಿಸಲ್ಪಟ್ಟಿರಬೇಕು.

## ಗೋಪೀ–ಗೋಕುಲ ಸಂಬಂಧ:

ಭಾಗವತದಲ್ಲಿ ವರ್ಣಿಸಿರುವಂತೆ ಕೃಷ್ಣನಿಗೆ ಗೋಕುಲದ ಗೋಪಿಯರೊಂದಿಗೆ ಅತಿ ರಂಜನೀಯವಾದ ಸಂಬಂಧವಿತ್ತೆಂಬುದನ್ನು ಸ್ಪಷ್ಟಪಡಿಸಲು ಸಾಧ್ಯವಿಲ್ಲ. ಹರಿವಂಶ ಮತ್ತು ಭಾಗವತಾದಿ ಕೆಲವು ಪುರಾಣಗಳಲ್ಲಿ ವರ್ಣಿಸಿರುವ ಗೋಪೀ–ಕೃಷ್ಣ ಸಂಬಂಧಕ್ಕೆ, ಜಾತಕ ಕತೆ, ಮೂಲಮಹಾಭಾರತದಲ್ಲಿ ಉಲ್ಲೇಖವಿಲ್ಲವಿರುವುದರಿಂದ, ಕೆಲವು ಲೇಖಕರು ಅಭಿಪ್ರಾಯಪಡುವಂತೆ ಈ ಸಂಬಂಧವು ಪ್ರಕ್ಷಿಪ್ತವಾಗಿದ್ದು ನಂಬಲು ಸಾಧ್ಯವಿಲ್ಲ. ಯಾರೋ ಕ್ರಮೇಣ ತಮ್ಮ ಕಲ್ಪನೆಯನ್ನು ತುಂಬಿರಬಹುದು.

ಗೋಕುಲದಲ್ಲಿ ಕೃಷ್ಣನ ಜೀವನವು ಬಾಲಿಶವಾಗಿಯೆ ಕಳೆಯಿತು. ಗೋಪಿಯರೊಂದಿಗೆ ಅವನ ಪ್ರಣಯ ಚೇಷ್ಟೆಗಳು ಅತಿಯಾಗಿರದೆ ಕೇವಲ ಸಾಮೂಹಿಕ ಕುಣಿತ ಮತ್ತು ಸಂಗೀತಕ್ಕೆ ಮಾತ್ರ ಸೀಮಿತವಾಗಿದ್ದವು. ಆದರೂ ಗೋಪಿಯರ ದೃಷ್ಟಿಯಲ್ಲಿ ಅವನು ಅಪ್ರೌಢ ವಯಸ್ಸಿಗೆ ಮೀರಿ ಪ್ರೌಢನಂತೆ ಭಾವಿಸಲ್ಪಟ್ಟು ಅವರೊಂದಿಗೆ ರಾಸ ಕೇಳಿಯಲ್ಲಿ ನಿರತನಾಗಿರುತ್ತಿದ್ದನೆಂಬ ಅಭಿಪ್ರಾಯವು ಕೃಷ್ಣನ ವ್ಯಕ್ತಿತ್ವಕ್ಕೆ ಮಸಿ ಬಳಿಯುವ ಕೃತ್ಯವಷ್ಟೇ! (ಕೃಷ್ಣ ರಾಧೆಗಿಂತಲೂ ಕಿರಿಯ. ಆದರೆ ಬ್ರಹ್ಮ ಕೃಷ್ಣನಿಗೆ ಪ್ರೌಢತ್ವವನ್ನು ಕೊಟ್ಟು ರಾಧೆಯೊಂದಿಗೆ ಮದುವೆ ಮಾಡುತ್ತಾನೆಂದು ಬ್ರಹ್ಮ ವೈವರ್ತ

ಕೃಷ್ಣನಿಗಿಂತ ಹೆಚ್ಚಾಗಿ, ಗೋಪಿಯರೆ ಅವನಿಗಾಗಿ ಹಂಬಲಿಸಿ ಹುಚ್ಚಿಯರಂತೆ ಅವನನ್ನು ಹಿಂಬಾಲಿಸುತ್ತಿದ್ದರು.

ಹೀಗೆ ಗೋಪೀ–ಕೃಷ್ಣ ಸಂಬಂಧವು ಹರಿವಂಶದಲ್ಲಿ ಸ್ವಲ್ಪ ಮಟ್ಟಿಗೆ ವಿಲಾಸತೆಯನ್ನು ಹೊಂದಿ, ಭಾಗವತದಲ್ಲಿ ವಿಸ್ತಾರವಾಗಿ ಅತಿ ರಂಜನೀಯವಾಯಿತು.

ಗೋಕುಲದೊಂದಿಗಿದ್ದ ಕೃಷ್ಣನ ಸಂಬಂಧದ ಅತಿರಂಜನೀಯ ಕಥೆಗಳು 'ಅವನು ಸ್ಥಳೀಯ ದೇವತೆಗಳಿಂದ ಭಿನ್ನವಲ್ಲ' ಎಂಬುದನ್ನು ತೋರಿಸಲು ಉತ್ತರೋತ್ತರ ಕೃತಿಗಳಲ್ಲಿ ಸೃಷ್ಟಿಯಾದವು. ಮಹಾಭಾರತ ಮತ್ತು ಪುರಾಣಗಳಲ್ಲಿ ದೊರೆಯುವ ವಿವಿಧ ಉಲ್ಲೇಖಗಳು ಕೃಷ್ಣನ ಬಗ್ಗೆ ಇಂತಹ ಅಸಾಂಗತ್ಯವನ್ನು ಹೇಳದೆ ಅವನ ಪ್ರಮುಖ ಋಜುತ್ವವನ್ನು ಸಾರುತ್ತವೆ.

ಭಾಗವತದ ಪ್ರಕಾರ ಗೋಕುಲದ ಕೃಷ್ಣ ಅಸಾಧಾರಣ ಬಾಲ್ಯವನ್ನು ಪಡೆದಿದ್ದ; ಅವನು ದೃಢಕಾಯ, ಸ್ಫುರದ್ರೂಪಿ ಅಲೌಕಿಕ ಶಕ್ತಿಶಾಲಿ; ಗೋಕುಲದ ಎಲ್ಲರಿಗೂ ಅಚ್ಚುಮೆಚ್ಚು.

ಯಮುನಾ ನದಿಯ ಪ್ರದೇಶವು ಋಗ್ವೇದದ ಕಾಲದಿಂದಲೂ ಗೋವುಗಳಿಗೆ ಪ್ರಸಿದ್ಧಿಯಾದದ್ದು. ಆದ್ದರಿಂದ ಮಥುರೆಯ ಯಾದವರು ಗೋಪಾಲಕರಾಗಿ ಪ್ರಸಿದ್ಧಿಯನ್ನು ಪಡೆದದ್ದು ಅಸಂಭವವೇನಲ್ಲ. ಒಂದು ವೇಳೆ 'ಗೋಕುಲದ ಕೃಷ್ಣ'ನೆಂಬ ಪ್ರತ್ಯೇಕ ವ್ಯಕ್ತಿ ಇದ್ದದ್ದು ನಿಜವಾದರೆ ಗೋಪಾಲಕರಲ್ಲಿ ಅವನೂ ಒಬ್ಬನಾಗಿರುವುದು ಸಹಜವಾಗಿದೆ. ಅವನು ಅಂದಿನ ಸಾಮಾಜಿಕ ಕಥೆಗಳಲ್ಲಿ ಪ್ರಧಾನ ಪಾತ್ರವನ್ನು ವಹಿಸಿರಲೂ ಬಹುದು.

ಭಾರತೀಯ ಸಾಹಿತ್ಯ ಮತ್ತು ಕೆಲವು ಕಾಲಾನುಕ್ರಮ ಸೂಚಿಗಳು ಕ್ರಿ. ಪೂ. ೩ ಮತ್ತು ೪ನೆಯ, ಶತಮಾನಗಳಲ್ಲಿಯೇ, ಗೋಪಾಲಕರೊಂದಿಗೆ ಕೃಷ್ಣನ ಅವಿಚ್ಛಿನ್ನ ಸಂಬಂಧವಿತ್ತೆಂದು ತಿಳಿಸುತ್ತವೆ.

ಕೃಷ್ಣನ ಕಾಲದಲ್ಲಿದ್ದ ಸಾಮಾಜಿಕ ಸಡಿಲತೆ ಕ್ರಮೇಣ ಬಿಗಿಯಾದಾಗ, ಭಾಗವತಕಾರರೊ ಅಥವಾ ಧರ್ಮಪಿಪಾಸುಗಳೊ ಕೃಷ್ಣನಿಗೆ ದೈವತ್ವವನ್ನಾರೋಪಿಸಿ, ರಾಸಲೀಲೆ ಹಾಗೂ ಗೋಪೀಕೃಷ್ಣ ಸಂಬಂಧವನ್ನು ಅಲೌಕಿಕತೆಗೇರಿಸಿ, ಬಣ್ಣಿಸಿರುವರು.

## ಮಾನುಷ

ಮೂಲಮಹಾಭಾರತವು ಕೃಷ್ಣನನ್ನು ಒಬ್ಬ ಮಾನವವೀರ, ಮತೀಯ ಗುರು. ಹಾಗೂ ಪಾಂಡವರ ಸಲಹೆಗಾರನೆಂದು ತಿಳಿಸುತ್ತದೆ. ದೇವರೊಂದಿಗೆ ಅವನ ಅನನ್ಯತೆಯನ್ನು ಅದು ಉಲ್ಲೇಖಿಸಿಲ್ಲ.

ಶಾಸನಗಳು ಮತ್ತು ಶಿಲ್ಪಕಲೆಯ ರೀತ್ಯಾ ಕ್ರಿ. ಪೂ. ೩ನೆಯ ಶತಮಾನದಿಂದ ಕೃಷ್ಣ ದೈವತ್ವ ಪಡೆದ. ಋಗ್ವೇದ, ಕೌಶೀಕಕೀ ಬ್ರಾಹ್ಮಣ ಛಾಂದೋಗ್ಯ ಉಪನಿಷತ್ತುಗಳು ಅವನನ್ನು ಮನುಷ್ಯನೆಂದೇ ಹೇಳಿವೆ.

ಪಾಣಿನಿಯ ಪ್ರಕಾರ ಕೃಷ್ಣ ಕ್ಷತ್ರಿಯ ವೀರ. ಪತಂಜಲಿಯೀ ತನ್ನ ಕಾಲದಲ್ಲೆ ಅವನು ದೈವತ್ವಕ್ಕೇರಿದನೆಂದು ತಿಳಿಸುತ್ತಾನೆ. ಮಹಾಭಾರತವು ಕೃಷ್ಣನ ದೈವ ಮಾನುಷತ್ವದ ವ್ಯತ್ಯಸ್ತ ಗುಣಗಳ ಅಂತರವನ್ನು ಸ್ಪಷ್ಟವಾಗಿ ನಿರೂಪಿಸುತ್ತವೆ. ಪ್ರಾಚೀನ ಕಾವ್ಯಗಳಲ್ಲಿ ಕೃಷ್ಣನ ಮನುಷ್ಯತ್ವದ ಬಗ್ಗೆ ಸಾಕಷ್ಟು ಉಲ್ಲೇಖಗಳಿವೆ. ಅವನ ಸಮಕಾಲೀನರಾದ ವ್ಯಾಸ, ಭೀಷ್ಮರು ಅವನನ್ನು– ಅವತಾರ ಪುರುಷನೆಂದು ಪೂಜ್ಯನನ್ನಾಗಿಸಿದ್ದರೂ ಮನುಷ್ಯಾಂಗನೆಂಬುದನ್ನು ಮರೆತಿರಲಿಲ್ಲ.

ವೇದಕಾಲದ ಕೃಷ್ಣ ಒಬ್ಬ ಮನುಷ್ಯನೆಂದು ಒಪ್ಪಿಕೊಂಡ ಪುರಾಣಗಳು ಹಾಗೂ ಅವುಗಳ ಮೂಲ ಹೇಳಿಕೆಗಳು ಅವನ ಮಾನವೀಯ ಗುಣಗಳನ್ನು ಉದ್ಧರಿಸುತ್ತವೆ. ಬೌದ್ಧ ಮತ್ತು ಜೈನ ಹೇಳಿಕೆ (ಸಂಪ್ರದಾಯ) ಗಳ ಪ್ರಕಾರ ಅವನು ಮಾನವ ವೀರ.

ಮಹಾಭಾರತ ಪೂರ್ವ ಸಾಹಿತ್ಯ ಹಾಗೂ ಅದರ ಪ್ರಾರಂಭದ ಭಾಗಗಳ ಆಧಾರದ ಮೇಲೆ ಕೃಷ್ಣನು ಮನುಷ್ಯನೆಂಬುದು ನಿಜವಾಗುತ್ತದೆ. ಮನುಷ್ಯ ವ್ಯಕ್ತಿತ್ವ ಪಡೆದಿದ್ದ ಕೃಷ್ಣ

ನನ್ನು ದ್ವಾರಕೆಯಲ್ಲಿ ವೃಷ್ಣಿಕುಲದ 'ರಾಜಕುಮಾರ'ನಾಗಿಯೂ ಕುರುಕ್ಷೇತ್ರದಲ್ಲಿ ಅರ್ಜುನನ ರಥದ ಸಾರಥಿಯಾಗಿಯೂ ಕಾಣಬಹುದು.

ಮಾನವ ದೇಹಿಯಾದ ಕೃಷ್ಣ ಯುದ್ಧದಲ್ಲಿ ಪಾಂಡವರಿಗೆ ವಿಜಯ ಸಾಧಿಸಿ ಕೊಡುವಲ್ಲಿ ದೈಹಿಕವಾಗಿಯೂ ಮಾನಸಿಕವಾಗಿಯೂ ನೋವನ್ನನುಭವಿಸುತ್ತಾನೆ. ಯುದ್ಧದಲ್ಲಿ ಮೋಸ ಮಾಡಲು ಸಾಮಾನ್ಯ ಮಾನವನಂತೆ ಪಾಂಡವರನ್ನು ಪ್ರಚೋದಿಸುತ್ತಾನೆ. ಅಲ್ಲದೆ, 'ಹೀಗೆಯೇ ಮಾಡಬೇಕೆಂದೂ ನಿರ್ದೇಶಿಸುತ್ತಾನೆ. ಸನ್ನಿವೇಶದ ಅನಿವಾರ್ಯತೆಯಿಂದ ಇವೆಲ್ಲ ದೋಷರಹಿತವಿರಬಹುದು.

ಕಡೆ ಕಡೆಗೆ ಯಾದವರಲ್ಲಿ ಬೆಳೆದ ವೈಷಮ್ಯಗಳಿಂದ ಕೃಷ್ಣನು ತನ್ನ ಜೀವಿತದ ಅಂತ್ಯ ಕಾಲವನ್ನು ಶಾಂತಿ–ಸಮಾಧಾನ ವಿನಾ ಕಳೆಯುತ್ತಾನೆ. ಅನೇಕ ವಿಪರೀತ ಸಂದರ್ಭಗಳಲ್ಲಿ ಎಂತೆಂಥದೋ ಪರಿಹಾರವನ್ನು ಸೂಚಿಸಿ ಸೂತ್ರಧಾರನಾದ ಕೃಷ್ಣ ತನ್ನ ಕುಲದ ಉಳಿವಿಗೆ ಯಾವ ಪರಿಹಾರವನ್ನೂ ಸೂಚಿಸದೆ, ಇಡಿ ಯಾದವ ವಿನಾಶದ ಅನಂತರ ವನಾಂತರ್ಗತನಾಗಿದ್ದು ಸಾಧಾರಣ ಮನುಷ್ಯನಂತೆ ಮರಣ ಹೊಂದುತ್ತಾನೆ.

ಕೃಷ್ಣನ ಸಾವಿಗೆ, ಬಂಕಿಮಚಂದ್ರರು ನಾಲ್ಕು ಕಾರಣಗಳನ್ನು ಒದಗಿಸಿರುತ್ತಾರೆ.

೧. ತನ್ನ ಬಂಧುಗಳಿಂದಲೇ ಹತನಾದ–ಇದಕ್ಕೆ ಆಧಾರವಿಲ್ಲ;

೨. ಯೋಗವನ್ನವಲಂಬಿಸಿ ದೇಹತ್ಯಾಗ ಮಾಡಿರಬಹುದು;

೩, ಜರೆಯೆಂಬ ವ್ಯಾಧನ ಶರಾಘಾತ; ಅಥವಾ.

೪. ಜರಾ (ಮುಪ್ಪು) ವ್ಯಾಧಿ.

ಮನುಷ್ಯ ಮಾತ್ರರು ಈ ನಾಲ್ಕರಲ್ಲಿ ಯಾವ ರೀತಿಯಾದರೂ ಸಾವನ್ನು ಪಡೆಯಲು ಸಾಧ್ಯವಿದೆ.

ಅಂತೂ ಪ್ರಾಚೀನ ಭಾರತದ ಒಬ್ಬ ಸರ್ವೋತ್ಕೃಷ್ಟ ವ್ಯಕ್ತಿಯ ಮಾನವೀಯ ಅಂತ್ಯವಾಗುತ್ತದೆ.

ಕೃಷ್ಣನ ಮನುಷ್ಯಾಂಶದ ಬಗೆಗೆ ಭಂಡಾರ್‌ಕರ್, ಗಾರ್ಬ್, ಗ್ರಿಯರ್‌ಸನ್ ಮುಂತಾದವರು 'Krishna was a human teacher' ಎಂಬ ಅಭಿಪ್ರಾಯಕ್ಕೆ ಬರುತ್ತಾರೆ.

ಒಟ್ಟಿನಲ್ಲಿ ಕೃಷ್ಣ ಸುಶಿಕ್ಷಿತ, ಉತ್ತಮ ಯೋಧ, ಸೈನ್ಯಾಧಿಪತಿ, ತಂತ್ರಜ್ಞ, ಜ್ಞಾನಿ, ಯೋಗಿ, ವೇದಜ್ಞ, ಉತ್ತಮ ಗುರು, ರಣನೀತಿಜ್ಞ, ಯಾದವನಾಯಕ, ಆದರ್ಶ ಮನುಷ್ಯ......

ಕೃಷ್ಣನ ದೈವತ್ವವನ್ನು ಒತ್ತಟ್ಟಿಗಿಟ್ಟು ಗಮನಿಸಿದರೆ, ಅವನ ಜೀವಮಾನದ ವ್ಯವಹಾರವೆಲ್ಲವೂ ಸಂಪೂರ್ಣ ಮಾನುಷವಾಗಿಯೇ ನಡೆದಿವೆ. ಎಲ್ಲೆಲ್ಲಿ ಅವನಿಗೆ ಅಲೌಕಿಕ ಕ್ರಿಯೆಗಳು ಆರೋಪಿಸಲ್ಪಟ್ಟಿವೆಯೋ ಅವೆಲ್ಲವೂ ಪ್ರಕ್ಷಿಪ್ತಗಳೇ! ಕೃಷ್ಣ ಎಲ್ಲಿಯೂ ತಾನು ಈಶ್ವರನೆಂದಾಗಲಿ, ಅಮಾನುಷ ಶಕ್ತಿಯುಳ್ಳವನೆಂದಾಗಲಿ ಹೇಳಿಕೊಂಡಿಲ್ಲ. ಅವನು ಮಾನವ ದೇಹಿಯಾಗಿ ಅನೈಸರ್ಗಿಕ ಕೃತ್ಯಗಳನ್ನೆಸಗಿಲ್ಲ.

## ಅತಿ ಮಾನುಷ

ಕಾಳಿಂಗ ಮರ್ದನ, ಗೋವರ್ಧನೋದ್ಧರಣಗಳ ಮೂಲಕ ಕೃಷ್ಣ, ವೃಂದಾವನದ ರಕ್ಷಕನಾಗಿ, ಮಹಾತ್ಯಾಗಿಯಾಗಿ, ಅತಿಮಾನುಷ ಶಕ್ತಿಶಾಲಿಯಾಗಿ ಅಲೌಕಿಕತ್ವಕ್ಕೇರುತ್ತಾನೆ.

ಕೃಷ್ಣನ ಅನೈಸರ್ಗಿಕ ಜನನೋತ್ತರ ವೃತ್ತಾಂತದಂತೆ ಬಾಲ್ಯದ ಬೆಳವಣಿಗೆಯು ಅತಿಮಾನುಷವೇ ಆಗಿದೆ. ಇದಕ್ಕೆ ಕೆಲವು ಘಟನೆಗಳನ್ನು ಉದಾಹರಿಸಬಹುದು:

ಪೂತನಿ ಎಂದರೆ ಒಂದು ಬಗೆಯ ಹಕ್ಕಿ. ಮಗುವು ಹಕ್ಕಿಯನ್ನು ಕೊಲ್ಲುವದು ಆಶ್ಚರ್ಯವೇನಲ್ಲ; ಪೂತನಿ ಎಂಬುದಕ್ಕೆ 'ಸನ್ನಿ' ಎಂಬ ರೋಗದ ಹೆಸರೂ ಇದೆ. ಮಗು ಬಲವಾಗಿ ಹಾಲು ಹೀರಿದರೆ ಈ ರೋಗ ನಿವಾರಣೆಯಾಗುತ್ತದೆ. ಹಾಗೆಯೇ ತೃಣಾವರ್ತ ರಾಕ್ಷಸನ ಕಲ್ಪನೆ ಸುಂಟರಗಾಳಿಗೆ ಹಚ್ಚಿದ ಉಪಮೆ! ಸುಂಟರಗಾಳಿಯು ಒಂದು ಮಗುವನ್ನು

ಹಾರಿಸುವುದು ಅತಿಶಯೋಕ್ತಿಯಲ್ಲ. ಯಮಳಾರ್ಜುನ ಗರ್ವಭಂಗದ ಸನ್ನಿವೇಶದಲ್ಲಿ ಕೃಷ್ಣ, ತನ್ನ ನಡುವಿಗೆ ಕಟ್ಟಿದ್ದ ಒರಳು ಕಲ್ಲಿನಿಂದ ಅರ್ಜುನ ವೃಕ್ಷಗಳನ್ನು ಉರುಳಿಸುವ ಅಂಶ ಭಾಗವತದಿಂದ ತಿಳಿದುಬರುತ್ತದೆ. ಅರ್ಜುನವೆಂದರೆ ಬಹಳ ಸಣ್ಣ ಕುರ್ಚಿಯ ಗಿಡ. ಮಗು ಗಿಡವೆರಡನ್ನು ಕಿತ್ತು ಬಿಸುಡುವುದು ದೊಡ್ಡ ಕಾರ್ಯವೇನಲ್ಲ.

ಹಾಲು, ಬೆಣ್ಣೆಗಳನ್ನು ಕದಿಯುವ ವಿಚಾರದ ಉಲ್ಲೇಖವು ಮಹಾಭಾರತ ಮತ್ತು ವಿಷ್ಣು ಪುರಾಣಗಳಲ್ಲಿಲ್ಲ. ಭಾಗವತದಲ್ಲಿ ಸೊಗಸಾಗಿ ವರ್ಣಿಸಲ್ಪಟ್ಟಿದೆ.

## ದೈವತ್ವ–ಅವತಾರದ ಕಲ್ಪನೆ

ಕೃಷ್ಣನ ಜೀವನದ ಅಲೌಕಿಕ ಅಥವಾ ಅತಿಮಾನುಷ ಘಟನೆಗಳಿಗೆ ಸಂಬಂಧಿಸಿದ ಆಖ್ಯಾಯಿಕೆಗಳು ಅವನನ್ನು ದೇವರೆಂದೇ ವರ್ಣಿಸಿವೆ ಪಾಣಿನಿಯ ಕಾಲಕ್ಕಾಗಲೇ ಅವನು ದೈವತ್ವಕ್ಕೇರಿದ್ದ. ವಿಷ್ಣುವಿನ ಅವತಾರವೆಂದೇ ಭಾವಿಸಲ್ಪಟ್ಟಿದ್ದ.

ಕೃಷ್ಣನನ್ನು ವಿಷ್ಣುವಿನ ಅನನ್ಯತೆಯಲ್ಲಿ ಗುರುತಿಸುವುದರಿಂದ ಅವನ ಪುರುಷೋತ್ತಮತೆ ಅಥವಾ ದೈವಿಕತೆಯ ಸಾದೃಶ್ಯವಾಗುತ್ತದೆ. ಆದರೆ ಯಾವಾಗ ಅವನು ವಿಷ್ಣುತ್ವವನ್ನು ಪಡೆದನೆಂಬುದು ಅಸ್ಪಷ್ಟ! ತೈತ್ತಿರೀಯ ಆರಣ್ಯಕವು ಕೃಷ್ಣ–ನಾರಾಯಣ (ವಿಷ್ಣು)ರ ಸಂಬಂಧವನ್ನು ಸೂಚಿಸಿದ್ದರೂ ಅದು ಬೆಳೆದ ನಿರ್ದಿಷ್ಟ ಕಾಲವನ್ನು ತಿಳಿಸಿಲ್ಲ.

ಕೆಲವು ಹೇಳಿಕೆಗಳ ಪ್ರಕಾರ ಕೃಷ್ಣ ಪ್ರಾಚೀನ ಭಾರತದ ಮೂಲ ನಿವಾಸಿಗಳಾದ ಪಾಂಡವರ 'ಕುಲದೈವ'ವಾಗಿದ್ದ. ಆದರೆ ಇದು ನಂಬಿಕೆಗೆ ದೂರವಾದದ್ದು. ವೈಷ್ಣವ ಧರ್ಮವು ಕೃಷ್ಣನನ್ನು ವಿಷ್ಣುವಿನ ಅನನ್ಯರೂಪವೆಂದೇ ಭಾವಿಸಿ ವಿಕಾಸಗೊಂಡಿತು. ಆ ಕಾರಣವಾಗಿ ವಾಸುದೇವೋಪಾಸನೆ (ಕೃಷ್ಣೋಪಾಸನೆ) ಅಥವಾ ಭಾಗವತ ಪಂಥವು ವೈಷ್ಣವ ಧರ್ಮವೆಂದು ಭಾವಿಸಲ್ಪಟ್ಟಿತು. ಉತ್ತರೋತ್ತರ, ವಿಷ್ಣು ವಾಸುದೇವರೊಂದಿಗಿದ್ದ ಕೃಷ್ಣನ ಅನನ್ಯತೆಯು 'ನಾರಾಯಣ'ನೊಂದಿಗೂ ಬೆಳೆಯಿತು. ತೈತ್ತಿರೀಯ ಆರಣ್ಯಕವು 'ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ। ತನ್ನೋ ವಿಷ್ಣುಃ ಪ್ರಚೋದಯಾತ್' ಎಂದು ಅವರ ಅಪ್ರತ್ಯೇಕತೆಯನ್ನು ಸ್ಪಷ್ಟಪಡಿಸಿದೆ.

ಮಹಾಭಾರತದಲ್ಲಿ ಕ್ರಮೇಣ ಪ್ರಕ್ಷಿಪ್ತವಾದ ಭಾಗಗಳು ಕೃಷ್ಣನನ್ನು ಬ್ರಾಹ್ಮಣ ಮಿತ್ರನೆಂದೂ, ವೇದಗಳ ಜನಕನೆಂದೂ, ವಿಷ್ಣುವಿನ ಅವತಾರವೆಂದೂ ಚಿತ್ರಿಸಿವೆ. ಕೃಷ್ಣನ ಸಂಶಯಾಸ್ಪದ ನಡತೆಗಳಿಗೆ ಸಂಬಂಧಿಸಿದ ಕತೆಗಳು– ಋಗ್ವೇದದಲ್ಲಿ ವಿಷ್ಣುವನ್ನು ಕುಚರನೆಂದೂ, ಆಹಾರ ಬೆಣ್ಣೆಗಳನ್ನು ಕದಿಯುವವನೆಂದೂ ವರ್ಣಿಸಿರುವುದರ ಆಧಾರದ ಮೇಲೆ ಹುಟ್ಟಿಕೊಂಡಿರಬಹುದು.

ಕೀತ್ ರವರ ಅಭಿಪ್ರಾಯದಲ್ಲಿ ಕೃಷ್ಣ 'ಸಸ್ಯ ದೇವತೆ ಜಗತ್ತಿನ ಉದ್ಧಾರದ ಚೇತನ, ಹಾಪ್‌ಕಿನ್ಸ್‌ಮತ್ತು ಬರ್ತ್ ರವರ ಪ್ರಕಾರ Krishna is beyond all doubt a popular divinity whom he considers to be a solar deity.

ಭಗವದ್ಗೀತೆಯಲ್ಲಿ ಕೃಷ್ಣನ ಅವತಾರ ತತ್ತ್ವದ ಪ್ರಬುದ್ಧ ಸ್ಥಿತಿಯು ಪ್ರತಿಪಾದಿಸಲ್ಪಟ್ಟಿತು. ಅಲ್ಲದೆ ಅವನನ್ನು ಸಂಪೂರ್ಣವಾಗಿ ಅವತಾರ ಪುರುಷನೆಂದು ಗುರುತಿಸಲು ಗೀತೆಯು ಒಂದು ಆವಶ್ಯಕ ಉಪಸಿದ್ಧಾಂತವಾಯಿತು.

ಕೃಷ್ಣ ಪೂಜಾರ್ಹನಾದ ಮೇಲೆ ಮಾತ್ರ ವಿಷ್ಣುವಿನ ಅವತಾರಗಳಲ್ಲಿ ಒಂದು ಸ್ಥಾನವನ್ನು ಪಡೆದ. ವೈದಿಕ ಕಾಲದಿಂದಲೂ ವಿಷ್ಣು ಸ್ಥಿತಿ ಕರ್ತ, ಧರ್ಮಪೋಷಕ, ಮಾನವೀಯತೆಯುಳ್ಳವನು ಭಗವದ್ಗೀತೆಯಲ್ಲಿ ಇದಕ್ಕೆ ಪುಷ್ಟಿ ದೊರೆಯುತ್ತದೆ. ಈ ಅಂಶಗಳು, ಕೃಷ್ಣನ ಅನುಯಾಯಿಗಳಿಗೆ ವಿಷ್ಣುವಿನ ಗುಣದಲ್ಲಿ ವಿಶೇಷತೆಯನ್ನು ಕಾಣಲು ಕಾರಣವಾಗಿ, ಅವರು ಕೃಷ್ಣನನ್ನು ವಿಷ್ಣುವಿನ ಅವತಾರವೆಂದೇ ನಂಬಿದರು.

ಕೃಷ್ಣನಿಗಾದ ದೈವತ್ವದ ಆರೋಪವು

ಅವನ ಬದುಕಿನ ಅತಿಪ್ರಕೃತಿ ಅಥವಾ ಅತಿಮಾನುಷ ಚೇಷ್ಟೆಗಳ ಪ್ರಭಾವವಷ್ಟೆ! ಕೃಷ್ಣ ವಾಸ್ತವವಾಗಿ ದೇವರ ಅನನ್ಯರೂಪ ಅಥವಾ ದೈವಾಂಶಸಂಭೂತನಾಗಿದ್ದರೆ ಕುರುಕ್ಷೇತ್ರ ಯುದ್ಧ ಸಮಯದಲ್ಲಿ ದೈಹಿಕ ಮತ್ತು ಮಾನಸಿಕವಾಗಿ ನೋವನ್ನೇಕೆ ಅನುಭವಿಸಬೇಕಾಗಿತ್ತು? ಎಂಬ ಸಹಜ ಪ್ರಶ್ನೆಗೆ ಬಂಕಿಮಚಂದ್ರರು ಉತ್ತರ ಕೊಡುತ್ತಾರೆ: "ಅವನು ಮಾನವ ದೇಹಿಯಾಗಿ ಮಾಡಿದ ಎಲ್ಲ ಕಾರ್ಯಗಳೂ ಭಗವಂತನ ಲೀಲೆ; ಸಾಂದರ್ಭಿಕ ನಟನೆ; ಅವನು ಅವತಾರ ಪುರುಷನೆಂಬುದರಲ್ಲಿ ಅನುಮಾನವೇ ಇಲ್ಲ."

ಕೆಲವರು ಪಾಶ್ಚಾತ್ಯ ವಿದ್ವಾಂಸರು 'ಭಾಗವತ ಧರ್ಮವು ಕ್ರೈಸ್ತ ಧರ್ಮದಿಂದ ಎರವಲು ಪಡೆದದ್ದು' ಎಂದು ತಿಳಿಸಿ ಕೃಷ್ಣ-ಕ್ರಿಸ್ತರಿಗೆ ಏಕದೇಶ ಸಂಬಂಧವನ್ನು ಕಲ್ಪಿಸುತ್ತಾರೆ. ಆದರೆ ಕೃಷ್ಣನ ಅಸ್ತಿತ್ವದ ಕತೆಗಳು ಕ್ರಿಸ್ತಪೂರ್ವದಲ್ಲಿಯೇ ಬಳಕೆಯಲ್ಲಿದ್ದದ್ದರಿಂದ ಈ ಹೇಳಿಕೆ ಅಸಾಧುವಾಗುತ್ತದೆ.

ಭಗವದ್ಗೀತೆ ಮತ್ತು ಮಹಾಭಾರತದ ಕೆಲವು ಭಾಗಗಳು, ಸರ್ವಶಕ್ತನಾದ ವಿಷ್ಣು ಮಾನವ ಕುಲದ ಉದ್ಧಾರ ಮತ್ತು ಧರ್ಮ-ನ್ಯಾಯಗಳ ಸಂರಕ್ಷಣೆಗಾಗಿ ಮನುಷ್ಯನಾಗಿಯೋ ಮೃಗವಾಗಿಯೋ ಅವತರಿಸುತ್ತಾನೆಂದು ತಿಳಿಸುತ್ತವೆ. ಉತ್ತರೋತ್ತರ ವಿಕಾಸಗೊಂಡ ಈ ಅವತಾರದ ನಂಬಿಕೆಯು, ಹಳೆಯ ಕತೆಗಳಲ್ಲಿ ವರ್ಣಿಸಲ್ಪಟ್ಟಿರುವ ಅಸಾಧಾರಣ ಶಕ್ತಿಯ ವಿಚಿತ್ರ ಪ್ರಾಣಿಗಳ ಗೂಢ ಪ್ರಕೃತಿಯ ಬುನಾದಿಯ ಮೇಲೆ, ಬೆಳೆದಿರಬಹುದು. ಆದರೆ ಮೌಲಿಕವಾಗಿ ಇಂತಹ ಯಾವ ಕತೆಯೂ ವಿಷ್ಣುವಿನ ಅವತಾರದ ನಿಲುವಿಗೆ ಪೋಷಕವಾಗಲಾರದು.

## ಭಗವದ್ಗೀತೆ

ಛಾಂದೋಗ್ಯೋಪನಿಷತ್ತಿನ ಪ್ರಕಾರ ಕೃಷ್ಣ 'ಘೋರ'ನೆಂಬ ಋಷಿಯ ಶಿಷ್ಯ. ಈ ಋಷಿಯ ಉಪದೇಶಗಳೆ ಕೃಷ್ಣನಿಂದ ಉಪದೇಶಿಸಲ್ಪಟ್ಟ ಭಗವದ್ಗೀತೆಯ ತಿರುಳು ಎಂಬ ವಾದವಿದೆ.

ಇಡೀ ಭಗವದ್ಗೀತೆಯು ಆದರ್ಶ ತತ್ತ್ವಶಾಸ್ತ್ರವೆ ಅಥವಾ ನೈತಿಕ ವಿಚಾರ ಬೋಧನೆಯೆ ಎಂಬುದು ಜಿಜ್ಞಾಸೆಗೊಳಪಟ್ಟಿದ್ದು. ಆದರೂ ಅದರ ಬೋಧನೆಯು ಸರ್ವೋತ್ಕೃಷ್ಟ ನೀತಿ ಪ್ರಧಾನವೆಂಬುದರಲ್ಲಿ ಸಂಶಯವಿಲ್ಲ. ಅದು ನೈತಿಕ ಹಿನ್ನೆಲೆಯಲ್ಲಿ ಆಧ್ಯಾತ್ಮಿಕ ಸಮಸ್ಯೆಗಳನ್ನೂ ಚರ್ಚಿಸಿದೆ. ಇತರ ಅನೇಕ ಉಪದೇಶ ಅಥವಾ ತತ್ವಗಳನ್ನು ಪ್ರತಿಪಾದಿಸಿ ವೈವಿಧ್ಯಮಯವಾಗಿದೆ.

ಗೀತೆಯು ಪ್ರತಿಪಾದಿಸುವ ಅವತಾರದ ನಂಬಿಕೆಯು ಕೃಷ್ಣನನ್ನು ಪುರುಷೋತ್ತಮ ಅಥವಾ ನಿರ್ದುಷ್ಟ ಮಾನವ (perfect man) ನೆಂದು ನಿರೂಪಿಸುತ್ತದೆ. ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ । ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮ ಮಾಯಯಾ॥); ಇಡಿ ದೈವತ್ವವು ಮನುಷ್ಯತ್ವಕ್ಕಿಳಿದ ಅಂಶವನ್ನೂ ತಿಳಿಸುತ್ತದೆ. ಗೀತೆಯಲ್ಲಿ ಉಪದೇಶಿಸಲ್ಪಟ್ಟ ಆಧ್ಯಾತ್ಮಿಕ ಸಂದೇಶವು, ಜಗತ್ತಿನ ವಿಷಮ ಸನ್ನಿವೇಶದಲ್ಲಿ ಭಗವಂತನ ಅವತಾರದ ಸಾಧ್ಯತೆಯು, ನಿಜವೆಂಬುದನ್ನು ಸ್ಪಷ್ಟಪಡಿಸುತ್ತದೆ.

"ಭಗವದ್ಗೀತೆಯು ಕೃಷ್ಣ ಪ್ರೋಕ್ತವಲ್ಲ; ವ್ಯಾಸರಿಂದ ರಚಿತವಾದ 'ವೈಯಾಸಕೀ ಸಂಹಿತೆ.' ಅದು ಮೂಲಮಹಾಭಾರತದ ಭಾಗವೂ ಅಲ್ಲ. ಕೃಷ್ಣ ಮತಾವಲಂಬಿಯಾದ ಯಾವನೋ ವೇದಜ್ಞನಾದ ತತ್ತ್ವೋಪದೇಶಕ ಅದನ್ನು ಮಹಾಭಾರತದೊಳಕ್ಕೆ ಪ್ರಕ್ಷಿಪ್ತಗೊಳಿಸಿದ್ದಾನೆ." ಎಂಬ ವಿಚಾರವೂ ಇದೆ.

## ಕೃಷ್ಣೋಪಾಸನೆ

ಕೃಷ್ಣ ತಾನು ಸತ್ತ ನಂತರ ಬಹಳ ತರುಣದಲ್ಲಿಯೇ ಪೂಜ್ಯಸ್ಥಾನವನ್ನು ಪಡೆದು ಆರಾಧಿಸಲ್ಪಟ್ಟ. ಅವನ ಜೀವಿತ ಕಾಲದಲ್ಲಿಯೆ ಕೆಲವರು ಅವನನ್ನು ಪುರುಷೋತ್ತಮನೆಂದು ಭಾವಿಸಿ ದೈವಾಂಶ ಸಂಭೂತನೆಂದು ಗುರುತಿಸಿದ್ದರು. ಮಹಾಭಾರತದ ರಾಜಸೂಯ ಯಾಗದ ಸಂದರ್ಭದಲ್ಲಿ ಭೀಷ್ಮನು ಕೃಷ್ಣನನ್ನು

ದೇವ ದೇವನೆಂದು ಕರೆದು ಅವನಿಗೆ ಅಗ್ರ ಪೂಜೆ ಸಲ್ಲುವ ಏರ್ಪಾಡು ಮಾಡಿದ. ಕೃಷ್ಣ ತನ್ನ ಜೀವಿತಕಾಲದಲ್ಲಿಯೇ ಪೂಜಿಸಲ್ಪಟ್ಟ.

ಕ್ರಿ. ಪೂ. ೨ನೆಯ ಶತಮಾನದ ಪ್ರಾರಂಭದ ಶಾಸನಗಳು ಹಾಗೂ ಮಹಾಭಾಷ್ಯವು ಕೃಷ್ಣನಿಗಾಗಿ ದೇವಾಲಯಗಳು ನಿರ್ಮಾಣವಾಗಿ ಅವನ ಮೂರ್ತಿಪೂಜೆಯ ಪದ್ಧತಿ ಇದ್ದಿತೆಂದು ತಿಳಿಸುತ್ತವೆ. ಗ್ರೀಕ್ ರಾಯಭಾರಿ ಮೆಕ್ ಕ್ರಿಂಡಲ್‌ನ ಅಭಿಪ್ರಾಯದಂತೆ ಕೃಷ್ಣ ಕ್ರಿ. ಪೂ. ನಾಲ್ಕನೇ ಶತಮಾನದಲ್ಲಿ ಮಥುರೆಯ ಜನರಿಂದ ಆರಾಧಿಸಲ್ಪಡುತ್ತಿದ್ದನೆಂಬ ಅಂಶ ತಿಳಿದುಬರುತ್ತದೆ.

ಕೃಷ್ಣನ ಆರಾಧನೆ ಮತ್ತು ಅವನ ವಿಷ್ಣುತ್ವವು ಭಗವದ್ಗೀತೆಯಿಂದ ಪೂರ್ಣವಾಗಿ ಅಭಿವ್ಯಕ್ತಗೊಂಡಿದೆ. ಕೃಷ್ಣ ಶಬ್ದವು ಪಾಣಿನಿಗಿಂತ ಮೊದಲೇ ಬಳಿಕೆಯಲ್ಲಿದ್ದು ಆಗ ಅವನು ಉಪಾಸಿಸಲ್ಪಡುತ್ತಿದ್ದನೆಂಬುದಕ್ಕೆ ಅನುಮಾನವಿಲ್ಲ. ಪ್ರಾಯಶಃ ಅಂದಿನ ಸಾಮಾಜಿಕ ಧರ್ಮಶ್ರದ್ಧೆಯ ದ್ಯೋತಕವಾಗಿಯೂ ಅವನ ಔಪಾಸನೆ ಬಳಕೆಯಲ್ಲಿ ಇದ್ದಿರಬಹುದು.

ಔತ್ತರೇಯ ಭಾರತದ ನಾರಾಯಣೋಪಾಸಿಗಳು ಕ್ರಮೇಣ ಭಾಗವತೋಪಾಸಕರೊಂದಿಗೆ ಬೆರೆತು ಕೃಷ್ಣ-ನಾರಾಯಣ (ವಿಷ್ಣು) ರ ಏಕ ಸಂಬಂಧವನ್ನು ಕಲ್ಪಿಸಿಕೊಂಡರು. ಭಾಗವತ ಪಂಥವು ತನ್ನ ಧರ್ಮವನ್ನು ಪ್ರಸಾರ ಮಾಡುವುದಕ್ಕಾಗಿ ಭಾರತದ ಪಶ್ಚಿಮ ಭಾಗಗಳು ಮತ್ತು ಉತ್ತರ ಭಾರತದ ದಕ್ಷಿಣ ಭಾಗಗಳಿಗೆ ಅಸಂಖ್ಯಾತ ಯಾದವ ಧರ್ಮಪಿಪಾಸುಗಳೊಂದಿಗೆ ವಲಸೆಹೋಯಿತು. ಈ ಪ್ರಸಾರದ ಪ್ರಭಾವದಿಂದ ವಾಸುದೇವ (ಕೃಷ್ಣ) ಅವನ ಜನರಿಂದಲೂ ಉಪಾಸಿಸಲ್ಪಟ್ಟ.

ನಾನು ಘಟ್ಟದ ಶಾತವಾಹನರ ಶಾಸನಗಳ ಪ್ರಕಾರ- ಕ್ರಿ. ಪೂ. ಒಂದನೇ ಶತಮಾನದಲ್ಲೂ ಕೆಲವರು ವಾಸುದೇವನನ್ನು ದೇವ ದೇವನೆಂದಲ್ಲದಿದ್ದರೂ ಇಂದ್ರ ಮತ್ತು ಇತರ ದೇವತೆಗಳೊಂದಿಗೆ ಸಮಾನತೆಯನ್ನು ಕಲ್ಪಿಸಿ ಉಪಾಸಿಸುತ್ತಿದ್ದರು.

*

ವ್ಯಾಸ, ಪಂಪ ಮತ್ತು ಕುಮಾರವ್ಯಾಸರ ದೃಷ್ಟಿಯಲ್ಲಿ ಕೃಷ್ಣ ದೇವರ ಅಪ್ರತ್ಯೇಕ ರೂಪವೆ! ಆದರೆ ಅವರು ಅವನ ದೈವತ್ವವನ್ನು ಕಂಡ ರೀತಿಯೇ ಬೇರೆ.

ಪಂಪ ತನ್ನ ಕಾವ್ಯದಲ್ಲಿ ಕೃಷ್ಣನಿಗೆ ಪ್ರಾಧಾನ್ಯ ಕೊಟ್ಟಿಲ್ಲ. ಆದರೆ ಅವನ ಪೂಜ್ಯತೆ ಮತ್ತು ಪ್ರಭಾವಾದಿ ವರ್ಣನೆಗಳಿಗೆ ಯಾವ ತೂಕವನ್ನೂ ಕಡಿಮೆ ಮಾಡಿಲ್ಲ. ಅವನು ಆದಿಪುರುಷನಾದ ಮಹಾವಿಷ್ಣುವಾದರೂ ಅರ್ಜುನನಿಗೆ, ಕಾಲೋಚಿತವಾಗಿ ಸ್ನೇಹಿತನಂತೆ, ವೀರನಂತೆ, ಸಚಿವನಂತೆ ಸಹಾಯ ಮಾಡುತ್ತಾನೆ.

ಕುಮಾರವ್ಯಾಸನ ಕೃಷ್ಣ 'ಅಖಿಳ ನಿಗಮಾವಳಿ ಶಿರೋಮಣಿ', 'ಮದನನಯ್ಯ', 'ಮೂಜಗವ ಮಾಡಿದನ ತಾತ.' ಧರ್ಮರಕ್ಷಣೆಗಾಗಿ ಕೃಷ್ಣರೂಪಿನಲ್ಲಿ ಅವತರಿಸಿದ ಭಕ್ತಬಂಧು ಮಹಾವಿಷ್ಣು; ಮಹಾಭಾರತದ ಸೂತ್ರಧಾರ,

ವ್ಯಾಸಭಾರತದಲ್ಲಿ ಕೃಷ್ಣನ ವ್ಯಕ್ತಿತ್ವ ಸರ್ವವ್ಯಾಪಕತೆಯನ್ನು ಪಡೆದಿರುವಂತೆ ಕನ್ನಡ ಭಾರತಗಳಲ್ಲಿ ಪಡೆದಿಲ್ಲ.

ಕೃಷ್ಣ ಧರ್ಮ ರಕ್ಷಕ; ಪೋಷಕ. ಮಾನುಷಾಂಗನಾಗಿ ಅಮಾನುಷ ಹಾಗೂ ದೈವಿಕತೆಯ ತೇಜಸ್ಸನ್ನು ಬೆಳಗಿದ, ಪ್ರಾಚೀನ ಭಾರತದ ಸರ್ವೋತ್ಕೃಷ್ಟ, ಸರ್ವಶ್ರೇಷ್ಠ ಮಹಾನುಭಾವ! ✡

---

**ಗಾಣದಲ್ಲಿ ಸಿಲುಕಿನ ಎಳ್ಳು ನೋಯದೆ ಎಣ್ಣೆಯ ಬಿಡುವದೆ ?**
**ಕಾಯದಲ್ಲಿ ಸಿಲುಕಿದ ಜೀವ ನೋಯದೆ ಕರಣಂಗಳ ಬಿಡುವನೆ ?**
**ಭಾವದಲ್ಲಿ ಸಿಲುಕಿದ ಭ್ರಮೆ ನೋಯದೆ ವಿಕಾರವ ಬಿಡುವದೆ ?**
**ಇಂತಿವನರಿದಲ್ಲದೆ ಜ್ಞಾನಲೇಪವಿಲ್ಲ ನಿಃಕಳಂಕಮಲ್ಲಿಕಾರ್ಜುನ**

—ಮೋಳಿಗಯ್ಯ

ಮಹಾ ಜೀವನದ
ನೆರಳು–ಬೆಳಕು

# ಭಗ್ನಪ್ರೇಮಿ ಆಲ್ಫ್ರೆಡ್ ನೋಬೆಲ್

ಬಿ. ಪಾಂಡುರಂಗಯ್ಯ

“ನಿನ್ನ ಮತ್ತು ನನ್ನ ಜೀವನದಲ್ಲಿ ಅದೆಷ್ಟು ಅಂತರ! ನಿನಗೆ ಸುಖ, ಶಾಂತಿ ಮತ್ತು ಸಂತೋಷ ಎಲ್ಲವೂ ದೊರೆತಿವೆ; ಆದರೆ ನನ್ನ ಜೀವನವು ದಡವನ್ನು ಸೇರುವೆನೆಂಬ ಭರವಸೆ ತಪ್ಪಿದ, ಚುಕ್ಕಾಣಿ ಇಲ್ಲದ ನೌಕೆಯಂತಿದೆ. ತನ್ನ ದೌರ್ಭಾಗ್ಯದಿಂದ ಅದು ನೀರಿನ ಸೆಳವಿಗೆ ಸಿಕ್ಕು ದಿಕ್ಕುಗಾಣದೆ ಸುತ್ತುತ್ತಿದೆ. ಮನಸ್ಸಂತೋಷ ಪಡಿಸಿಕೊಳ್ಳೋಣವೆಂದರೆ, ನನ್ನ ಹೃದಯದ ಕಣಜದಲ್ಲಿ ಯಾವ ಅತೀತ ಮಧುರ ಸ್ಮೃತಿಗಳೂ ತುಂಬಿಲ್ಲ; ಮೃತ್ಯುವಿನ ನಂತರವೂ ಪ್ರಪಂಚದಲ್ಲಿ ನಾವು ಬಿಟ್ಟು ಹೋಗುವ ಪ್ರೇಮದ ಕುರುಹೂ ಇಲ್ಲ... ಕೇವಲ ಸುಂದರ ಭವಿಷ್ಯದ ಮೃಗಮರೀಚಿಕೆ ಮಾತ್ರ ಕಣ್ಮುಂದಿದೆ... ಮಧುರ ವಂಚನೆಯಲ್ಲಿ ಅದು ನನ್ನನ್ನು ಮುಂದೊಯ್ಯುತ್ತಿದೆ.”

ಆಲ್ಫ್ರೆಡ್ ನೋಬೆಲ್‌ನು ತನ್ನ ಸಹೋದರನಿಗೆ ಬರೆದಿದ್ದ ಪತ್ರದ ಕೆಲ ಸಾಲುಗಳು ಇವು! ಯಾರ ಹೆಸರಿನಲ್ಲಿ ಇಂದು ವಿಶ್ವದ ಶ್ರೇಷ್ಠ ಸಾಹಿತಿಗಳಿಗೆ, ವಿಜ್ಞಾನಿಗಳಿಗೆ ಶಾಂತಿಸಾಧಕರಿಗೆ ಪುರಸ್ಕಾರಗಳು ಕೊಡಲ್ಪಡುತ್ತಿವೆಯೋ, ಅದೇ ನೋಬೆಲ್ ಬರೆದ ಪತ್ರ ಇದು!

ಅಂತಾರಾಷ್ಟ್ರೀಯ ಮಹತ್ತ್ವದ ಈ ಶ್ರೇಷ್ಠ ಪುರಸ್ಕಾರ ಆ ಯೋಜನೆಯ ಮನಮೋಹಕ-ವರ್ಣರಂಜಿತ ತೆರೆಯ ಹಿಂದುಗಡೆ ನೋಬೆಲ್ಲನ ವೈಯಕ್ತಿಕ ಜೀವನದ ಅಂಧಕಾರ ಅಡಗಿದೆ. ಜಗತ್ತಿನ ಜನರ ದೃಷ್ಟಿಯಲ್ಲಿ ಅವನು ಅತ್ಯಂತ ಸುಖೀ ವ್ಯಕ್ತಿ! ಏಕೆಂದರೆ, ಅವನಲ್ಲಿ ಅಪಾರ ಭೌತಿಕ ಸಂಪತ್ತಿತ್ತು ಎಂಬ ಕಾರಣದಿಂದ ಮಾತ್ರ! ಆದರೆ ಅವನ ಹೃದಯದ ಅವ್ಯಕ್ತ ವೇದನೆಯನ್ನು ಹಂಚಿಕೊಳ್ಳುವವರು ಯಾರೂ ಇರಲಿಲ್ಲ. ಅವನು ತನ್ನ ಜೀವನವನ್ನೆಲ್ಲ ಒಬ್ಬ ಉದಾಸೀನ ಸಾಧಕನಂತೆ ಕಳೆದನು. ಅವನು ವಿಜ್ಞಾನ ಕ್ಷೇತ್ರದಲ್ಲಿ ಮಹತ್ಸಾಧನೆಯನ್ನು ಮಾಡಿ, ಅಪಾರ ಸಂಪತ್ತನ್ನು ಗಳಿಸಿದ್ದರೂ ಅವರ ವೈಯಕ್ತಿಕ ಜೀವನದಲ್ಲಿ ನೆಮ್ಮದಿಯೆಂಬುದೇ ಅವನಿಗೆ ದೊರೆಯಲಿಲ್ಲ. ಇದಕ್ಕೆ ಅವನ ಭಗ್ನ ಪ್ರೇಮವೇ ಕಾರಣ.

ನೋಬೆಲ್ಲನು ತನ್ನ ಹದಿನೇಳನೆಯ ವಯಸ್ಸಿನಲ್ಲೇ ಹುಡುಗಿಯೊಬ್ಬಳನ್ನು ಪ್ರೀತಿಸಿದನು. ಆದರೆ ಆಕೆಯ ಅಕಾಲಿಕ ಸಾವಿನಿಂದ ಅವನ ಮನಸ್ಸು ಒಡೆದುಹೋಯಿತು. ಅವನ ಅನೇಕ ಕವನಗಳಲ್ಲಿ ಈ ಹೃದಯ



ವಿದ್ರಾವಕ ವೇದನೆ ಅಡಗಿದೆ.

ಈ ಘಟನೆಯಿಂದ ಅನೇಕ ವರ್ಷಗಳ ವರೆಗೂ ಅವನು ಸ್ತ್ರೀಯರಿಂದ ದೂರವೇ ಇರತೊಡಗಿದನು. ಆದರೆ ವೈಭವ ನಗರಿ ಪ್ಯಾರಿಸ್ಸಿನಲ್ಲಿ ಭವ್ಯ ಭವನವೊಂದನ್ನು ಕೊಂಡ ನಂತರ, ಅವನಿಗೆ ತನ್ನ ಜೀವನದ ಅತಿ ದೊಡ್ಡ ಕೊರತೆಯ ಅನುಭವವಾಗತೊಡಗಿತು. ಜೊತೆಗಾರ್ತಿಯೊಬ್ಬಳನ್ನು ಬಿಟ್ಟು, ಉಳಿದ ಸುಖ-ಸಾಮಗ್ರಿಗಳ ರಾಶಿಯೇ ಆ ಭವನದಲ್ಲಿ ತುಂಬಿತ್ತು. ಅವನ ಅತೃಪ್ತ ಮನಸ್ಸಿನಲ್ಲಿ ಪುನಃ ಪ್ರೇಮ ಜೀವನದ ಬಗ್ಗೆ ಆಶಾಂಕುರ ಮೊಳೆಯತೊಡಗಿತು. ಯಾರಾದರೂ ಸುಶಿಕ್ಷಿತ, ಸುಸಂಸ್ಕೃತ ಮಹಿಳೆಯನ್ನು ತನ್ನ ಕಾರ್ಯದರ್ಶಿನಿಯನ್ನಾಗಿ ಮಾಡಿಕೊಳ್ಳಲು ಅವನು ಇಚ್ಛಿಸಿದನು. ಆಕೆಯು ತನ್ನ ಮೇಲ್ವಿಚಾರಕಳೂ ಆಗಿರಬೇಕೆಂಬುದು ಅವನ ಆಶಯವಾಗಿತ್ತು. ಅವನು ವಿಯೆನ್ನಾದ ದೈನಿಕ ಪತ್ರಿಕೆಯೊಂದರಲ್ಲಿ ಈ ಬಗ್ಗೆ ಜಾಹೀರಾತು ಕೊಟ್ಟನು. ಈ ಮೂಲಕ ಅವನಿಗೆ ಲೇಖಕಿ ವರ್ಥಾಳ ಪರಿಚಯವಾಯಿತು. ಆಕೆ ತನ್ನ ಕೌಟುಂಬಿಕ ಹಾಗೂ ಆರ್ಥಿಕ ತೊಂದರೆಗಳ ಒತ್ತಡಕ್ಕೆ ಮಣಿದು ನೋಬೆಲ್ಲನ 'ಗವರ್ನೆಸ್'ಳ ಕೆಲಸವನ್ನು ವಹಿಸಿಕೊಂಡಳು. ವರ್ಥಾಳಂತಹ ಪ್ರತಿಭಾನ್ವಿತ ಯುವತಿಯ ಸಹವಾಸದಿಂದ ನೋಬೆಲ್ಲನಿಗೆ ಅಪಾರ ಸಂತೋಷವಾಗುತ್ತಿತ್ತು. ಇಬ್ಬರೂ ಅತೃಪ್ತ ಪ್ರೇಮಿಗಳಂತೆ ಗಂಟೆಗಟ್ಟಲೆ ಮಾತನಾಡುತ್ತಿದ್ದರು. ಅವನು ತನ್ನ ವೇದನಾಪೂರ್ಣ ಕವನಗಳನ್ನು ಆಕೆಗೆ ಓದಿ ಹೇಳುತ್ತಿದ್ದನು ಮತ್ತು ಇಬ್ಬರೂ ಯಾವುದೋ ಸ್ವಪ್ನಲೋಕದಲ್ಲಿದ್ದವರಂತೆ ವ್ಯವಹರಿಸುತ್ತಿದ್ದರು.

ಆದರೆ ಒಂದು ದಿನ ನೋಬೆಲ್ಲನ ಈ ವರ್ಣರಂಜಿತ ಸ್ವಪ್ನವೂ ಮುರಿದು ಬಿತ್ತು. ಒಂದು ದಿನ, ಇದ್ದಕ್ಕಿದ್ದಂತೆ ನೋಬೆಲ್ಲನು, "ನೀನು ಯಾರನ್ನಾದರೂ ಪ್ರೀತಿಸಿದ್ದೀಯಾ ವರ್ಥಾ?" ಎಂದು ಆಕೆಯನ್ನು ಪ್ರಶ್ನಿಸಿದರು. ಆಕೆ ಅವನ ಮನಸ್ಸಿಗೆ ಆಘಾತವನ್ನುಂಟುಮಾಡಲು

ಅವಳಿಂದ ಸಾಧ್ಯವಾಗಲಿಲ್ಲ. ಆಕೆ ತಾನು ಮುಂಚೆ ಪ್ರೀತಿಸಿದ್ದ ಮತ್ತು ಈಗಲೂ ಪ್ರೀತಿಸುತ್ತಿರುವ ವ್ಯಕ್ತಿಯೊರ್ವನ ವಿಷಯವನ್ನು ಅವನಿಗೆ ತಿಳಿಸಿದಳು. ಕೇಳುತ್ತಾ-ಕೇಳುತ್ತಾ ನೋಬೆಲ್ಲನ ಮುಖಭಾವ ಗಂಭೀರವಾಗತೊಡಗಿತು; ಅವನ ಕಣ್ಣುಗಳ ಮುಂದೆ ಶೂನ್ಯತೆ ಹರಡಿತು ಮತ್ತು ಮನಸ್ಸಿನ ತುಂಬ ಉದಾಸೀನತೆ ತುಂಬಿಕೊಂಡಿತು. ಅವನು ದೀರ್ಘ ನಿಟ್ಟುಸಿರೊಂದನ್ನು ಬಿಟ್ಟು ತನ್ನ ಪ್ರಯೋಗಶಾಲೆಯನ್ನು ಹೊಕ್ಕನು. ಅಂದಿನಿಂದ ಆಕೆಯೊಂದಿಗೆ ಗಂಟೆಗಟ್ಟಲೆ ಮನಬಿಚ್ಚಿ ಮಾತನಾಡುವುದನ್ನು ನಿಲ್ಲಿಸಿ ಬಿಟ್ಟರು. ಮಾತನಾಡುವಾಗಲೂ ಕೆಲಸಕ್ಕೆ ಸಂಬಂಧಿಸಿದ ನಾಲ್ಕು ಮಾತುಗಳನ್ನಾಡಿ ದೂರಸರಿದುಬಿಡುತ್ತಿದ್ದನು.

ಇದಾದ ಕೆಲದಿನಗಳಲ್ಲೇ ಯಾವುದೊ ಕಾರ್ಯಾರ್ಥವಾಗಿ ಅವನಿಗೆ ಸ್ವೀಡನ್ನಿಗೆ ಹೋಗಬೇಕಾಗಿ ಬಂತು. ಅಲ್ಲಿಯ ಕೆಲಸವನ್ನು ಮುಗಿಸಿಕೊಂಡು, ಹಿಂತಿರುಗಿ ಬಂದು ನೋಡಿದಾಗ ವರ್ಥಾ ಕಾಣಿಸಲಿಲ್ಲ. ಆಕೆ ತನ್ನ ಹಳೆಯ ಪ್ರೇಮಿಯ ಬಳಿ ಹೋಗಿದ್ದಳು. ವಿಯೆನ್ನಾಕ್ಕೆ ಹೋಗಿ ಅವಳನ್ನು ಭೇಟಿ ಮಾಡಲು ನೋಬೆಲ್ಲನು ಪ್ರಯತ್ನಿಸಿದರೂ, ಆಕೆ ಅವನಿಗೆ ಕಾಣಸಿಗಲಿಲ್ಲ. ಈ ಘಟನೆಯಿಂದ ಅವನ ಜೀವನದಲ್ಲಿ ಇನ್ನೊಮ್ಮೆ ಗಾಢಾಂಧಕಾರ ಕವಿದಂತಾಯಿತು. ಜೀವನದ ಹಾದಿಯಲ್ಲಿ ಬಳಲಿದಾಗ ವಿಶ್ರಮಿಸಿಕೊಳ್ಳಲು ಒಂದು ವೃಕ್ಷದ ನೆರಳಿರಲಿಲ್ಲ; ಅವನ ಜೀವನಕ್ಕೆ ಆಸರೆಯನ್ನು ನೀಡುವ, ಮಮತೆಯಿಂದ ಆದರಿಸುವ ಜೊತೆಗಾರ್ತಿ ಸಿಗಲಿಲ್ಲ!

ನೋಡನೋಡುತ್ತಾ ಅವನಿಗೆ ಅರ್ಧ ವಯಸ್ಸು ಕಳೆದುಹೋಯಿತು. ಆಗಲೇ ಒಂದು ದಿನ ಅವನ ದೃಷ್ಟಿ ಹೂವಿನ ಅಂಗಡಿಯೊಂದರಲ್ಲಿದ್ದ ಸೋಫಿ ಹೇಜಳ ಮೇಲೆ ನಟ್ಟಿತು. ಈ ಹೂ ಮಾರುವ ಹುಡುಗಿಯನ್ನು ಸುಸಂಸ್ಕೃತ ಯುವತಿಯನ್ನಾಗಿ ಮಾರ್ಪಡಿಸಿ, ತನ್ನ ಜೀವನದ ಬಹು ದೊಡ್ಡ ಕೊರತೆಯನ್ನು

ಸಿದನು. ತತ್‌ಕ್ಷಣವೇ ಅವನು ಆಕೆಯನ್ನು ಪ್ಯಾರಿಸ್ಸಿನ ಗೌರವಯುತ ಸಂಸ್ಥೆಯೊಂದರಲ್ಲಿ ಶಿಕ್ಷಣ ಪಡೆಯಲು ಕಳುಹಿಸಿದನು. ಎಲ್ಲಾ ವಿಧದಲ್ಲಿ ಆಕೆಗೆ ಅನುಕೂಲವನ್ನು ಕಲ್ಪಿಸಿ ಕೊಟ್ಟನು.

ಈ ನವೀನ ವಿಷಯಗಳೆಲ್ಲಾ ಸೋಫಿಗೆ ತಿಳಿಯುತ್ತಲೇ ಇರಲಿಲ್ಲ. ತನಗೆ ದೊರೆಯುತ್ತಿದ್ದ ಅಪಾರ ಹಣದಿಂದ ಸಿಕ್ಕಾಪಟ್ಟೆ ಶೋಕಿ ಮಾಡಲಾರಂಭಿಸಿದಳು. ಯಾವ ರೀತಿಯ ಬೌದ್ಧಿಕ ವಿಕಾಸವೂ ಆಕೆಯಲ್ಲುಂಟಾಗಲಿಲ್ಲ. ಕೊನೆಗೆ ೧೮೭೮ರಲ್ಲಿ ಸೋಫಿಗೆ ಬರೆದ ಪತ್ರವೊಂದರಲ್ಲಿ ನೋಬೆಲ್ಲನು ಈ ರೀತಿ ತನ್ನ ಸೋಲನ್ನೊಪ್ಪಿಕೊಳ್ಳಬೇಕಾಯಿತು.

"ಅನೇಕ ವರ್ಷಗಳಿಂದ ನಿಜವಾದ ಒಡನಾಡಿಯೊಬ್ಬಳನ್ನು— ಯಾರ ಮನಸ್ಸಿನೊಂದಿಗೆ ನನ್ನ ಮನಸ್ಸು ಸಮರಸವಾಗಿ ಬೆರೆಯಬಹುದೋ ಅಂಥವಳನ್ನು—ನಾನು ಹುಡುಕುತ್ತಿದ್ದೆ. ಈಗ ನನಗೆ ತಿಳಿಯಹತ್ತಿದೆ, ಇಂತಹ ಮಿಲನ ಸಾಧ್ಯವಾಗುವುದು ಒಬ್ಬ ಪರಿಪಕ್ವ ಹೃದಯದ ಮತ್ತು ಸ್ತಿಮಿತ ಬುದ್ಧಿಯ ಸ್ತ್ರೀಯೊಂದಿಗೇ ಹೊರತು, ನಿನ್ನಂಥ ಇಪ್ಪತ್ತು ವರ್ಷದ ಸ್ವಚ್ಛಂದ ಯುವತಿಯೊಂದಿಗಲ್ಲ ಎಂದು ಈಗ ನನಗೆ ತಿಳಿಯುತ್ತಿದೆ."

ಇದು ಅವನ ಜೀವನದ ಅಂತಿಮ ಆಘಾತವಾಗಿತ್ತು. ಮೊದಲಿನ ಅನುಭವಗಳಿಂದ ಅವನ ಮನಸ್ಸಿಗೆ ದುಃಖವುಂಟಾಗಿತ್ತು. ಆದರೆ ಈ ಅನುಭವದಿಂದ ಅವನು ಸ್ತ್ರೀ ಜಾತಿಯ ಬಗೆಗೇ ನಿಷ್ಠುರನಾದನು. ಈ ಆಘಾತ ಕೊನೆಯದಾಗಿದ್ದರೂ, ಅವನ ಚಿತ್ತಸ್ಥೈರ್ಯವನ್ನು, ಕಾರ್ಯಶ್ರದ್ಧೆಯನ್ನು ವಿಚಲಿತಗೊಳಿಸಲು ಶಕ್ತವಾಗಲಿಲ್ಲ.

ಈಗ ಅವನು ಏಕಾಂಗಿಯಾಗಿದ್ದುದೇನೋ ಸರಿ; ಆದರೆ ಜೊತೆಗಾರ್ತಿಯನ್ನು ಹೊಂದಬೇಕೆಂಬ ಆಶೆ ಎಳ್ಳಷ್ಟೂ ಉಳಿದಿರಲಿಲ್ಲ. ತನ್ನೆಲ್ಲ ಸಮಯವನ್ನೂ ಬೌದ್ಧಿಕ ಮತ್ತು ಶಾರೀರಿಕ ಶಕ್ತಿಯೆಲ್ಲವನ್ನೂ ಶ್ರದ್ಧೆಯಿಂದ ತನ್ನ



**"ಇಷ್ಟು ಕತ್ತಲೆಯಲ್ಲಿ ಹೋಗಲು ಹೆದರಿಕೆಯಾಗುದಿಲ್ಲವೆ ? ನಾನೂ ಬರಲೆ ಜತೆಗೆ...?**

**"ಬೇಡ್ರಿ... ನೀವು ಜತೆಗೆ ಬಂದ್ರೇ ಹೆದರಿಕೆ ನನಗ !"**

ಕೆಲಸದಲ್ಲಿ ಉಪಯೋಗಿಸುತ್ತಿದ್ದನು. ತನ್ನ ಅರವತ್ಮೂರನೆಯ ವಯಸ್ಸಿನಲ್ಲಿ ಅವನು ಇಹಲೋಕವನ್ನು ತ್ಯಜಿಸಿದಾಗ ಅವಿವಾಹಿತನಾಗಿಯೇ ಉಳಿದಿದ್ದ.

ಆದರೆ ಕೆಲವು ಮಹಾನ್ ವ್ಯಕ್ತಿಗಳು ಅಮರವಾಗಿ ಬಾಳಲೆಂದೇ ಸಾಯುತ್ತಾರೆ! ಜೀವನದಿಂದ ತಿರಸ್ಕೃತನಾದ ಮತ್ತು ಮೃತ್ಯುವಿನಿಂದ ಅಮರತ್ವವನ್ನು ಪಡೆದ ಆ ವ್ಯಕ್ತಿಯ ನೆನಪನ್ನು, ಪ್ರತಿವರ್ಷವೂ ಕೊಡಲ್ಪಡುತ್ತಿರುವ ನೋಬೆಲ್ ಪುರಸ್ಕಾರಗಳು ತಪ್ಪದೆ ನಮ್ಮಲ್ಲಿ ಉಂಟುಮಾಡುತ್ತವೆ; ನೋವಿನಲ್ಲೂ ನಲಿವನ್ನು ಕಂಡ ಆ ಶ್ರೇಷ್ಠ ವ್ಯಕ್ತಿತ್ವಕ್ಕೆ ಗೌರವಭಾವದಿಂದ ನಮಿಸಲು ನಮ್ಮನ್ನು ಪ್ರೇರೇಪಿಸುತ್ತವೆ. ✡

ನಗೆಮಲ್ಲಿಗೆ

ಒಮ್ಮೆ ಸಿಗುವಂಥಾದ್ದು ಸರ್, ನೀವು ನನ್ನ ಪತ್ನಿಯನ್ನೇ ಕೊಂಡು ಹೋಗಿ.

— ಎಚ್. ಜಯಂತಿ ಹೆಬ್ಬಾರ್

## ಹಣದಿಂದೇನು?

ಆತ— "ನನ್ನಲ್ಲಿರುವ ದುಶ್ಚಟಗಳನ್ನೆಲ್ಲಾ ಬಿಟ್ಟರೆ ನನ್ನಪ್ಪ ೧೦,೦೦೦ ರೂಪಾಯಿ ಬಹುಮಾನ ಕೊಡ್ತಾರಂತೆ.

ಈತ— "ಹೌದೇ? ಪರವಾಗಿಲ್ಲ... ಆದರೂ ನೀನು ನಿನ್ನ ದುಶ್ಚಟಗಳನ್ನು ಬಿಟ್ಟಂತೆ ಕಾಣೋಲ್ಲ."

ಆತ— "ಇನ್ನೇನು ಮಾಡಲಿ ಹೇಳು. ದುಶ್ಚಟಗಳನ್ನು ತ್ಯಾಗ ಮಾಡಿದ ಬಳಿಕ ಆ ಹಣ ಇಟ್ಟುಕೊಂಡು ನಾನೇನು ಮಾಡಲಿ...

— ಎಸ್. ವಿಶ್ವನಾಥ

## ಹಾಗಲ್ಲ

ರೇಡಿಯೋ ರಿಪೇರಿ ಮಾಡುವವನೊಬ್ಬನನ್ನು ಅವನ ಮಿತ್ರ ಕೇಳಿದ. ನೀವು ಈ ಕೆಲಸ ಮಾಡುತ್ತ ಎಷ್ಟು ವರ್ಷಗಳಾದವು?

"ಹನ್ನೆರಡು ವರ್ಷ" ಎಂದು ಆತ ಉತ್ತರಿಸಿದ.

ಮಿತ್ರ— ಈ ಅವಧಿಯಲ್ಲಿ ನೀವು ಎಷ್ಟು ರೇಡಿಯೋ ರಿಪೇರಿ ಮಾಡಿದ್ದೀರಿ?

ಆತ— "ಹನ್ನೆರಡು."

ಮಿತ್ರ— ಹಾಗಾದರೆ ವರ್ಷಕ್ಕೆ "ಒಂದು" ಎಂದು ಅರ್ಥವಾಯಿತಲ್ಲ!

ಆತ— ಹಾಗೇನು ಇಲ್ಲ. ಮೊದಲನೆಯ ವರ್ಷದಲ್ಲಿಯೇ "ಹನ್ನೆರಡು" ಮಾಡಿದ್ದು.

— ಎಚ್. ಎಚ್. ಮಂಜಾವರ

## ಒಮ್ಮೆ ಲಭ್ಯ

ವರದಕ್ಷಿಣೆಯ ವಿರುದ್ಧ ಕ್ರಮ ಕೈಗೊಳ್ಳುವ ಪೋಲೀಸರು ವಿಚಾರಣೆಗಾಗಿ ಮದುವೆ ಮನೆಗೆ ಬಂದು ವರನೊಡನೆ,

ಪೋಲಿಸ್— ವರದಕ್ಷಿಣೆ ಯಾಕೆ ತಕ್ಕೊಂಡಿದ್ದು? ತನ್ನಿರಿ ಆ ಹಣಾನ, ವಶಪಡಿಸಿಕೊಳ್ಳುತ್ತೇವೆ.

ವರ— ಆ ಹಣಾನ ಪಡೀಬೇಕಾದರೆ

## ಸರತಿ ಮೇಲೆ

ಅಂದು ಸುಡು ಬಿಸಿಲಿನಲ್ಲಿ ಸೋಮು ಬೆವರು ಸುರಿಸುತ್ತಾ ಬಸ್‌ಗಾಗಿ ಕಾಯುತ್ತ ಕ್ಯೂನಲ್ಲಿ ನಿಂತಿದ್ದ. ಆಗ ಒಬ್ಬ ಭಿಕ್ಷುಕ ಕೈಗಾಡಿಯಲ್ಲಿ ಹೆಂಗಸೊಬ್ಬಳನ್ನು ಕೂರಿಸಿಕೊಂಡು "ಕುಂಟಿ ಸ್ವಾಮಿ. ಕುಂಟಿ ಬುದ್ಧಿ, ಕುಂಟಿಗೆ ಕಾಸು ಕೊಡಿ" ಎಂದು ಬೇಡುತ್ತಾ ಬರುತ್ತಿದ್ದ.

ಪಾಪ ಸೋಮುವಿಗೆ ಮನಸ್ಸು ಕರಗಿತು. ಹತ್ತು ಪೈಸೆಯನ್ನು ಭಿಕ್ಷುಕನ ಕಡೆ ಎಸೆದು "ಏನಯ್ಯಾ ದಿನವೂ ಹೀಗೆ ನೂಕುತ್ತಿದ್ದರೆ ಕೈನೋವು ಬರುವುದಿಲ್ಲವೇ" ಎಂದು ಕೇಳಿದ.

ಭಿಕ್ಷುಕ: "ಇಲ್ಲಾ ಸ್ವಾಮಿ. ನಾನು ದಿನಾ ಬಿಟ್ಟು ದಿನಾನೇ ನೂಕುವುದು."

ಸೋಮು "ಏನು ಒಂದು ದಿನ ಬೇಡಿದ ಭಿಕ್ಷೆ ಎರಡು ದಿನಕ್ಕೆ ಸಾಕಾಗುತ್ತದೆಯೇ" ಎಂದು ಆಶ್ಚರ್ಯದಿಂದ ಕೇಳಿದ.

ಅದಕ್ಕೆ ಭಿಕ್ಷುಕ: "ಎಲ್ಲಿ ಸಾಕಾಗುತ್ತೆ ಬುದ್ಧಿ. ಇವತ್ತು ಅವಳು ಗಾಡಿಯಲ್ಲಿ ಕುಳಿತಿದ್ದಾಳಲ್ಲ. ನಾಳೆ ನಾನು ಕೂರುತ್ತೇನೆ. ಇವಳು "ಕುಂಟ ಸ್ವಾಮಿ, ಕುಂಟ ಬುದ್ಧಿ ಕುಂಟನಿಗೆ ಕಾಸು ಕೊಡಿ" ಎಂದು ಗಾಡಿ ನೂಕುತ್ತಾ ಬರುತ್ತಾಳೆ" ಎಂದು ಹೇಳಿ ಮುಂದೆ ಹೊರಟ.

— ಎಸ್. ಎ. ಜಂಗಾವಿ

## ಸಲಹೆ

ಸೇತುವೆಯಿಂದ ಹೊಳೆಗೆ ಹಾರಲಿದ್ದ ಮನುಷ್ಯನನ್ನು ತಡೆದು ಪೋಲಿಸ್ ಮರಿಸಿದ್ದ: "ಏಯ್, ಒಂದು ವೇಳೆ ನೀನು ಹೊಳೆಗೆ ಹಾರಿದರೆ ನಿನ್ನನ್ನುಳಿಸಲು ಹಿಂದೆಯೇ ನಾನೂ ಹಾರಬೇಕಾಗುತ್ತದೆ. ಈ ಕೊರೆಯುವ ಛಳಿಯಲ್ಲಿ ಅಂಬುಲೆನ್ಸ್‌ಗಾಗಿ ಕಾಯುತ್ತಿರುವಾಗಲೇ ಇಬ್ಬರೂ ನ್ಯುಮೋನಿಯಾ ಹತ್ತಿ ಸಾಯಬೇಕಾದೀತು. ನೀನು ಬುದ್ಧಿವಂತನಾದರೆ, ನನಗಾಗಬಹುದು

ದಾದ ತೊಂದರೆ ತಪ್ಪಿಸಲು, ನೇರವಾಗಿ ಮನೆಗೆ ಹೋಗಿ ನೇಣು ಹಾಕಿಕೋ!" ಎಂದು ಸಲಹೆ ನೀಡಿದ —ಕುಮಾರ ಅಳಲೆಮಠ

## ಇಷ್ಟೇಕೆ ಪೇಚಾಟ

ಒಬ್ಬ ಹಳ್ಳಿಯವನು ತನ್ನ ಹಿತ್ತಲಿನಲ್ಲಿ ಒಂದು ಗುಂಡಿ ತೋಡಿದ. ಕಲ್ಲುಮಣ್ಣು ಎಲ್ಲಾ ಸೇರಿ ಒಂದು ಸಣ್ಣ ಗುಡ್ಡವೇ ಆಯಿತು. ಇದನ್ನೆಲ್ಲಾ ಎಲ್ಲಿ ಸುರಿಯುವುದು. ಎಲ್ಲಿಗೆ ಸಾಗಿಸುವುದು ಎಂದು ಅವನಿಗೆ ಚಿಂತೆಗಿಟ್ಟುಕೊಂಡಿತು. ಪಕ್ಕದ ಮನೆಯವನನ್ನು ಕರೆದು "ಇದನ್ನು ನಿನ್ನ ಹಿತ್ತಲಿನಲ್ಲಿ ಸುರಿದು ಬಿಡುತ್ತೇನೆ" ಎಂದ.

ಅದಕ್ಕೆ ಅವನು. "ಅಯ್ಯಾ ಇದಕ್ಕೆ ಯಾಕೆ ಇಷ್ಟು ಪೇಚಾಡುತ್ತೀಯಾ ಇನ್ನೊಂದು ಗುಂಡಿಯನ್ನು ನಿನ್ನ ಹಿತ್ತಲಿನಲ್ಲೇ ತೋಡಿ ಈ ಕಲ್ಲು ಮಣ್ಣನ್ನು ಎಳೆದು ಭರ್ತಿ ಮಾಡು" ಎಂದು ಸಲಹೆ ಮಾಡಿದ.

—ಶ್ರೀ ರಾಮನಾ

## ಭಯ ಬೇಡ

ಬ್ರಾಹ್ಮಣ:— ದಾರಿಹೋಕನನ್ನು ಕುರಿತು, ಅಯ್ಯಾ ಈ ಕೊಳದಲ್ಲಿ ಮೀನುಗಳಿವೆಯೇ? ನಾನು ಸ್ನಾನ ಮಾಡಬೇಕು. ನನಗೆ ಮೀನುಗಳೆಂದರೆ ಭಯ.

ದಾರಿಹೋಕ:— ನಿಮಗೆ ಭಯವೇ ಬೇಡ. ಏಕೆಂದರೆ ಈ ಕೊಳದಲ್ಲಿ ಒಂದು ಮೊಸಳೆಯಿದೆ. ಅದು ಇಲ್ಲಿರುವ ಮೀನುಗಳೆಲ್ಲವನ್ನೂ ತಿಂದು ಬಿಟ್ಟಿದೆ.

—ಮಾಗಡಿ ರಂಗನರಸಿಂಹಯ್ಯ

## ಕಾರಣ

ಹಳ್ಳಿಯ ರಂಗೇಗೌಡ ಹೊಸದರಲ್ಲಿ ತಂದೆಯಾಗಲಿದ್ದ. ಅವನ ಹೆಂಡತಿ ಪ್ರಸವ ವೇದನೆಯಿಂದ ನರಳುತ್ತಿದ್ದುದನ್ನು ನೋಡಿ ತಾಯಿ ಮಹಾತಿಗೆ ಪಟ್ಟಣದಿಂದ ಡಾಕ್ಟರ್‌ನೊಬ್ಬನನ್ನು ಕರಕೊಂಡು ಬಂದ. ಡಾಕ್ಟರ್ ಬಂದವನೇ ನೇರ ಈತನ ಹೆಂಡತಿ ಇದ್ದ ರೂಮನ್ನು ಪ್ರವೇಶಿಸಿ ಬಾಗಿಲು ಹಾಕಿಕೊಂಡ. ಗೌಡ "ದ್ಯಾಂವರೇ ಕಾಪಾಡು" ಎಂದು ಹೊರಕೂತ.

ಸ್ವಲ್ಪ ಸಮಯವಾದಾಗ ಬಾಗಿಲು ತೆರೆಯಿತು. ಡಾಕ್ಟರ್ ಕುತ್ತಿಗೆ ಮಾತ್ರವೇ ಹೊರಹಾಕಿ "ಒಂದು ಕತ್ತಿ ಕೊಡೋ" ಎಂದ. ಗೌಡ ತಂದು ಕೊಟ್ಟ. ಪುನಃ ಸ್ವಲ್ಪ ಹೊತ್ತಿನಲ್ಲಿ "ಒಂದು ಸುತ್ತಿಗೆ ಕೊಡೋ" ಎಂದಾಗ ಗೌಡ ಗಾಬರಿಯಾಗಿ ಬೇಗನೇ ಅದನ್ನೂ ತಂದು ಕೊಟ್ಟ. ಒಂದು ನಿಮಿಷ ಕಳೆದು ಪುನಃ ಬಂದ ಡಾಕ್ಟರ್ "ಒಂದು ಪಿಕಾಸು ಕೊಡೋ" ಎಂದ. ಗೌಡ ಕಂಗಾಲು. "ಏನ್ ಡಾಕ್ಟ್ರೆ ಹೆರಿಗೆ ಆಯಿತೇ?" ಕೇಳಿದ ಗೌಡ. "ಅದೇನಿಲ್ಲಾ ನನ್ನ ಬ್ಯಾಗ್ ಮುಚ್ಚಳ ತೆಗೆಯಲಾಗುವುದಿಲ್ಲ, ಅದಕ್ಕೆ ಕೇಳಿದೆ." ಗೌಡ ನಿಟ್ಟುಸಿರು ಬಿಟ್ಟು ಬೇಗನೇ ಅದನ್ನೂ ತಂದುಕೊಟ್ಟ.

—ರಾಮದಾಸ ಕಾಸರಗೋಡು

## ನಿಮ್ಮ ವಿಚಾರ

ಪಾರ್ಲಿಮೆಂಟಿನಲ್ಲಿ ಭಾಷಣ ಮಾಡುವಾಗ ವಿರೋಧಿಗಳನ್ನು ಮಾತಿನಲ್ಲಿ ಫಜೀತಿಗೊಳಿಸಿದರೂ ಹಾಸ್ಯದ ಚಟಾಕಿಯನ್ನು ಹಾರಿಸುವುದರಲ್ಲಿ ಬ್ರಿಟನ್ನಿನ ಪ್ರಧಾನಿ ಚರ್ಚಿಲ್ಲರು ಹೆಸರುವಾಸಿಯಾಗಿದ್ದರು. ಅವರೊಮ್ಮೆ ದೇಶದ ಆಹಾರ ಧೋರಣೆಯ ಬಗ್ಗೆ ಪಾರ್ಲಿಮೆಂಟಿನಲ್ಲಿ ವಿವರಣೆ ಕೊಡುವಾಗ ವಿರೋಧಿ ಪಕ್ಷದ ಸದಸ್ಯನೊಬ್ಬ ಮೇಜುಗುದ್ದಿ "ನಮ್ಮ ದನಗಳಿಗೆ ಮೇವು ಇಲ್ಲ. ಹಿಂಡಿ ಇಲ್ಲ. ಹೊಟ್ಟು ಇಲ್ಲ ನಾವು ಏನು ಮಾಡಬೇಕು" ಎಂದು ಕೂಗಿಕೊಂಡ.

ಪ್ರಧಾನಿ ಚರ್ಚಿಲ್ಲರಿಂದ 'ರಾಕೆಟ್'ನಂತೆ ಬಂದು ಉತ್ತರ.

"ಮೊದಲು ಮನುಷ್ಯರು ತಿನ್ನುವ ಆಹಾರದ ಬಗ್ಗೆ ನನ್ನ ಹೇಳಿಕೆ ಮುಗಿಸುತ್ತೇನೆ ಆ ಮೇಲೆ ನಿಮ್ಮ ಆಹಾರದ ಬಗ್ಗೆ ವಿವರಣೆಯನ್ನು ತಪ್ಪದೇ ಹೇಳುತ್ತೇನೆ"

—ಕೆ. ನಾಗರಾಜ

# ಚಿಕಿತ್ಸೆ

ಎಸ್. ಎಲ್. ಪಿ.

"ನಮಸ್ಕಾರ ರಾಯರೇ, ಏನು ಸುಮ್ಮನೆ ಕುಳಿತಿರುವಿರಿ? ಮೋರೆ ಸಪ್ಪಗೆ ಕಾಣಿಸುತ್ತಿದೆ."

ನಾನು ರೈಲು ಬಂಡಿಯ ಎರಡನೆಯ ತರಗತಿಯ ಕ್ಯಾರೇಜನಲ್ಲಿ ಕುಳಿತಿದ್ದೆನು. ವಾತದ ಬೇನೆಯಿಂದ ಬಳಲುತ್ತಿದ್ದೆನು. ಇಂತಹ ಸಮಯದಲ್ಲಿ ಒಬ್ಬ ಗೃಹಸ್ಥನು ನನ್ನ ಡಬ್ಬಿಯಲ್ಲಿ ಹತ್ತಿ ಮೇಲಿನ ಮಾತನ್ನು ಕೇಳಿದನು. ಆ ವ್ಯಕ್ತಿಯು ನನ್ನ ಗುರುತಿನವನಲ್ಲ.

ನಾನು ಆಯಾಸದಿಂದ ಆತನಿಗೆ ಪ್ರತಿನಮಸ್ಕಾರ ಮಾಡಿ "ರಾಯರೇ, ಬಾವಿನ ಬೇನೆ; ಬಹಳ ನೋವು; ಪ್ರಾಣ ಹೋಗುತ್ತಿದೆ" ಎಂದೆನು.

ಬಂದ ಗೃಹಸ್ಥನು ನನ್ನ ಕಡೆಗೆ ನಿಟ್ಟಿಸಿ– "ಅಯ್ಯೊ! ತಮಗೆ ವಾತರೋಗವೇ? ಈಗ ಎಲ್ಲಿಂದ ಬಂದಿರಿ?" ಎಂದು ಕೇಳಿದನು.

"ಸ್ವಾಮಿ, ನನಗೆ ಮುಂಬಯಿಯಲ್ಲಿ ನೌಕರಿಯಿದೆ; ಈಗ ರಜೆ ಪಡೆದು ಊರಿಗೆ ಹೊರಟಿದ್ದೇನೆ. ಈ ಹಾಳು ಬೇನೆಗೆ ಬೇಕಾದಷ್ಟು ಮಾಡಿದ್ದಾಯಿತು. ಸ್ವಲ್ಪವೂ ಹಿಮ್ಮೆಟ್ಟಲೊಲ್ಲದು; ಸಂಗಡ ಕರೆದುಕೊಂಡೆ ಹೋಗುವಂತೆ ತೋರುತ್ತಿದೆ. ಆದರೂ ಈ ಭಾರಿ ರಜೆಯಲ್ಲಿ ಕೊನೆಯ ಪ್ರಯತ್ನವನ್ನು ಮಾಡಬೇಕೆಂದಿದ್ದೇನೆ."

"ಏನು? ಬೇಕಾದಷ್ಟು ಚಿಕಿತ್ಸೆಯನ್ನು ಮಾಡಿದರೂ ಏನೂ ಪ್ರಯೋಜನವಾಗಲಿಲ್ಲವೇ? ಏನೂ ಗುಣ ಬಾರದ ಅದೆಂಥ ಚಿಕಿತ್ಸೆ ರಾಯರೇ? ತಮ್ಮ ಇಚ್ಛೆಯಿದ್ದರೆ..."

"ಹೇಳಿರಿ ರಾಯರೇ, ಅವಶ್ಯ ಹೇಳಿರಿ."

"ನನ್ನ ಚಿಕಿತ್ಸೆಯನ್ನಷ್ಟು ಮಾಡಿಸಿ ನೋಡಬೇಕೆಂದು ನನ್ನ ಪ್ರಾರ್ಥನೆ, ನಾನು ಹಲವು ಜನ ವಾತರೋಗಿಗಳಿಗೆ ಚಿಕಿತ್ಸೆ ಮಾಡಿದ್ದೇನೆ. ದೇವರ ದಯೆಯಿಂದ ನಾಲ್ವರಲ್ಲಿ ಮೂವರಿಗೆ ತಪ್ಪದೆ ಗುಣ ಬಂದಿರುವದೆಂದು ಧೈರ್ಯದಿಂದ ಹೇಳಬಲ್ಲೆ. ರಾಯರೇ, ಹಾ ಹಾ ಹಾ ಹಾ! ಆತ್ಮಸ್ತುತಿಮಾಡಿಕೊಳ್ಳಬೇಕಾಗುತ್ತಿದೆಯೆಂದು ಸ್ವಲ್ಪ ಸಂಕೋಚ; ತಮಗೆ ನಂಬಿಗೆಯಿದ್ದರೆ ಈಗಲೇ..."

"ಇದೇನು ಮಾತು ರಾಯರೇ? ಬೇನೆಯ ವ್ಯಥೆಯನ್ನು ಅನುಭೋಗಿಸಿ ಸಾಕಾಗಿ ಹೋಗಿದೆ. ತಮ್ಮ ಚಿಕಿತ್ಸೆ ಎಂಥದು? 'ಫೀ' ಏನು?"

ಆ ಗೃಹಸ್ಥನ ವೇಷವು ಅರ್ಧನಾಗರಿಕವಾದದ್ದು. ಮೋರೆಯು ಮಾತ್ರ ಸಣ್ಣ ಮನುಷ್ಯರಂಥದು. ಡಾಕ್ಟರರಂತೆ ಬೂಟು ಪಾಟ್ಲೂನು ಮೊದಲಾದ ಪೂರ್ಣ ಯುರೋಪೀಯ ವೇಷವಿಲ್ಲದಿದ್ದರೂ ಆತನ ಶರ್ಟು, ಕೋಟು, ಸ್ಲೀಪರುಗಳು ಆತನ ಹುಂಬನಲ್ಲವೆಂಬದನ್ನು ತೋರ್ಪಡಿಸುತ್ತಿದ್ದವು. ರೋಲ್ಡ

(ವಾಗ್ಭೂಷಣ [೧೯೩೭] ಪತ್ರಿಕೆಯಿಂದ ಸಂಗ್ರಹ– ಕು ನಿವೇದಿತಾ)

ಗೋಲ್ಡ್ ಫ್ರೇಮಿನ ಕನ್ನಡಕವು ಆತನ ನಾಗರಿಕತನಕ್ಕೆ ಸಾಕ್ಷಿಯಾಗಿತ್ತು. ಮೆಡಿಕಲ್ ಪರೀಕ್ಷೆಗಳಾವವೂ ಅವನಿಗೆ ಆಗಿರದಿದ್ದರೂ ಕೊರಳಲ್ಲಿ ಹಾಕಿದ ಹೃದಯಕ್ರಿಯಾ ಪರೀಕ್ಷಕ ನಳಿಕೆಯು ಆತನು ಚಿಕಿತ್ಸಕನೆಂದು ಆಣೆಮಾಡಿ ಹೇಳುತ್ತಿತ್ತು. ನನಗೆ ಆತನಲ್ಲಿ ನಂಬಿಗೆ ಹುಟ್ಟಿತು. ಆದುದರಿಂದಲೇ ಮೇಲಿನ ಮಾತನ್ನಾಡಿದೆನು.

"ಮೊದಲು ತಮಗೆ ಎಲ್ಲೆಲ್ಲಿ ವಾತ ಹಿಡಿದಿರುವದೆಂಬುದನ್ನು ತೋರಿಸಿರಿ; ಇಲ್ಲಿಯೇ ಈಗಲೇ ಚಿಕಿತ್ಸೆ ಮಾಡಿ ಗುಣಪಡಿಸುವೆನು."

"ಇಲ್ಲಿ ಮೊಳಕೈ ಸಂದುಗಳಲ್ಲಿ; ಇಲ್ಲಿ ಕಾಲಿಗೆ ಹಿಮ್ಮಡದ ಮೇಲೆ; ಇತ್ತ ಬೆನ್ನ ಮೇಲೆ, ಕುತ್ತಿಗೆಯ ಕೆಳಗಡೆಗೆ"

"ಹುಂ ಎಲ್ಲೆಲ್ಲಿ? ನೋಡುವ; ಹಿಮ್ಮಡಗಳಲ್ಲಿಯೇ? ದೊಡ್ಡ ಮಾತಲ್ಲ; ಮೊಳಕೈ ಸಂದುಗಳಲ್ಲಿಯೇ? ಆಗಬಹುದು, ಅಡ್ಡಿಯಿಲ್ಲ; ಮತ್ತೆ? ಬೆನ್ನ ಮೇಲ್ಗಡೆಯೇ? ಆಗಲಿ, ಸ್ವಲ್ಪ ತಾಳಿರಿ, ನೋಡುವೆನು. ಕೈಯನ್ನು ಮುಂದೆ ಮಾಡಿರಿ, ಇಲ್ಲಿಯೇ ನೋವೇನು?"

"ಉ:, ಸ್ವಲ್ಪ ಮೇಲೆ; ಉಹುಹು, ಅಯ್ಯೋ ಅಲ್ಲಿಯೇ ಅಲ್ಲಿಯೇ,"

"ಮತ್ತೆಲ್ಲಿ? ಕುತ್ತಿಗೆಯ ಕೆಳಗೆಯೇ?" ಎಂದು ಕೇಳುತ್ತ ಅಲ್ಲಿಯೂ ಸ್ವಲ್ಪ ತಿಕ್ಕಿ ಬಾರಿಸಿ ನೋಡಿ, ಅವನು, "ಇದೇನು ಸಹಜವಾಗಿ ಗುಣವಾಗುವದು, ಬಲಿತ ರೋಗವಲ್ಲ," ಎಂದನು.

"ಸಹಜವಾಗಿ ಗುಣವಾಗುವದೇ? ಫೀಯನ್ನೇನು ಕೊಡಬೇಕಾದೀತು ಡಾಕ್ಟರರೇ?"

"ಸಹಜವಿಷ್ಟೇ ಅಲ್ಲ, ಸ್ವಲ್ಪ ವೇಳೆಯೊಳಗೇ"

"ಡಾಕ್ಟರರೇ. ಬಲಿತ ರೋಗವಲ್ಲವಾದರೆ ಇಷ್ಟು ದಿವಸ..."

"-ಹೌದು ನೀವು ಆಕ್ಷೇಪಿಸುವದು ನಿಜ; ಎಲ್ಲರೂ ವಾತರೋಗಕ್ಕೆ ಚಿಕಿತ್ಸೆಯನ್ನರಿಯರು. ನನಗಾದರೂ ಮೊದಲು ಎಲ್ಲಿ ಗೊತ್ತಿತ್ತು? ಎಷ್ಟು ಕಡೆಗೆ ಹೋಗಿ ಕಲಿತು ಈ ಚಿಕಿತ್ಸೆಯಲ್ಲಿ ಪ್ರಾವೀಣ್ಯ ಪಡೆದಿರುವೆನೆಂಬುದನ್ನೂ ಎಷ್ಟು ರೋಗಿಗಳನ್ನು ನೋಡಿ ಅನುಭವ ಪಡೆದಿರುವೆನೆಂಬದನ್ನೂ ಎಷ್ಟೆಂದು ಹೇಳಲಿ? ಇಂದು ಸುಯೋಗವೆಂದೇ ತಾವು ಭಾವಿಸಬೇಕು."

"ನಿಜ. ನನಗೆ ಚಿಕಿತ್ಸೆಯನ್ನು ಈಗಲೇ ಮಾಡುವಿರಲ್ಲವೇ?"

"ನನ್ನದೇನೂ ಅಡ್ಡಿಯಿಲ್ಲ; ಆದರೆ ಇನ್ನೊಮ್ಮೆ ನಾನು ಚೆನ್ನಾಗಿ ಪರೀಕ್ಷಿಸಿ ನೋಡಬೇಕು."

"ಅದಕ್ಕೇನು? ನೋಡಬಹುದಲ್ಲವೇ? ಆದರೆ ತಾವು ಫೀಯನ್ನು ಹೇಳಲಿಲ್ಲವಲ್ಲ?"

"ಓ! ಫೀಯ ವಿಚಾರವೇಕೆ? ತಾವು ಕೈಯೆತ್ತಿ ಒಂದು ಕಾಸನ್ನೂ ಕೊಡಬೇಕಾದುದಿಲ್ಲ. ರಾಯರೇ, ನನ್ನ ಚಿಕಿತ್ಸೆಯು ರೋಗದ ಮೂಲವನ್ನು ಕಡಿಯದ ಪಾಶ್ಚಾತ್ಯ ಚಿಕಿತ್ಸೆಯಲ್ಲ; ಹಿಮಾಲಯದಿಂದ ಬಂದ ಒಬ್ಬ ಯೋಗಿಯು ನನಗೆ ಈ ಚಿಕಿತ್ಸಾಕ್ರಮವನ್ನು ಹೇಳಿ ಒಂದು ಸಿದ್ಧೌಷಧಿ ಮೂಲಿಕೆಯನ್ನು ಕೊಟ್ಟಿರುವನು. ಈ ರೋಗದ ಮಟ್ಟಿಗೆ ಗುಣವಾದ ಹೊರತು ಒಂದು ಕಾಸನ್ನೂ ಹಿಡಿಯಕೂಡದೆಂದು ಆ ಮಹಾತ್ಮನ ಕಟ್ಟಪ್ಪಣೆಯಿರುವದು. ಈ ನನ್ನ ಕೈಪೆಟ್ಟಿಗೆಯಲ್ಲಿ ಆ ಮೂಲಿಕೆಯಲ್ಲದೆ ಇನ್ನೇನೂ ಇಲ್ಲ. ಆದರ ಮಹಿಮೆಯಿಂದ ನನಗೆ ಎಲ್ಲೆಲ್ಲಿಯೂ ಮರ್ಯಾದೆ. ವಾತರೋಗದ ಹೊರತು ಉಳಿದ ಕೇಸುಗಳಲ್ಲಿ ಪಾಶ್ಚಾತ್ಯ ಔಷಧಗಳನ್ನೇ ನಾವೂ ಉಪಯೋಗಿಸುವೆವು."

"ಈಗ ಏನೂ ವೆಚ್ಚವಿಲ್ಲವೇ? ಮುಂದೆ ತಮಗೆ ಇನಾಮು..."

ಡಾಕ್ಟರ್ ಸಾಹೇಬರು ಮುಗುಳ್ನಗೆ ನಗುತ್ತ, "ಇನಾಮೂ ಇಲ್ಲ, ಗಿನಾಮೂ ಇಲ್ಲ; ರಾಯರೇ, ಪ್ರೀತಿಯ ಉದ್ಯೋಗವೆಂದು ಮಾಡುವೆನು. ಪೂರ್ಣ ಗುಣವಾದ ಬಳಿಕ ನಿಮ್ಮಲ್ಲಿದ್ದ ದುಡ್ಡೆಲ್ಲ ನನ್ನದೇ ಅಲ್ಲವೇನು? ಸ್ನೇಹಿತರ ಕೈ ಹಿಡಿಯುವಿರೇನು? ಹಾ ಹಾ ಹಾ ಹಾ..." ಎಂದು ದೊಡ್ಡದಾಗಿ ನಕ್ಕು ಬಿಟ್ಟರು.

"ಹಾಗಾದರೆ ತಾವು ಪರೀಕ್ಷಿಸುವದನ್ನಾರಂಭಿಸಿರಿ; ಇಲ್ಲಾರೂ ಇಲ್ಲವಲ್ಲ? ನಾನೇ

ನಾನು, ನೀವೇ ನೀವು. ಎರಡನೆಯ ತರಗತಿಯ ಬಂಡಿಯಲ್ಲಿ ನಮ್ಮನ್ನು ಬದಿಗೆ ದಬ್ಬುವದಕ್ಕೆ ಈ ದಿನ ಸಾಹೇಬರಾರೂ ಇಲ್ಲದ್ದು ನಮ್ಮ ಸುದೈವವು."

"ಒಳ್ಳೆಯದು, ಹಾಗಾದರೆ ಕಾಲ್ಚೀಲ, ಪಾಟ್ಲೂನುಗಳನ್ನು ಕಳೆಯಿರಿ."

ನಾನು ಹಾಗೆ ಮಾಡಿದೆನು. ಆತನು ಮುಖವನ್ನು ಗಂಭೀರವಾಗಿ ಮಾಡಿಕೊಂಡು ಕೆಲವು ವೇಳೆ ನನ್ನ ವಾತವನ್ನು ಪರೀಕ್ಷಿಸಿ "ರಾಯರೇ, ಚಿಕಿತ್ಸೆಯನ್ನು ಆರಂಭಿಸಲೋ? ಮಿರ್ಜಿಗೆ ಹೋಗುವಷ್ಟರಲ್ಲಿ ನನ್ನ ಕೆಲಸವು ಮುಗಿಯುವದು" ಎಂದು ನುಡಿದನು.

"ಕೇಳುವದೇನು? ಆರಂಭಿಸಿರಿ"

ಆತನು ಎದ್ದು ರೈಲುಬಂಡಿಯ ಬಾಗಿಲು ಕಿಡಿಕೆಗಳನ್ನು ಮೊದಲು ಭದ್ರವಾಗಿ ಮುಚ್ಚಿದನು. "ಬಳಿಕ ಒಳ್ಳೆಯದು, ಶರ್ಟು ಮೊದಲಾದವನ್ನೆಲ್ಲ ಕಳೆದುಬಿಡಿ" ಎಂದ.

ನಾನು ಕೂಡಲೇ ಹಾಗೆ ಮಾಡಿದೆನು. ಅದು ಚಳಿಗಾಲ. ಚಳಿಯಿಂದ ಮೈ ಜುಮ್ಮೆಂದಿತು. ಡಾಕ್ಟರ್ ಮಹಾಶಯನಿಗೆ ಅತ್ತ ಲಕ್ಷವೇ ಇಲ್ಲ. ಅವನು ನನ್ನದೊಂದು ಪಂಜೆಯನ್ನು ಕೂಡಲೇ ತೋಯಿಸಿ ಅದನ್ನು ನನ್ನ ತೋಳುಗಳೊಡನೆ ಎದೆಗೆ ಸುತ್ತಿ ಹಾಕಿ ಗಟ್ಟಿಯಾಗಿ ಕಟ್ಟಿದನು. ಬಳಿಕ ನನ್ನ ಹಾಸಿಗೆಯ ಸುರಳಿಯನ್ನು ಬಿಚ್ಚಿ ಹಾಸಿ ಅದರ ಮೇಲೆ ಕಾಲು ಚಾಚಿ ಮಲಗಲು ಹೇಳಿದನು. ಹಾಸಿಗೆ ಕಟ್ಟುವ ಚರ್ಮದ ಪಟ್ಟಿಗಳನ್ನು ಹಾಸಿಗೆ ಉರುಳಿಸುವಾಗ ಅದರ ಕೆಳಗೆ ತಲೆಯ ಕಡೆಗೊಂದನ್ನು, ಕಾಲಕಡೆಗೊಂದನ್ನು ಉದ್ದಕ್ಕೆ ಇಟ್ಟಿದ್ದನು. ನಾನು ಮಲಗಿದ ಬಳಿಕ, "ರಾಯರೇ, ಇನ್ನೇನೂ ಹೆಚ್ಚಿಗೆ ಇಲ್ಲ; ಈ ಹಾಸಿಗೆಯು ನಿಮ್ಮ ಮೈಗೆ ಗಟ್ಟಿಯಾಗಿ ಅಂಟಿಕೊಂಡಿರುವಂತೆ ಮಾಡಬೇಕಾಗಿದೆ," ಎಂದು ಹೇಳಿ ಆತನು ಹಾಸಿಗೆಯ ಆಚೆಗೆ ಈಚೆಗೆ ಹಾಯ್ದು ಚರ್ಮದ ಪಟ್ಟಿಗಳಿಂದ ಹಾಸಿಗೆಯನ್ನು ನನ್ನ ಮೈಗೆ ತನ್ನ ಬಲವಿದ್ದಷ್ಟು ಮಟ್ಟಿಗೂ ಬಿಗಿದು ಕಟ್ಟಿದನು ಮತ್ತು "ನಿಮ್ಮ



"ರೋಗವು ಇನ್ನೇನೂ ಉಳಿಯಲಾರದು" ಎಂದನು.

ಆಗ ಬಂಡಿಯು ಪೂರ್ಣವೇಗದಿಂದ ನಡೆದಿತ್ತು.

"ಒಳ್ಳೆಯದು ಆ ಮಾಡಿರಿ, ಬಾಯಿಯನ್ನು ನೋಡುವೆ"

ನಾನು ಹಾಗೆ ಮಾಡಿದ ಬಳಿಕ ನನ್ನ ಮಫ್ಲರವನ್ನು ಮಡಿಚಿ ಮಾಡಿದ ಚೆಂಡನ್ನು ನನ್ನ ಬಾಯಲ್ಲಿ ತುರುಕಿದನು. ಮತ್ತು ತನ್ನ ಕೆಲಸವು ಮುಗಿಯುತ್ತ ಬಂದಿತು ಎಂದು ಹೇಳಿದನು.

ಇದೆಂತಹ ಚಿಕಿತ್ಸೆಯೋ ಎಂದು ನಾನು ವಿಚಾರಕ್ಕೆ ತೊಡಗಿದೆನು. ಅತ್ತ ಆತನು ನನ್ನ ಜೇಬಿನೊಳಗಿನ ಮನಿಬ್ಯಾಗನ್ನು ಹೊರದೆಗೆದು ಬಿಚ್ಚಿ ನೋಡಿದನು.

"ಇಶ್! ಕುಲಗೆಟ್ಟರೂ ಸುಖವಿಲ್ಲವಲ್ಲ?"

"ಇಪ್ಪತ್ತೈದು ರೂಪಾಯಿ ಮಾತ್ರ ನಿಮಗೆ ಮುಂಬಯಿಯಲ್ಲಿ ನೌಕರಿಯೆಂದು ಹೇಳಿದಿರಲ್ಲವೆ? ಒಳ್ಳೆಯದು ಟ್ರಂಕನ್ನು ನೋಡುವ." ಡಾಕ್ಟರನ ಕೈಪೆಟ್ಟಿಗೆಯಲ್ಲಿದ್ದ ಬೀಗದ ಕೈಸರದಲ್ಲಿ ಟ್ರಂಕಿನ ಬೀಗಕ್ಕೆ ಬರುವ ಬೀಗದ ಕೈ ಸಿಕ್ಕಿತು. ಕೂಡಲೆ ಟ್ರಂಕನ್ನು ತೆರೆದು ನೋಡಿದನು. ನೂರರ ಮೂರು ನೋಟುಗಳು, ಚಿಲ್ಲರೆ ನೋಟುಗಳೂ ರೂಪಾಯಿ ಸೇರಿ ೨೫ ರೂಪಾಯಿಗಳೂ ಒಟ್ಟಿಗೆ ೩೨೫ ರೂ. ಹೊರಬಿದವು.

"ಅಡ್ಡಿಯಿಲ್ಲ; ಇಷ್ಟುಹೊತ್ತಿಗೆ ಏನೋ ಸ್ವಲ್ಪ ಸಿಕ್ಕಿದಂತಾಯಿತು. ಒಳ್ಳೆಯದು, ನೀವು ನೋಟುಗಳ ನಂಬರುಗಳನ್ನು ಟಿಪ್ಪಣಿಸಿರಬಹುದಲ್ಲವೇ?"

"ಕೂಡಲೆ ಆತನು ನನ್ನ ಕೋಟಿನ ಜೇಬಿನೊಳಗಿನ ಡೈರಿಯನ್ನು ತೆರೆದು ನಾಲ್ಕಾರು ಪುಟಗಳನ್ನು ಮಗುಚಿ. ಭಲೆ! ಭಲೆ ನೋಟಿನ ನಂಬರುಗಳನ್ನಲ್ಲದೆ ಗಡಿಯಾರದ ನಂಬರನ್ನು ಕೂಡ ಟಿಪ್ಪಣಿಸಿರುವಿರಿ. ಶಾಬಾಸ್" ಎಂದನು. ಮತ್ತು ನಂಬರುಗಳನ್ನು ಟಿಪ್ಪಣಿಸಿದ ಪುಟಗಳನ್ನು ಹರಿದು ಚೂರುಚೂರು ಮಾಡಿ ನನ್ನೆದುರಿಗೆ ದೀಪದ ಕಡ್ಡಿಯಿಂದ ಆಗಲೇ ಸುಟ್ಟುಬಿಟ್ಟನು.

ಆ ಭಯಂಕರವಾದ ಚಳಿಯಲ್ಲಿ ಮೈಗೆ ಒದ್ದೆ ಬಟ್ಟೆ ಹತ್ತಿದ್ದರೂ ನನ್ನ ಸರ್ವಾಂಗವು ಬೆವತಿತು.

ಆತನು ಟ್ರಂಕನ್ನು ಮುಚ್ಚಿ, ಬೀಗದ ಕೈಸರವನ್ನು ಮರಳಿ ತನ್ನ ಕೈ ಪೆಟ್ಟಿಗೆಯಲ್ಲಿ ಹಾಕಿದನು. ಬಳಿಕ ನನ್ನ ಜಾಕೆಟಿನ ಜೇಬಿಗೆ ತೊಡಕಿಸಿದ ಬಂಗಾರದ ವಾಚನ್ನೂ ಅದರ ಸರಪಳಿಯನ್ನೂ ಕೈಯಲ್ಲಿ ತೆಗೆದುಕೊಂಡು ತನ್ನ ಜೇಬಿನಲ್ಲಿ ಹಾಕಿಕೊಂಡನು. ನೋಟುಗಳನ್ನು ಒಂದು ಜೇಬಿನಲ್ಲಿಯೂ ರೂಪಾಯಿಗಳನ್ನು ಇನ್ನೊಂದು ಜೇಬಿನಲ್ಲಿಯೂ ಇರಿಸಿಕೊಂಡನು.

"ನೋಡಿರಿ, ನನ್ನ ಚಿಕಿತ್ಸೆ ಮುಗಿಯಿತು; ಮುಂದಿನ ಮಿರ್ಜಿಯ ಸ್ಟೇಶನಿನಲ್ಲಿ ನಾನು



"ಒಂದು ಸೀರೆಯನ್ನು ಕೊಂಡುಕೊಳ್ಳುವ ವಿಚಾರದಲ್ಲಿ ನನಗೂ ನನ್ನೆಂಡ್ತೀಗೂ ಭಾರೀ ವಾಗ್ಯುದ್ಧವೇ ನಡೆಯಿತು... ಕೊನೆಗೆ ಗೆದ್ದಿದ್ದು ನಾನೇ."

"ಏನಂತ ಹೇಳಿದ್ರಿ...?"

"ಈಗ್ಗ ಹೋಗಿ ಕೊಂಡುಕೊಂಡು ಬಾ ಸಾರಾಯ್ತಿ, ಅಂದೆ."

ಇಳಿಯುವೆನು. ನೀವು ನಿಶ್ಚಿಂತರಾಗಿ ಅಲ್ಲಿಯ ವರೆಗೆ ಹಾಸಿಗೆಯು ಕಟ್ಟಿನಲ್ಲಿ ನಿದ್ದೆ ಮಾಡಿರಿ. ಮಿರ್ಜಿಯಂವರೆಗೆ ನಿಮಗೆ ಬಿಡುಗಡೆ ಇಲ್ಲ. ನೀವು ಮನಸ್ಸಿನಲ್ಲೇನೂ ಹಿಡಿಯಬೇಡಿರಿ; ನಿಮ್ಮ ಇಚ್ಛೆಯಂತೆ ಮಾಡಿದ್ದೇನೆ. ಮೊದ ಮೊದಲು ನಾನು ಫೀಯನ್ನೇನೂ ತೆಗೆದು ಕೊಳ್ಳಬಾರದೆಂದು ಮಾಡಿದ್ದೆನು. ಆದರೆ ನೀವು ಮೇಲೆ ಮೇಲೆ ಫೀಯನ್ನೇನು ಕೊಡಬೇ ಕಾಗುವದೆಂದು ಕೇಳಿದ್ದರಿಂದ ನನ್ನ ಮೊದಲಿನ ಸಂಕಲ್ಪವನ್ನು ಬಿಡಬೇಕಾಯಿತು. ಒಟ್ಟಿಗೆ, ನಿಮ್ಮ ನಾನೂರು ರೂಪಾಯಿಗಳ ಫೀ ಇನಾಮುಗಳನ್ನು ಸ್ವೀಕರಿಸಿ ಹೊರಟೆನು. ಒಳ್ಳೆಯದು ರಾಯರೇ, ಸ್ಟೇಶನ್ ಬಂದಿತು, ಹೋಗಿ ಬರುವೆನು" ಎಂದು ನುಡಿದನು.

ಬಳಿಕ ಆತನು ಅಲ್ಲಿ ಬಿದ್ದ ನನ್ನ ಬಟ್ಟೆಗಳ ನ್ನೆಲ್ಲ ನನ್ನ ಮೋರೆಗೂ ಕಾಲ ಕಡೆಗೂ ಸುತ್ತಿ ದನು. ನನಗೆ ಉಸಿರು ಕಟ್ಟುವಂತಾಯಿತು, ಅಷ್ಟರಲ್ಲಿ ಹೊರಗೆ ಪೋರ್ಟರರ 'ಮಿರ್ಜೀeee ಮಿರ್ಜೀeee' ಎಂಬ ಕೂಗು ಕೇಳಿಸಿತು.

ಬಂಡಿಯು ನಿಂತಕೂಡಲೇ ಬಾಗಿಲು ತೆರೆದ ಶಬ್ದವಾಯಿತು, ಕಳ್ಳರ ಗುರು ಡಾಕ್ಟರ್ ಸಾಹೇಬರು ಇಳಿದು ಹೋದರೆಂದು ಊಹಿಸಿದೆನು, ನನ್ನ ಮೈಯೆಲ್ಲ ಥರ ಥರ ನಡುಗತೊಡಗಿತು. ಕ್ರಮದಿಂದ ಕ್ರಮ ದಿಂದ ಬಾಹ್ಯಜಗತ್ತು ಶೂನ್ಯವಾದಂತೆ ಭಾಸವಾಯಿತು. ಸ್ವಲ್ಪ ಹೊತ್ತಿನಲ್ಲಿ ನನಗೆ ಎಚ್ಚರಿಕೆ ತಪ್ಪಿತು.

*

ಮೋರೆಯ ಮೇಲಿನ ಬಟ್ಟೆಗಳನ್ನೆಲ್ಲ ಯಾರೋ ಬದಿಗೆ ಸರಿಸಿದ ಬಳಿಕ ಕೆಲಹೊತ್ತಿಗೆ ಎಚ್ಚತ್ತು ನೋಡುತ್ತೇನೆ–ಒಬ್ಬ ಮರಾಠಿ ಹಮಾಲನು ಒಡಕಬಾಯಿಯಿಂದ ತನ್ನ ಜತೆಯವ ನಿಗೆ, "ಹಕಡ ಬಘಿತ್ಲಾಸ್ ಕುಣೇ ಯಾ ಬಿಚಾ-ರ್‍ಯಾಚೀ ಫಜೀತಿ ಕೇಲೀನ್," ಎಂದು ಹೇಳು ತ್ತಿರುವದನ್ನು ಕೇಳಿದೆನು.

ಹಲವರು ಹಮಾಲರು ನನ್ನ ಸುತ್ತಲೂ ನೆರೆದರು ನನಗೆ ಬಹಳ ಸಂಟಕವಾಗುತ್ತಿತ್ತು. ನಾನು ಬಹು ಕಷ್ಟದಿಂದ ಒಬ್ಬ ಹಮಾಲನ ಕಡೆಗೆ ನೋಡಿ. 'ಥೋಡ ಪಾಣಿ ಬಾಬಾ,' ಎಂದೆನು. ಒಬ್ಬನು ಒಂದು ಪಾತ್ರೆಯಲ್ಲಿ ನೀರನ್ನು ತಂದನು. ಏಳಲು ಪ್ರಯತ್ನಿಸಿ ದೆನು.' ಶಕ್ಯವಾಗಲಿಲ್ಲ. ಆತನಿಗೇ ಬಾಯಲ್ಲಿ ಸ್ವಲ್ಪ ನೀರನ್ನು ಹಾಕಹೇಳಿದೆನು. ನೀರು ಕುಡಿದ ಬಳಿಕ ಸ್ವಲ್ಪ ಸ್ವಸ್ಥನಾದೆನು. ಆ ಹಮಾಲರು ಹಾಸಿಗೆ ಕಟ್ಟಿಕೊಂಡು ಬಿದ್ದಿರುವ ನನ್ನ ಚಮತ್ಕಾರವನ್ನು ಕಂಡು ನನ್ನ ವೃತ್ತಾಂತವನ್ನೆಲ್ಲ ಕೇಳತೊಡಗಿದರು. ಆದರೆ ಅವರ ಕುತೂಹಲವನ್ನು ತೃಪ್ತಿಗೊಳಿಸುವಷ್ಟು ಸಾಮರ್ಥ್ಯವು ನನ್ನ ಮೈಯಲ್ಲಿರಲಿಲ್ಲ. ವೇಷ ಧಾರಿ ಡಾಕ್ಟರ್ ಸಾಹೇಬರು ಹೋದ ಅರ್ಧ ಘಂಟೆಯಾದ ಬಳಿಕ ರೇಲ್ವೆ ಪೋಲೀಸರು ನನ್ನ ಹತ್ತಿರ ಬಂದರು. ಪರಿಸ್ಥಿತಿಯನ್ನು ನೋಡಿ ಅವರೇ ಊರೊಳಗಿನ ಒಬ್ಬ ಡಾಕ್ಟರ ರನ್ನು ಕರೆಕಳುಹಿದರು. ಡಾಕ್ಟರರು ಕೂಡಲೆ ನನ್ನನ್ನು ಆಸ್ಪತ್ರೆಗೆ ಸಾಗಿಸಿದರು. ಅಲ್ಲಿ ೩-೪ ದಿನಗಳ ತರುವಾಯ ನನಗೆ ಪೂರ್ಣ ಗುಣ ವಾಯಿತು. ಆಶ್ಚರ್ಯವೇನೆಂದರೆ ಮೈಯಲ್ಲಿ ಹಿಡಿದಿದ್ದ ವಾತವೆಲ್ಲ ಆಗ ಪೂರ್ಣವಾಗಿ ಬಿಟ್ಟು ಹೋಗಿತ್ತು!

✡



ಅರಸ ಓಲಗದಲ್ಲಿದ್ದಾಗ ಅವನೆಡೆ ಕೆಲಸಕ್ಕೆ ಬರುವವರಿಗೆಲ್ಲ ಮುಕ್ತ ಪ್ರವೇಶ ವಿರಬೇಕು. ಅರಸನ ದರ್ಶನ ದುಸ್ತರವಾಯಿತೆಂದರೆ ಅವನ ಕೈಕೆಳಗಿನವರು ಕೆಲಸ ಗಳನ್ನೆಲ್ಲ ಕೆಡಿಸಿಬಿಡುವದು. ಅದರಿಂದ ಪ್ರಜೆಗಳು ಕೋಪಾವಿಷ್ಟರಾಗಿ ವೈರಿಪಕ್ಷ ಸೇರುವ ಭಯವಿದೆ ಅಗತ್ಯದ ಕೆಲಸಗಳನ್ನು ಕಾಲವಿಲಂಬವರಾಡದೆ ಗಮನಿಸಬೇಕು.

— ಚಾಣಕ್ಯ ನೀತಿ

# ಗಗನೇಂದ್ರನಾಥ ಠಾಕೂರ

ಮೂಲ : ಎಸ್. ಸಂಜೀವದೇವ
ಕನ್ನಡಕ್ಕೆ: ಹರಿಹರಪ್ರಿಯ

ಕಲೆ ಸಂಪ್ರದಾಯಬದ್ಧವಾಗಿ ಬೆಳೆದು ಸಂಪ್ರದಾಯ ವಿರುದ್ಧವಾಗಿ ಪರಿಣತಿ ಹೊಂದುತ್ತದೆ. ಬೆಳೆದ ತರುವಾಯ ಕೂಡಾ ಸಂಪ್ರದಾಯ ಬದ್ಧವಾಗಿಯೇ ಇದ್ದರೆ ಅದೊಂದು ಬಂಧನವಾಗಿ ಕಲೆ ಪರಿಣತಿ ಹೊಂದದು. ಸಂಪ್ರದಾಯವನ್ನು ಬಿಟ್ಟು ಒಂದು ವಿಧವಾದ ಸ್ವಚ್ಛಂದತೆಯನ್ನೂ ವ್ಯಕ್ತಿಗತ ವಿಧಾನವನ್ನೂ ಅವಲಂಬಿಸಿದಲ್ಲದೆ ಮಾನವನ ಪ್ರತಿಭೆ ಪ್ರಕಾಶಿಸುವುದಿಲ್ಲ.

ಸ್ವರ್ಗೀಯ ಗಗನೇಂದ್ರನಾಥ ಠಾಕೂರ ಭಾರತೀಯ ಚಿತ್ರಕಾರರಲ್ಲಿ ಸರ್ವ ಸ್ವತಂತ್ರರು. ಅವರ ತಮ್ಮ ಅವನೀಂದ್ರನಾಥ ಠಾಕೂರ. ಭಾರತೀಯ ಚಿತ್ರಕಲೆಯನ್ನು ಪುನರ್ಜೀವಗೊಳ್ಳುವ ದೊಡ್ಡ ಕೆಲಸ ಪ್ರಾರಂಭಿಸಿ ಚಿತ್ರಕಲೆಯಲ್ಲಿ ಭಾರತೀಯ ಸಂಪ್ರದಾಯಗಳನ್ನು ಹೇಳಿಕೊಡುವ ಪ್ರಯತ್ನದಲ್ಲಿದ್ದರೆ, ಗಗನೇಂದ್ರರು ಆ ಉದ್ಯಮಕ್ಕೆ ಸಹಕರಿಸುತ್ತಲೂ ತಾವು ತಮ್ಮ ಚಿತ್ರ ಸೃಷ್ಟಿಯನ್ನು ಮಾತ್ರ ವಿವಿಧ ಸ್ವತಂತ್ರ ಪಥದಲ್ಲಿ ನಡೆಸಿದರು.

ಗಗನೇಂದ್ರರ ಕಲ್ಪನೆಗೆ, ಕುಂಚಕ್ಕೆ ಸರಹದ್ದುಗಳಿಲ್ಲ. ಚಿತ್ರಕಲೆಯಲ್ಲಿ ಅನೇಕ ನೂತನ ಪಂಥಗಳನ್ನು ಅನುಸರಿಸಿದ್ದಾರೆ. ವಿಚಿತ್ರವಾದ ಆಕೃತಿಗಳನ್ನು ಸೃಷ್ಟಿಸಿದ್ದಾರೆ. ಹೊಚ್ಚ ಹೊಸ ನೆರಳು ಬೆಳಕುಗಳನ್ನು ಚಿತ್ರಿಸಿದ್ದಾರೆ. ಹೀಗೆ ಕಲ್ಪನಾ ಜಗತ್ತಿನ ಕವಾಟಗಳನ್ನು ತೆರೆದಿದ್ದಾರೆ.

ಆಧುನಿಕ ಭಾರತೀಯ ಚಿತ್ರಕಲಾ ಕ್ಷೇತ್ರದಲ್ಲಿ ಗಗನೇಂದ್ರರು ಏಕಾಂಗಿ. ಯಾರ ವಿಧಾನವನ್ನು ಅವರು ಅವಲಂಬಿಸಲಿಲ್ಲ. ಯಾರೂ ಅವರ ವಿಧಾನವನ್ನು ಅನುಸರಿಸಲಾರದೇ ಹೋದರು. ಅವರು ಯಾವ ವಿದ್ಯಾಲಯದಲ್ಲಿಯಾಗಲಿ, ಯಾವ ವ್ಯಕ್ತಿಗಳ ಬಳಿಯಾಗಲಿ; ಚಿತ್ರಕಲೆಯನ್ನು ಅಭ್ಯಸಿಸಲಿಲ್ಲ. ಅವರ ಚಿತ್ರಣ ಅತ್ತ ಪಾಶ್ಚಾತ್ಯ ಪದ್ಧತಿಗಾಗಲಿ, ಇತ್ತ ಪ್ರಾಚ್ಯ ಪದ್ಧತಿಗಾಗಲಿ ಸೇರದು. ಅದೆಲ್ಲಾ ಅವರ ಸ್ವಂತ ಮಾರ್ಗ. ಇಂಪ್ರೆಷನಿಜಂ, ಕ್ಯೂಬಿಜಂ ಪದ್ಧತಿಗಳಲ್ಲಿ ಅವರು ಚಿತ್ರಿಸಿದರು ಕೂಡ ಅವು ಪಾಶ್ಚಾತ್ಯ ದೇಶಗಳಲ್ಲಿ ಪ್ರಚಲಿತವಾಗಿದ್ದ ಪದ್ಧತಿಗಳಲ್ಲ. ಅವುಗಳಲ್ಲಿ ಕೂಡ ತಮ್ಮ ಸ್ವಂತ ಮಾರ್ಗವನ್ನೇ ಅವಲಂಬಿಸಿದ್ದಾರೆ.

ತಮ್ಮ ಅವನೀಂದ್ರರೊಂದಿಗೆ ಕೂಡಿ 'ಇಂಡಿಯನ್ ಸೊಸೈಟಿ ಆಫ್ ಓರಿಯಂಟಲ್ ಆರ್ಟ್' ಅನ್ನು ಸ್ಥಾಪಿಸಿ ಅದರಲ್ಲಿ ಎಷ್ಟೋ ಕೃಷಿ ಮಾಡುತ್ತಿದ್ದರು, ತಮ್ಮ ಅವಲಂಬಿಸಿದ ಭಾರತೀಯ ಚಿತ್ರಕಲೆಯ ಪದ್ಧತಿಯನ್ನು ಗಗನೇಂದ್ರರು ಅನುಸರಿಸಲಿಲ್ಲ. ಅಂತಹ ದೊಡ್ಡ ರಾಷ್ಟ್ರೀಯ ಉದ್ಯಮದ ಮಧ್ಯೆ ಕೆಲಸ ಮಾಡುತ್ತ; ಅದರ ಪ್ರಾಬಲ್ಯದಿಂದ ತಮ್ಮನ್ನು ತಾವು ರಕ್ಷಿಸಿಕೊಂಡು ಸೃಷ್ಟಿ ಕಾರ್ಯದಲ್ಲಿ ತಮ್ಮ ಪ್ರತ್ಯೇಕತೆಯನ್ನು ಮೆರೆದಿದ್ದು ದೊಡ್ಡ ಸಾಹಸವೆ.

ಗ್ರಾಮೀಣ ಪರಿಶ್ರಮಗಳೆಂದರೂ ಕೈಕೆಲಸ

ಗಳೆಂದರೂ ದೇಶೀಯ ಪದ್ಧತಿಯಲ್ಲಿ ಗೃಹಾಲಂಕರಣಗಳೆಂದರೂ ಗಗನೇಂದ್ರರಿಗೆ ಅತ್ಯಂತ ಆಸಕ್ತಿ. ಹೊಸತರದ ಫರ್ನಿಚರ್‌ಗೆ ತಾವೇ ಸ್ವತಃ ರಾಷ್ಟ್ರೀಯ ಪದ್ಧತಿಯಲ್ಲಿ ಡಿಜೈನ್‌ಗಳನ್ನು ಮಾಡುವರು. ಇಂಡಿಯನ್ ಸೊಸೈಟಿ ಆಫ್ ಓರಿಯಂಟಲ್ ಆರ್ಟ್ ಸ್ಥಾಪಿಸಿದ ನಂತರ ಅದರಲ್ಲಿನ ಫರ್ನಿಚರ್‌ಗೆ ತಾವೇ ಡಿಜೈನ್‌ಗಳು ಮಾಡಿ, ಪ್ರಖ್ಯಾತ ಶಿಲ್ಪಿ ಧನು ಷ್ಕೋಟಿ ಆಚಾರಿಯವರನ್ನು ಮದರಾಸಿನಿಂದ ಕಲಕತ್ತಾಕ್ಕೆ ಕರೆಸಿಕೊಂಡು ಬಂದು ತಮ್ಮ ಕಲ್ಪನೆ ಪ್ರಕಾರ ಆ ಸಾಮಾನುಗಳನ್ನೆಲ್ಲಾ ಮಾಡಿಸಿದರು.

ಗಗನೇಂದ್ರನಾಥ ಠಾಕೂರ ೧೮೬೭ರಲ್ಲಿ ಕಲಕತ್ತದಲ್ಲಿ ಜನಿಸಿದರು. ಅವರು ರವೀಂದ್ರನಾಥ ಠಾಕೂರರ ದೊಡ್ಡಪ್ಪನ ಮೊಮ್ಮಗ. ಅವನೀಂದ್ರನಾಥ ಠಾಕೂರರ ಅಣ್ಣ. ಚಿಕ್ಕಂದಿನಿಂದ ತುಂಬಾ ಸ್ವತಂತ್ರ ಪ್ರಕೃತಿಯುಳ್ಳ ವ್ಯಕ್ತಿ. ಬಾಲ್ಯದಿಂದ ಚಿತ್ರಕಾರರೇನಲ್ಲ. ಆದರೆ ವಿಶೇಷ ಸೌಂದರ್ಯಾನುಭೂತಿ, ರಸಪಿಪಾಸೆ, ಕಲಾನುರಾಗ ಮೊದಲಾದ ಹೃದಯ ತತ್ವ ಅವರಲ್ಲಿ ವ್ಯಕ್ತವಾಗುತ್ತಿದ್ದವು. ತುಂಬಾ ದೊಡ್ಡವರಾಗುವವರೆಗೂ ಅವರು ಚಿತ್ರಸೃಷ್ಟಿಯನ್ನು ಪ್ರಾರಂಭಿಸಲಿಲ್ಲ. ಇಷ್ಟು ಕಾಲ ಅವರಲ್ಲಿ ಅಡಗಿದ್ದ ಸೃಷ್ಟಿಶೀಲತೆ ಎಲ್ಲ ಒಂದುಸಾರಿಗೇ ಮೇಲಕ್ಕುಕ್ಕಿ ಅವರ ಕುಂಚದ ಮೂಲಕ ಹರಿದುಬಂದಿತು.

ಈ ಪ್ರವಾಹಕ್ಕೆ ನೂತನ ಪ್ರಭಾವ ಹಬ್ಬಿದ್ದು ಪ್ರಧಾನವಾಗಿ ಇಬ್ಬರು ವಿದೇಶೀ ಚಿತ್ರಕಾರರ ಸಂಪರ್ಕದಿಂದ. ಯೋಕಾಹಾಮಾ ಟೈಕಾನ್, ಕಾಂಪ್ರೂ ಆರಾಯ್ ಎಂಬ ಇಬ್ಬರು ಚಿತ್ರಕಾರರು ಜಪಾನಿನಿಂದ ಬಂದು ಸ್ವಲ್ಪ ಕಾಲ ಕಲಕತ್ತದಲ್ಲಿ, ಪ್ರಕೃತವಾಗಿ ಠಾಗೋರರ ನಿವಾಸವಾದ 'ಜೋಡಾಶಂಕೋ'ದಲ್ಲಿದ್ದರು. ಆ ದಿನಗಳ ಗಗನೇಂದ್ರರ ಮೇಲೆ ಅವರ ಪ್ರಭಾವ ಸ್ವಲ್ಪ ಬಿತ್ತು. ಆಗಿನಿಂದ ಅವರು ಚಿತ್ರಸೃಷ್ಟಿ ಅವಿರಳವಾಗಿ ನಡೆಸಿದರು.

ಮೊದಲು ಗಗನೇಂದ್ರರು ಚಿಕ್ಕ ಸೈಜಿನಲ್ಲಿ ಪ್ರಕೃತಿ ಚಿತ್ರಗಳನ್ನು ರಚಿಸತೊಡಗಿದರು. ಈ ಪ್ರಕೃತಿ ಚಿತ್ರಗಳು ಪೂರ್ತಿಯಾಗಿ ವಾಸ್ತವವಾದಕ್ಕೆ ಸೇರಿದವು. ಪ್ರಕೃತಿಯಲ್ಲಿ ಕಣ್ಣಿಗೆ ಕಾಣಿಸುವ ಬಾಹ್ಯರೂಪಗಳನ್ನು ಚಿತ್ರಿಸಿದರು. ಪ್ರಕೃತಿಯೊಳಕ್ಕೆ ಜಾರಿ ಅವುಗಳ ರಸ ರೂಪಗಳನ್ನು ಹುಡುಕಿ ಅವುಗಳ ಆಂತರಂಗಿಕ ರೂಪಗಳನ್ನು ಚಿತ್ರಿಸಲಿಲ್ಲ. ಪ್ರಕೃತಿಯಲ್ಲಿ ಕಣ್ಣು ನೋಡುವ ರಂಗು, ಕಣ್ಣುನೋಡುವ ರೂಪಗಳನ್ನು ರಮ್ಯವಾಗಿ ಚಿತ್ರಿಸಿದರು. ಇದರಲ್ಲಿ ವಿಶೇಷವೇನೆಂದರೆ ಪ್ರಕೃತಿಯಲ್ಲಿನ ಒಂದು ದೃಶ್ಯವನ್ನು ನೋಡಿ ಆನಂದಿಸದ ವ್ಯಕ್ತಿ ಅದೇ ದೃಶ್ಯವನ್ನು ಗಗನೇಂದ್ರರ ಚಿತ್ರದಲ್ಲಿ ನೋಡಿ ಆನಂದಿಸಬಲ್ಲನು. ವಾಸ್ತವವಾದದಲ್ಲಿ ಕೂಡ ವ್ಯಕ್ತಿಗತ ರಸಮುದ್ರೆ ತೋರದೆ ಸುಮ್ಮನಿರದು.

ಗಗನೇಂದ್ರರ ಪ್ರಕೃತಿದೃಶ್ಯಗಳಲ್ಲಿ ಸೂರ್ಯಾಸ್ತಮಾನಗಳು ವಿಶೇಷ ಪ್ರತಿಭಾವಂತವಾಗಿರುತ್ತವೆ. ಇದರಲ್ಲಿ ರಾಂಚಿಯಲ್ಲಿನ ದೃಶ್ಯಗಳು ತುಂಬಾ ರಮ್ಯವಾಗಿವೆ. ಸಮತಲ ಪ್ರದೇಶಗಳ ಚಿತ್ರಗಳು, ಹಿಮಾಲಯದೃಶ್ಯಗಳು, ಹಳ್ಳಿಗಳ ದೃಶ್ಯಗಳು ಮೊದಲಾದವು ಎಷ್ಟೋ ವಾಸ್ತವವಾಗಿ ರಂಗಿನಲ್ಲೂ ರೂಪದಲ್ಲೂ ನಯನಾನಂದಕರವಾಗಿವೆ. ಏಕ ವರ್ಣದಲ್ಲಿ ಚಿತ್ರಿಸಿದ ಪ್ರಕೃತಿ ದೃಶ್ಯಗಳು ಇನ್ನೂ ಹೆಚ್ಚು ಮನೋಹರವಾಗಿವೆ.

೧೯೨೦–೨೮ ರ ಕಾಲ ಭಾರತೀಯ ಸಾಂಸ್ಕೃತಿಕ ರಂಗದಲ್ಲಿ ಸಂಧಿಸಮಯ. ನಮ್ಮ ಸಾಹಿತ್ಯದಲ್ಲಿಯೂ ಇತರ ರೂಪಕಲಾ ರಂಗದಲ್ಲಿಯೂ ಎಷ್ಟೋ ನೂತನ ಪರಿವರ್ತನೆಗಳಾದವು. ಇದೇ ಕಾಲದಲ್ಲಿ ರವೀಂದ್ರರ ಕಾವ್ಯ ಮೊದಲಾಗಿ ಕೂಚುಪುಡಿ ನಾಟ್ಯದವರೆಗೆ ನವಚೈತನ್ಯವನ್ನು ಪಡೆದಿವೆ. ಗಗನೇಂದ್ರರ ಪ್ರಕೃತಿ ದೃಶ್ಯಗಳು ಈ ಕಾಲದಲ್ಲಿಯೇ ಬದಲಾಗಿ ಕ್ಯೂಬಿಸ್ಟು ಚಿತ್ರಗಳತ್ತ ಸರಿದವು.

ಸಾಂಕೇತಿಕಾರ್ಥದಲ್ಲಿ ನೋಡಿದರೆ ಅವರವು ಪಾಶ್ಚಾತ್ಯ ದೇಶದಲ್ಲಿ ವ್ಯಾಪಿಸಿದ್ದ ಶುದ್ಧ

ಕ್ಯೂಬಿಸ್ಟು ಚಿತ್ರಗಳಿಗೆ ಸೇರಿದವಲ್ಲ. ಆದರೂ ಮತ್ತೊಂದು ಹೆಸರು ಇಲ್ಲದ್ದರಿಂದ ಅವನ್ನು ಕ್ಯೂಬಿಸ್ಟು ಎಂದೇ ಕರೆಯಬೇಕಾಗಿದೆ.

ಆಳವಾಗಿ ಪರಿಶೀಲಿಸಿದರೆ ಕ್ಯೂಬಿಜಂ ಪ್ರಾಚ್ಯ ದೇಶಗಳದೇ ಆಗುತ್ತೆ. ಕ್ಯೂಬಿಸ್ಟು ಕಲೆಗೆ ಮೂಲ ನಿಗ್ರೋ ದಾರುಶಿಲ್ಪ. ಅದನ್ನೇ ಚಿತ್ರಕಲೆಯಲ್ಲಿ ನಾನಾ ವಿಧಗಳಾಗಿ ಬದಲಾಯಿಸಿ ಕ್ಯೂಬಿಜಂ ಆಗಿ ತಂದಿದ್ದಾರೆ. ಕ್ಯೂಬಿಜಂ ವಿಶ್ಲೇಷಣಾತ್ಮಕ ಕಲೆ. ರೂಪವನ್ನು ಹೊಡೆದು ಹಾಕಿ ನೋಡಿದ್ದನ್ನು ಚಿತ್ರಿಸುವುದು. ಪ್ರತಿ ವಸ್ತುವೂ ಕಣ್ಣಿಗೆ ಕಾಣಿಸುವ ಆಕೃತಿಯನ್ನು ಮಾತ್ರವೇ ಅಲ್ಲದೆ ಆಂತರಿಕ ಆಕೃತಿಯೊಂದನ್ನು ಉಳ್ಳದ್ದಾಗಿರುತ್ತದೆ. ಆ ಒಳಗಿನ ಆಕೃತಿ ಕ್ಯೂಬ್‌ಗಳ ಮೂಲಕ ಅಂದರೆ ಕೋನರೂಪಗಳ ಮೂಲಕ ನಿರ್ಮಿತವೆಂದು ಭಾವಿಸಿ ಕ್ಯೂಬಿಸ್ಟರು ಓರ್ವ ಮಾನವ ಮುಖವನ್ನು ಚಿತ್ರಿಸಬೇಕೆಂದರೆ ಆ ಮುಖವನ್ನು ಕ್ಯೂಬ್‌ಗಳ ರಚನೆಯಲ್ಲಿ ತೋರಿಸುತ್ತಾರೆ. ನೋಡಲಿಕ್ಕೆ ಮುಖವಲ್ಲದೆ ಕ್ಯೂಬಗಳ ನಿರ್ಮಾಣ ಮಾತ್ರವೇ ಗೋಚರಿಸುತ್ತದೆ. ತುಂಬಾ ಪರಿಶೀಲಿಸಿದ್ದಲ್ಲದೆ ಮುಖದ ಹೋಲಿಕೆ ಕಾಣಿಸುವುದಿಲ್ಲ. ಅದೂ ಅಲ್ಲದೆ ಮುಖವನ್ನು ಮುಂದುಗಡೆಯಿಂದ ಚಿತ್ರಿಸುತ್ತಾ ಹಿಂಬದಿಯ ಭಾಗವನ್ನೂ ಪಕ್ಕದಲ್ಲಿರುವ ಭಾಗವನ್ನು ಒಂದೇ ಸಾರಿ ಮುಂಭಾಗದಲ್ಲೇ ತೋರಿಸುತ್ತಾರೆ.

ಇನ್ನು ಗಗನೇಂದ್ರನಾಥರ ಕ್ಯೂಬಿಜಂ ವಿಶ್ಲೇಷಣಾತ್ಮಕವಲ್ಲದೆ ಸಂಶ್ಲೇಷಣಾತ್ಮಕ, ರೂಪವನ್ನು ಹೊಡೆದು ಹಾಕಿ ವಿರೂಪಪಡಿಸದೇನೆ ಮಾಮೂಲು ರೂಪವನ್ನು ರೂಪವಾಗಿಯೇ ಇಟ್ಟು ಆ ರೂಪದ ಮೇಲೆ ನೆರಳು-ಬೆಳಕುಗಳನ್ನು, ಕ್ಯೂಬ್‌ಗಳನ್ನು ತೋರಿಸುತ್ತಾರೆ. ಪಾಶ್ಚಾತ್ಯ ಕ್ಯೂಬಿಜಂನಂತೆಯೇ ರೂಪ ನಿರ್ಮಾಣದಲ್ಲಿ ಬದಲಾವಣೆಯಿಲ್ಲದೆ ಕೇವಲ ರೂಪದ ಮೇಲಿರುವ ನೆರಳು ಬೆಳಕುಗಳಲ್ಲಿ ಮಾತ್ರ ಬದಲಾವಣೆ ತರುತ್ತಾರೆ.

ಅದಕ್ಕೆಂದೇ ಗಗನೇಂದ್ರರ ಈ ನೂತನ ವಿಧಾನವನ್ನು ಕೆಲ ಕಲಾಮರ್ಮಜ್ಞರು ಕ್ಯೂಬಿಜಂಗೆ ಸೇರದೆಂದರೆ, ಮತ್ತೆ ಕೆಲವರು ಅವರದು ಭಾರತೀಯ ಕ್ಯೂಬಿಜಂ ಎನ್ನುತ್ತಾರೆ. ಯಥಾರ್ಥ: ಅವರು ಈ ನೂತನ ವಿಧಾನವನ್ನು ಪಾಶ್ಚಾತ್ಯ ಕ್ಯೂಬಿಜಂನಿಂದ ಪ್ರೇರಿತರಾಗಿ ಪ್ರಾರಂಭಿಸಿದುದೇ.

ಗಗನೇಂದ್ರರ ಚಿತ್ರಕಲೆಯ ಯಾತ್ರೆಯಲ್ಲಿ ಈ ಕ್ಯೂಬಿಜಂ ಬಿಡಾರವೇ ಎಲ್ಲಕ್ಕಿಂತ ಪ್ರಮುಖವಾದದ್ದು. ಅವರ ಪ್ರಖ್ಯಾತ ಚಿತ್ರಗಳು ಈ ವಿಧಾನದಲ್ಲೇ ರಚಿಸಲ್ಪಟ್ಟಿವೆ. ಅತ್ತ ಪಾಶ್ಚಾತ್ಯರಿಗೆ ಇತ್ತ ಪ್ರಾಚ್ಯರಿಗೂ ಈ ಚಿತ್ರಗಳು ವಿಚಿತ್ರವಾಗಿಯೇ ಕಂಡಿವೆ.

ಗಗನೇಂದ್ರನಾಥ ಠಾಕೂರ ೧೯೩೮ ರಲ್ಲಿ ತಮ್ಮ ಎಪ್ಪತ್ತೊಂದನೇ ವಯಸ್ಸಿನಲ್ಲಿ ಮರಣಿಸಿದರು. ಮರಣಿಸಲು ಹತ್ತು ವರುಷಗಳಿರುವಾಗ ಅವರು ವ್ಯಾಧಿಪೀಡಿತರಾಗಿ, ಕುಂಚ ಹಿಡಿದು ಚಿತ್ರಿಸಲಾಗದ ಸ್ಥಿತಿಯಲ್ಲಿದ್ದರು. ಈ ಹತ್ತು ಸಂವತ್ಸರಗಳೂ ಅವರು ಅನುಭವಿಸಿದ ಮನೋಬಾಧೆ ಅಷ್ಟಿಷ್ಟಲ್ಲ. ಚಿತ್ರಿಸಬೇಕೆಂಬ ಅದಮ್ಯವಾದ ಆಕಾಂಕ್ಷೆ. ಆದರೆ ಏನು ಲಾಭ? ಕುಂಚ ಹಿಡಿದುಕೊಳ್ಳುವುದಕ್ಕೆ ಸಾಧ್ಯವಿಲ್ಲ. ಕುಂಚ ಹಿಡಿದುಕೊಳ್ಳುವ ಸತ್ವವನ್ನು ಮೀರಿದ್ದವು ಅವರ ಬೆರಳುಗಳು. ಹಸಿವಾಗುತ್ತಿರುವ ಮನುಷ್ಯನಿಗೆ, ಬಿಕ್ಕಳಿಕೆ ಆಗುತ್ತಿರುವ ಮನುಷ್ಯನಿಗೆ ಎದುರಿನಲ್ಲಿ ಅನ್ನ, ನೀರು ಇದ್ದೂ ಬಾಯಿ ತೆರೆಯಲಿಕ್ಕೆ ಸಾಧ್ಯವಿಲ್ಲದಿದ್ದಾಗ ಉಂಟಾಗುವ ಅಂತ್ಯವಿಲ್ಲದ ತೀರದ ಸಂಕಟವನ್ನೇ ಗಗನೇಂದ್ರರು ಕೊನೆಯ ಹತ್ತು ವರುಷಗಳಲ್ಲಿ ಅನುಭವಿಸಿದರು.

ಕಣ್ಣುಮುಚ್ಚಿದರೂ ತೆರೆದರೂ ರಂಗುಗಳು, ಕಮನೀಯ ಕಾಂತಿಗಳು, ರೇಖೆಗಳ ಪ್ರಾಣವಂತವಾದ ಲಯಗಳು ಪ್ರತ್ಯಕ್ಷವಾಗಿ ಅವರಿಗೆ ಕುಂಚದಿಂದ ಭೌತಿಕ ರೂಪವನ್ನು ಪ್ರಸಾದಿಸಬೇಕೆಂದು ಪ್ರತಿ ನುಡಿದವು. ಬಲವಂತಪಡಿಸಿದವು. ಆದರೆ ಏನು ಪ್ರಯೋಜನ? ನಿರಾಶೆಯಿಂದ ನಿಃಸ್ಪೃಹದಿಂದ ಭರಿಸಲಾರದ ವೇದನೆಯಿಂದ ಕಣ್ಣೀರು ಸುರಿಸಿ

ದರು.

ಗಗನೇಂದ್ರರು ಚಿತ್ರಬಿಡಿಸುವ ದಿನಗಳಲ್ಲಿ ಕ್ರಮೇಣ ರಂಗುಗಳನ್ನು ಬಿಟ್ಟು ಸಿರಾದೊಂದಿಗೆ ಕುಂಚವನ್ನು ಉಪಯೋಗಿಸಿ ಚಿತ್ರಣ ಮುಂದುವರಿಸಿದರು. ದೂರ ಪ್ರಾಚ್ಯ ಚಿತ್ರಕಾರರು ಹೆಚ್ಚಾಗಿ ಚಿತ್ರಣಕ್ಕೆ ಸಿರಾವನ್ನೇ ಬಳಸುತ್ತಾರೆ. ಅವರ ಸಿರಾ ಚಿತ್ರಗಳು ಚೈನಾ, ಜಪಾನ ಚಿತ್ರಗಳಂತಿರದೆ ತನ್ನದೇ ಆದ ಪದ್ಧತಿಯಲ್ಲಿ ಇರುತ್ತಿದ್ದವು.

ಗಗನೇಂದ್ರರ ಚಿತ್ರಾವಳಿಯನ್ನು ಈ ವಿಧವಾಗಿ ವರ್ಗೀಕರಿಸಬಹುದು. ಪ್ರಕೃತಿ ಚಿತ್ರಗಳು, ರವೀಂದ್ರರ ರಚನೆಗಳಿಗೆ ಹಾಕಿದ ಚಿತ್ರಗಳು, ಚೈತನ್ಯ ಜೀವನವನ್ನು ಚಿತ್ರಿಸುತ್ತಾ ಬಿಡಿಸಿದವು. ಗ್ರಾಮ್ಯಜೀವನ ದೃಶ್ಯಗಳು, ವ್ಯಂಗ್ಯಚಿತ್ರಗಳು. ಅವರು ಒಳ್ಳೆಯ ವ್ಯಂಗ್ಯ ಚಿತ್ರಕಾರರಾಗಿದ್ದರು. ಪತ್ರಿಕೆಯಲ್ಲಿ ಅವರು ರಚಿಸಿದ ವ್ಯಂಗ್ಯ ಚಿತ್ರಗಳು ಬಂಗಾಳದಲ್ಲಿಯ ಸಾಮಾಜಿಕ ಪರಿಸ್ಥಿತಿ ಮೇಲೆ ಸ್ವಲ್ಪ ಪ್ರಭಾವವನ್ನು ಬೀರಿವೆ.

ಗಗನೇಂದ್ರರು ಕೆಲವು ಚಿತ್ರಗಳಲ್ಲಿ ನಿಜವಾದ ಬೆಳಕನ್ನು ತೋರಿಸಲಿಕ್ಕೆ ಪ್ರಯತ್ನಿಸಿ ಸಫಲರಾಗಿದ್ದಾರೆ. ಪಕ್ಕದಲ್ಲಿ ಕಲ್ಪನೆ ರಂಗುಗಳ ವ್ಯತಿರೇಕತೆಯನ್ನು ಸೃಷ್ಟಿಸಿ ಅದರ ಮೂಲಕ ಅವರು ಬೆಳಕನ್ನು ಪ್ರತ್ಯಕ್ಷವಾಗಿ ತೋರಿಸುತ್ತಿದ್ದರು. ತಮ್ಮ ಚಿತ್ರಗಳಲ್ಲಿ ರಾತ್ರಿ ದೃಶ್ಯವನ್ನು ರಚಿಸುವಿಕೆಯಲ್ಲಿ ಗಗನೇಂದ್ರರು ದಿಟ್ಟರು. ಅವರು ರಚಿಸಿದ 'ಸ್ವಪ್ನ ಸೌಧ' ಎಂಬ ಒಂದು ಚಿತ್ರ, ಅದೊಂದು ದೊಡ್ಡ ರೋಮಾಂಟಿಕ ದೃಶ್ಯ. ನಿಜಕ್ಕೂ ಗಗನೇಂದ್ರರು ಓರ್ವ ಶ್ರೇಷ್ಠ ರೋಮ್ಯಾಂಟಿಕ ಚಿತ್ರಕಾರರು. ಈ 'ಸ್ವಪ್ನ ಸೌಧ' ಎಂಬುದು ಗಂಭೀರವಾದ ರಾತ್ರಿ ದೃಶ್ಯ. ಒಂದು ಗೃಹಾಂತರ್ಭಾಗವನ್ನು ಕತ್ತಲೆಕೋನಗಳೊಂದಿಗೆ ಚಿತ್ರಿಸಿ ಅದರೊಳಗಿನ ದೀಪದ ಮಾಸಿದ ಅರಿಸಿನ ರಂಗು ಕಾಂತಿಯಲ್ಲಿ ಮನೆಯಲ್ಲಿನ ವಿವಿಧ ವಸ್ತುಗಳನ್ನು ಅಸ್ಪಷ್ಟವಾಗಿ ಸ್ವಪ್ನಲೋಕದಲ್ಲಿನ ಛಾಯಾ ರೂಪಗಳಂತೆ ತೋರಿಸಿರುತ್ತಾರೆ.

ನೂತನ ಪದ್ಧತಿಯಲ್ಲಿ ಅವರು ಕೆಲವು ಹೂವುಗಳನ್ನು ಕೂಡಾ ಚಿತ್ರಿಸಿದ್ದಾರೆ, ದೃಶ್ಯ ಜಗತ್ತನ್ನು ಅವರು ಒಂದು ಪ್ರತ್ಯೇಕ ದೃಷ್ಟಿಯಿಂದ ನೋಡುತ್ತಾರೆ. ನೋಡಿದುದನ್ನು ಅದಕ್ಕಿಂತ ಮತ್ತೊಂದು ಪ್ರತ್ಯೇಕ ದೃಷ್ಟಿಯಿಂದ ಚಿತ್ರಿಸುತ್ತಾರೆ.

ಎಲ್ಲ ವಿಷಯಗಳೂ ಎಲ್ಲ ಚಿತ್ರಕಾರರ ಕುಂಚಗಳಿಗೆ ಎಟುಕವು. ಎಲ್ಲವನ್ನು ಎಲ್ಲರೂ ಚಿತ್ರಿಸಲಾರರು. ಕೆಲವರು ಕೆಲವನ್ನು ಮಾತ್ರವೇ ಚಿತ್ರಿಸಬಲ್ಲರು. ಆದರೆ ಗಗನೇಂದ್ರರು ಎಲ್ಲವನ್ನೂ ಚಿತ್ರಿಸುವಂತಹವರು. ಅವರ ದೃಷ್ಟಿ ವಿಶ್ವದೃಷ್ಟಿ. ಅವರ ಕುಂಚ ವಿಶ್ವವೀಣೆ ಆ ವೀಣೆಯಿಂದ ಕೇಳಬರದ ರಾಗವಂತೂ ಇಲ್ಲ. ಆದರೆ ಸೃಷ್ಟಿ ವೈಚಿತ್ರ್ಯ: ಎಲ್ಲವೂ ಕೂಡಾ ಆ ವೀಣೆಯಿಂದ ಕೇಳಿಸುವುದು ಕಣ್ಣಿಗೆ, ಕಿವಿಗಲ್ಲ! ✡



ಇತಿಹಾಸವೆಂದರೆ ಸಂಭವಿಸಲೇ ಬಾರದಿದ್ದ ಸಂಗತಿಗಳು ಸಂಭವಿಸಿದ್ದರ ಘಟನಾವಳಿ.

—ಟೈಮ್ ವೀಕ್ಲಿಯಿಂದ

ಆಲಸ್ಯಕ್ಕಿಂತ ಆಯಾಸಕರವಾದ ಕೆಲಸ ಮತ್ತೊಂದಿಲ್ಲ. ಅದನ್ನು ಶಿಕ್ಷಿಸಿ ನೀವು ವಿಶ್ರಾಂತಿ ಪಡೆಯಲಾರಿರಿ.

— ಅನಾಮಿಕ

ರಂಗನಾಥ ದಿವಾಕರ

# ಶೂನ್ಯಸಿಂಹಾಸನದ ಅರ್ಥವ್ಯಾಪ್ತಿ

**'ಶೂನ್ಯಸಿಂಹಾಸನ' ಎಂಬ ಪದ ಒಂದೇ. ಆದರೆ ಮೂರು ಮಹಾನ್ ವಿಭೂತಿಗಳ ಸಂದರ್ಭದಲ್ಲಿ ಅದರ ಅರ್ಥವು ಭಿನ್ನ ಭಿನ್ನವಾಗಿರುವುದು. ಮೂರೂ ಅರ್ಥಗಳಲ್ಲಿಯೂ ಆಯಾ ವಿಭೂತಿಗಳ ಮಹತ್ತರ ನಿಲವು ದೃಗ್ಗೋಚರವಾಗುವುದು.**

ಗಾಂಧೀಜಿ ಅವರು ಇದ್ದಾಗ ಹಾಗೂ ತದನಂತರ ನಾನು ಸೇವಾಗ್ರಾಮಕ್ಕೆ ಹಲವಾರು ಸಾರೆ ಹೋಗಿರಲಿಕ್ಕೆ ಸಾಕು. ಮೊನ್ನೆ ಪೌನಾರಿನಲ್ಲಿರುವ ಆಚಾರ್ಯ ವಿನೋಬಾ ಅವರ 'ಪರಂಧಾಮ ಆಶ್ರಮ'ದಲ್ಲಿ ನಾನು ನಡೆದ ಆಚಾರ್ಯ ಸಮ್ಮೇಲನಕ್ಕೆ ಹೋಗಿದ್ದೆ. ೧೭ ನೆ ತಾರೀಖಿನ ದಿನ ಸೇವಾಗ್ರಾಮಕ್ಕೆ ಪ್ರಾರ್ಥನಾ ಸಮಯಕ್ಕೆ ಸಾಯಂಕಾಲ ಎಲ್ಲರ ಜೊತೆ ಹೋದಾಗ ಆದ ಅನುಭವವೇ ಬೇರೆ!

ಬಾಪೂ ಕುಟೀರದ ಹತ್ತಿರವೇ ಪ್ರಾರ್ಥನೆ ನಡೆಯಿತು. ಆಗ ಅಲ್ಲಿ ಒಂದು ಚಿಕ್ಕ ಆಸನ ಇತ್ತು. ಒಂದು ಮಣೆ, ಅದರ ಮೇಲೆ ಒಂದು ಶುಭ್ರ ವಸ್ತ್ರ, ಆನಲಿಕ್ಕೆ ಒಂದು ಸಣ್ಣ ದಿಂಬು. ಪ್ರಾರ್ಥನಾ ಸಮಯದಲ್ಲಿ ಬಾಪೂ ಎಲ್ಲಿ ಕೂತುಕೊಳ್ಳುತ್ತಿದ್ದರೋ ಅಲ್ಲಿಯೇ ಆ ಆಸನ ಇಡಲಾಗಿತ್ತು. ಬಾಪೂ ಹೋದ ನಂತರ ಕೂಡ ನಾನು ಪ್ರಾರ್ಥನೆಯ ಕಾಲಕ್ಕೆ ಸೇವಾಗ್ರಾಮಕ್ಕೆ ಹಲವು ಸಾರೆ ಹೋಗಿದ್ದೆ. ಆ ಆಸನ ಹಾಗೇ ಇದ್ದುದನ್ನು ನೋಡಿದ್ದೆ. ಆದರೆ ಈ ಸಾರೆ ಅದನ್ನು ನೋಡಿದೊಡನೆ ತಟ್ಟನೆ 'ಶೂನ್ಯಸಿಂಹಾಸನ' ಎಂಬ ಶಬ್ದ-ಕಲ್ಪನೆ ಮನಸಿನಲ್ಲಿ ಮೂಡಿತು!

ಹೀಗೇಕೆ ಆಯಿತು ಎಂದು ಯೋಚಿಸಲಾಗಿ, ಬಾಪೂ ಈಗಿಲ್ಲವಲ್ಲ, ಈಗ ಇರಬೇಕಾಗಿತ್ತು ಎಂದು ಅನಿಸಿತು.

ಅವರು ರಾಷ್ಟ್ರಪಿತ ಎನಿಸಿಕೊಂಡರು. ಭಾರತೀಯ ಸ್ವಾತಂತ್ರ್ಯದ ಶಿಲ್ಪಿ ಎಂದು ಮೌಂಟ್‌ಬೇಟನ್ನರು ಅವರನ್ನು ಹೊಗಳಿದರು. ಅವರು ಮಾನವಕುಲದ ವಿವೇಕ ಚೂಡಾಮಣಿ (ಕಾನ್‌ಶನ್ಸ್ ಆಫ್ ಹ್ಯೂಮ್ಯಾನಿಟಿ) ಎಂದು ಬ್ರಿಟಿಶ್ ತತ್ವಜ್ಞಾನಿ ಜೋಡ್ ಹೇಳಿದರು. ಇಂಥ ಮಾನವ ಈ ಲೋಕದಲ್ಲಿ ಹುಟ್ಟಿ ಬಾಳಿದನೇ ಎಂದು ಮುಂದೆ ಜನ ಸಂಶಯ ಪಡಬಹುದು ಎಂದು ಆಧುನಿಕ ವಿಜ್ಞಾನಾಗ್ರಣಿ ಐನ್‌ಸ್ಟಾಯಿನ್ ಅಚ್ಚರಿಪಟ್ಟರು.

ಗಾಂಧೀಜಿ ಬರೀ ರಾಜಕೀಯ ಸ್ವಾತಂತ್ರ್ಯಕ್ಕಾಗಿಯಷ್ಟೇ ಹೋರಾಡಲಿಲ್ಲ. ಒಂದು ವಿಚಾರ ಸ್ವಾತಂತ್ರ್ಯವೇ, ವಾಕ್ ಸ್ವಾತಂತ್ರ್ಯವೇ, ಅರ್ಥ ಸ್ವಾತಂತ್ರ್ಯವೇ, ಸ್ತ್ರೀ ಸ್ವಾತಂತ್ರ್ಯವೇ ಎಲ್ಲ ಬಗೆಯ ಸ್ವಾತಂತ್ರ್ಯಗಳಿಗಾಗಿ ಅವರು ಹಂಬಲಿಸಿ ಪ್ರಯಾಸಪಟ್ಟರು. ಪ್ರತಿಯೊಂದು ಬಗೆಯ ಸ್ವಾತಂತ್ರ್ಯವೆಂಬುದೇ ಅವರ ಉಸಿರಾಗಿತ್ತು. ದಬ್ಬಾಳಿಕೆ ಇಲ್ಲದ ಶೋಷಣರಹಿತ ಸಮಾಜವೇ ಅವರ ಗುರಿ.

ಸಿಂಹಾಸನ ಎಂಬ ಶಬ ಸಾಮಾನ್ಯವಾಗಿ ಅರಸರ ಓಲಗದಲ್ಲಿರುವ ಆಸನಕ್ಕೆ ಮಾತ್ರ ಅನ್ವಯಿಸುವದುಂಟು. ಅದನ್ನು ಅರಸರೇ

ಅಲಂಕರಿಸಬೇಕು. ಗಾಂಧೀಜಿ ಅರಸರ ಮನೆತನದಲ್ಲಿ ಹುಟ್ಟಿದವರಲ್ಲ. ಅಥವಾ ಅವರನ್ನು ಯಾರೂ ಅರಸರಾಗಲು ಆಮಂತ್ರಿಸಿರಲಿಲ್ಲ. ಹೀಗಿರುವಾಗ ನನ್ನ ಮನಸಿನಲ್ಲಿ ಶೂನ್ಯಸಿಂಹಾಸನದ ಕಲ್ಪನೆ ಏಕೆ ಹೊಳೆಯಿತು ? ಲೋಕಮಾನ್ಯ ಟಿಳಕರಿಗೆ ಜನರು 'ಅನಭಿಷಿಕ್ತ ಅರಸ' ಎನ್ನುವದನ್ನು ನಾನು ಕೇಳಿದ್ದೇನೆ. ಅದೇ ಬಿರುದು ಗಾಂಧೀಜಿಯವರಿಗೂ ಸಲ್ಲುವುದು.

ಇನ್ನೊಂದು ರೀತಿ ನೋಡಿದರೆ ಗಾಂಧೀಜಿ ಅವರ ಆಸನ 'ಸಿಂಹಾಸನ' ಎನಿಸಿಕೊಳ್ಳಲು ಯೋಗ್ಯವು. ಸಿಂಹಕ್ಕೆ ಮೃಗರಾಜ–ವನರಾಜ ಎನ್ನುವುದುಂಟು. ಆ ಬಗ್ಗೆ ಸಂಸ್ಕೃತದಲ್ಲಿ ಒಂದು ಶ್ಲೋಕವಿದೆ: "ವಿಕ್ರಮಾರ್ಜಿತ ಸತ್ವಸ್ಯ ಸ್ವಯಮೇವ ಮೃಗೇಂದ್ರತಾ," ತಮ್ಮ ಪರಾಕ್ರಮದಿಂದ ಮುಂದೆ ಬಂದವರಿಗೆ ಸಿಂಹ ಎಂಬ ಬಿರುದು ಸ್ವಾಭಾವಿಕವಾಗಿಯೇ ಬಂದುಬಿಡುವದು. ಆ ರೀತಿ ಗಾಂಧೀಜಿ ಸ್ವಪರಾಕ್ರಮದಿಂದಲೆ ಜನರ ಮುಖಂಡತ್ವವನ್ನು ವಹಿಸಿಕೊಂಡವರು. ಆದುದರಿಂದ ಅವರ ಆಸನಕ್ಕೆ 'ಸಿಂಹಾಸನ' ಎಂದರೆ ಅನ್ವರ್ಥಕವೇ ಸೈ.

ಈ ಹೊತ್ತು ಆ ಆಸನ ಶೂನ್ಯವಾಗಿದೆಯಲ್ಲ ಎಂಬ ಭಾವನೆ ಉದ್ಭವಿಸುವದು ಸಹಜ.

## ಶೂನ್ಯಸಿಂಹಾಸನ–ಬುದ್ಧ

ಭಗವಾನ್ ಬುದ್ಧನ ಜೀವನ ಸಂಬಂಧದ ಅನೇಕ ಶಿಲ್ಪಕಲಾಕೃತಿಗಳು ಉಪಲಬ್ಧವಿರುವವು. ಅದರಲ್ಲಿ ಒಂದು ಕಲ್ಲಿನಲ್ಲಿ ಕೆತ್ತಿದುದು "ಶೂನ್ಯಸಿಂಹಾಸನವನ್ನು" ಮೂಡಿಸಿರುವದು. ಸುತ್ತಲೂ ಮೇಲೂ ಕೆಳಗೂ ಮಾರನ (ಕಾಮಾದಿ ಷಡ್ವರ್ಗಗಳು) ಸೈನ್ಯವು ಆ ಶೂನ್ಯಸಿಂಹಾಸನದ ಮೇಲೆ ದಾಳಿಯನ್ನು ನಡೆಸಿರುವಂತೆ ತೋರಿಸಲಾಗಿದೆ. ಹಲವಾರು ಕಠೋರ ಸಾಧನಗಳನ್ನು ಕೈಕೊಂಡು ಸಿದ್ಧಾರ್ಥನು ಬೇಸತ್ತು ಕೊನೆಗೆ ಆಲಾರ ಕಲಾಮ ಎಂಬ ಯೋಗಿಯ ಬಳಿ ಹೋದನು. ಅವನಿಂದ ದೀಕ್ಷೆ ಪಡೆದು ಬುದ್ಧಗಯೆಯ ಹತ್ತರ ನೈರಂಜರಾ ನದಿಯ ಸಮೀಪದಲ್ಲಿರುವ ಬೋಧಿ ವೃಕ್ಷದ ನೆರಳಿನಲ್ಲಿ ಅವನು ತಪಸ್ಸಿಗೆ ಕುಳಿತನು. ಅದು ಧ್ಯಾನ ಮಾರ್ಗ. ಸಿದ್ಧಿ ಬೇಗನೆ ದೊರೆಯಲಿಲ್ಲ ಎಂದು ಕೊನೆಗೆ ಸಿದ್ಧಾರ್ಥನು ದೃಢನಿಶ್ಚಯ ಮಾಡಿ 'ಭೂಮಿಸ್ಪರ್ಶ' ಆಸನವನ್ನು ತಳೆದು, ಸಿದ್ಧಿ ಪಡೆಯುವ ತನಕ ಈ ಆಸನದಿಂದ ಏಳುವದಿಲ್ಲ ಎಂದು ಭೂಮಿ ಸಾಕ್ಷಿಯಾಗಿ ನಿರ್ಧರಿಸಿದನು. ಧ್ಯಾನದಲ್ಲಿ ದೀರ್ಘವಾಗಿ ಮಗ್ನನಾಗುತ್ತ ಸಿದ್ಧಾರ್ಥನು ಮುಂದುವರಿಯುತ್ತ ನಡೆದಂತೆ ಮಾರನ ಸೈನ್ಯವು (ಅಂದರೆ ಸೂಕ್ಷ್ಮವಾದ ಕಾಮಕ್ರೋಧಾದಿಗಳು) ಮತ್ತಷ್ಟು ಹೆಚ್ಚು



ರೊಚ್ಚಿನಿಂದ ಅವನ ಧ್ಯಾನವನ್ನು ಕೆಡಿಸಲು ಯತ್ನಿಸತೊಡಗಿದವು. ಕೊನೆಗೆ ಸಿದ್ಧಾರ್ಥನು ಸಂಬೋಧಿಯನ್ನು ಪಡೆದು ಬುದ್ಧನಾಗುವ ಸಂದರ್ಭದಲ್ಲಿ ತನ್ನ ಆಸನದಲ್ಲಿಯೇ ಅದೃಶ್ಯನಾಗಿ ಆಸನವು ಶೂನ್ಯವಾದಂತೆ ಆಯಾ ಕಾಮಕ್ರೋಧಾದಿಗಳಿಗೆ (ಮಾರನ ಸೈನ್ಯಕ್ಕೆ) ಪ್ರತೀತಿ ಆಯಿತು. ಅರ್ಥಾತ್ ಸಿದ್ಧಾರ್ಥನು ಬುದ್ಧಾವಸ್ಥೆಯನ್ನು ಪಡದಾಕ್ಷಣವೇ ಶರೀರ-ಪ್ರಾಣ-ಮನಗಳಲ್ಲಿ ಆಸಕ್ತವಾದ ಅವನ ಆತ್ಮನು ನಿರ್ಲಿಪ್ತವಾದುದರಿಂದ, ಮಾರನ ಸೈನ್ಯಕ್ಕೆ ದಾಳಿ ಮಾಡಲು ವಸ್ತುವೇ ಉಳಿಯಲಿಲ್ಲ! ಈ ಸಂದರ್ಭವನ್ನು ಶಿಲ್ಪಿಯು 'ಶೂನ್ಯ ಸಿಂಹಾಸನದ' ಮೂಲಕ ತೋರಿಸಿರುವನು.

ಸಿದ್ಧನು, ಸಂಬೋಧಿ ಪಡೆದ ಬುದ್ಧನು, ಆತ್ಮಸಾಕ್ಷಾತ್ಕಾರವನ್ನು ಗೈದ ವ್ಯಕ್ತಿಯು. ಅವನು ಶರೀರ-ಪ್ರಾಣ-ಮನಗಳಿಂದ ಕೂಡಿದವನಿದ್ದರೂ, ಜೀವದಿಂದಿದ್ದರೂ ಇದ್ದೂ ಇಲ್ಲದಂತೆ, ಬಳಸಿ ಬ್ರಹ್ಮಚಾರಿ, ಪದ್ಮಪತ್ರಮಿವಾಂಭಸಾ ಎಂಬಂತೆ ಇರುವನು. ಆದುದರಿಂದ ಅವನು ಕಾಮಕ್ರೋಧಾದಿ ಷಡ್ರಿಪುಗಳಿಂದ ಬಾಧಿಸಲ್ಪಡಲಾರ. ಬುದ್ಧನ ವಿಷಯದಲ್ಲಿ ಅದೇ ಶೂನ್ಯಸಿಂಹಾಸನದ ಅರ್ಥ.

## ಶೂನ್ಯಸಿಂಹಾಸನ-ಪ್ರಭುದೇವರು

ಕಲ್ಯಾಣ ಪಟ್ಟಣದ ಅನುಭವ ಮಂಟಪದಲ್ಲಿ ಶೂನ್ಯಸಿಂಹಾಸನದ ಸ್ಥಾಪನೆ ಮಾಡಲಾಗಿತ್ತು. ಬಿಜ್ಜಳನ ಮಂತ್ರಿಗಳಾದ ಬಸವೇಶ್ವರರು ಭಕ್ತಿ ಭಾಂಡಾರಿಗಳೆನಿಸಿ ಸಹಸ್ರಾವಧಿ ಶಿವಶರಣರನ್ನು ಒಟ್ಟುಗೂಡಿಸಿ ಭಕ್ತಿ ಸಾಮ್ರಾಜ್ಯವನ್ನೇ ಕಟ್ಟಿದ್ದರು.

ಶೂನ್ಯಸಿಂಹಾಸನದ ಗದ್ದುಗೆಯ ಮೇಲೆ ಯಾರನ್ನು ಕೂಡಿಸಬೇಕೆಂಬುದರ ಬಗ್ಗೆ ಯಾವ ಅನುಮಾನವೂ ಇರಲಿಲ್ಲ. 'ಗುಹೇಶ್ವರ' ಎಂಬ ಅಂಕಿತದಿಂದ ವಚನರಾಶಿಗಳನ್ನು ನಿರ್ಮಿಸಿದ ಪ್ರಭುದೇವರೇ ಆ ಪೀಠಕ್ಕೆ ತಕ್ಕವರು ಎಂಬುದು ಅಲ್ಲಿ ನೆರೆದವರ ಅಭಿಪ್ರಾಯ.

ಇಲ್ಲಿ ಶೂನ್ಯಸಿಂಹಾಸನದ ಅರ್ಥ, ಬಯಲು ನಿಬ್ಬಯಲು ಎಂಬ ಲಿಂಗೈಕ್ಯವನ್ನು ಸಂಪಾದಿಸಿದ, ಶಿವಾದ್ವೈತ ಚಿತ್‌ಸ್ಥಿತಿಯನ್ನು ಪಡೆದು ಆ ಕೈವಲ್ಯಾವಸ್ಥೆಯಲ್ಲಿ ಸತತವೂ ಇರುವ ಚಿದವಸ್ಥೆಯನ್ನು ಹೊಂದಿದ ಸ್ಥಿತಿ. ಶೂನ್ಯ ಅಂದರೆ ಏನೂ ಇಲ್ಲದ ಸ್ಥಿತಿ ಅಲ್ಲ, ಆದರೆ ಎಲ್ಲವೂ ಇದ್ದ ಸ್ಥಿತಿ. ನೇತಿ ನೇತಿ ಅಂದರೆ ಇದಲ್ಲ, ಇದಲ್ಲ ಎಂದು ಶಬ್ದಾರ್ಥವಾದರೂ ಅದರ ಅರ್ಥ, ನಮಗೆ ನಮ್ಮ ಜ್ಞಾನೇಂದ್ರಿಯಗಳಿಂದ ಗೋಚರವಾದುದು ಯಾವುದೂ ಅಲ್ಲ (ನ ಮೇಧಯಾ ನ ಶ್ರುತೇನ) ಅದರಾಚೆಗಿನದು; ಆದರೆ ಯಾವಾಗಲೂ ಇದ್ದುದು ಎಂದೇ ಅರ್ಥ. ಆ ಅತೀತವಾದ ಸತ್‌ನಿಂದಲೇ ಎಲ್ಲವೂ ಅಸ್ತಿತ್ವದಲ್ಲಿ ಬರುವದು ಮತ್ತೆ ಮಾಯವಾಗುವುದು.

ಆಧುನಿಕ ಮಹಾಮನೋವಿಜ್ಞಾನಿಯಾದ ಯುಂಗ್ ಎಂಬವನು ನಮ್ಮ ಎಚ್ಚರವಿರುವ ಆಂಶಿಕ ಚಿತ್ತದಾಚೆಗೆ ಅನಂತ ಅಗೋಚರ ಅತೀತ ಚಿತ್ಸಾಗರವಿದೆ. ಅದರ ಅಂಶಾಂಶ ಮಾತ್ರ ನಮ್ಮ ಚಿದ್ರಂಗದಲ್ಲಿ ಒಂದು ಆಟವಾಡಿ ಕುಣಿದಾಡಿ ಮತ್ತೆ ಆ ಅನಂತ ಚಿತ್ಸಾಗರದಲ್ಲಿಯೇ ಲೀನವಾಗುವುದು ಎಂದು ವಾದಿಸಿದ್ದಾನೆ.

ಆ ಶೂನ್ಯದ ಗರ್ಭದಲ್ಲಿಯೇ ಎಲ್ಲವೂ ಆಗುವುದು ಹೋಗುವುದು. ಆ ಶೂನ್ಯದ, ಸತ್ಯಮಯ ಅನಂತ ಅಸ್ತಿತ್ವದ ಸಾಕ್ಷಾತ್ಕಾರ ಹಾಗೂ ಅದರಲ್ಲಿ ಲೀನವಾಗಿರುವ ಶಕ್ತಿ ಎಂಬುದೇ ಶೂನ್ಯಸಂಪಾದನೆ. ಆ ಶೂನ್ಯ ಸಂಪಾದನೆ ಯಾವನಿಗೆ ಒಳಪಟ್ಟಿದೆಯೊ ಅವನೇ ಶೂನ್ಯಸಿಂಹಾಸನಕ್ಕೆ ಅಧಿಕಾರಿ. ಪ್ರಭುದೇವರೇ ಆ ಸಿಂಹಾಸನಕ್ಕೆ ಅಧಿಕಾರಿ.

**"ಅರುಹಿನ ಕುರುಹಿನ ಮರಹಿನೊಳಗೆ**
**ಗುಹೇಶ್ವರನೆಂಬುದು ತಾ ಬಯಲು!"**





# ವಿಶ್ರಾಂತಿ ಪಡೆಯುವುದರಿಂದ ದಣಿವು ಹೆಚ್ಚುತ್ತದೆಯೆ?

ಡಾ. ಧನವಂತ ಕಿಶೋರ ಗುಪ್ತ

ಸ್ವಲ್ಪ ಕೆಲಸ ಮಾಡಿದರೂ ಆಯಾಸವಾಗುವುದು ಹಾಗೂ ಯಾವುದೊಂದು ಕೆಲಸವನ್ನು ಏಕಾಗ್ರಚಿತ್ತದಿಂದ ಮಾಡಲು ಸಾಧ್ಯವಾಗದಿರುವುದು ಈ ಎರಡು ಸ್ಥಿತಿಗಳೂ ಆಧುನಿಕ ಜೀವನದಿಂದ ಮಾನವನಿಗೆ ದೊರೆತ ಶಾಪಗಳು. ಆಯಾಸದ ಸಮಸ್ಯೆಯು ಬಹು ವ್ಯಾಪಕವಾದುದು. ಈ ಬಗ್ಗೆ ಅನೇಕ ವೈಜ್ಞಾನಿಕ ಅಧ್ಯಯನಗಳನ್ನು ಮಾಡಲಾಗಿದೆ.

ಆಯಾಸದ ವೈಜ್ಞಾನಿಕ ಪರಿಭಾಷೆಯು ಅತ್ಯಂತ ಜಟಿಲವಾದರೂ ಅದನ್ನು ಸಾಮಾನ್ಯ ಭಾಷೆಯಲ್ಲಿ ಹೀಗೆ ಹೇಳಬಹುದು: "ಶರೀರದ ವಿಭಿನ್ನ ಸ್ನಾಯುಗಳ ಕಾರ್ಯಕ್ಷಮತೆ ಕಡಿಮೆಯಾದ ಸ್ಥಿತಿಯೇ ಆಯಾಸ". ಸ್ನಾಯುಗಳ ಕಾರ್ಯಕ್ಷಮತೆ ಕಡಿಮೆಯಾಗುವುದಕ್ಕೆ ಶಾರೀರಕ ಹಾಗೂ ಮಾನಸಿಕ ಎಂಬ ಎರಡು ಕಾರಣಗಳಿವೆ. ಹೀಗಾಗಿ ಆಯಾಸದ ಸ್ಥಿತಿಯೂ ಶಾರೀರಕ ಮಾನಸಿಕ ಎಂದು ಎರಡು ಬಗೆಯದು. ವಸ್ತುತಃ ಶಾರೀರಕ ಕಾರಣಗಳಿಗಿಂತ ಮಾನಸಿಕ ಕಾರಣಗಳಿಂದಾಗಿ ಆಯಾಸವಾಗುವುದೇ ಹೆಚ್ಚು. ಆಯಾಸದ ಕಾರಣ ಮಾನಸಿಕವಾಗಿರಬಲ್ಲದೆಂಬುದನ್ನು ಒಪ್ಪಲು ಅನೇಕರು ತಯಾರಿರುವುದಿಲ್ಲ.

## ಶಾರೀರಕ ಆಯಾಸ

ಆಯಾಸದ ಕಾರಣವನ್ನೂ ಅದನ್ನು ನಿವಾರಿಸುವ ಬಗೆಯನ್ನೂ ಅರಿತುಕೊಳ್ಳಬೇಕೆಂದರೆ ಮೊದಲು ಶರೀರ ಹೇಗೆ ಕೆಲಸ ಮಾಡುತ್ತದೆ ಎಂಬುದನ್ನು ತಿಳಿದುಕೊಳ್ಳುವುದು ಅವಶ್ಯ. ಶರೀರ ಕೆಲಸ ಮಾಡಿದಾಗ ದೇಹದ ವಿಭಿನ್ನ ಅಂಗಗಳಲ್ಲಿರುವ ಸ್ನಾಯುಗಳಲ್ಲಿ ಸೆಳೆತವುಂಟಾಗುತ್ತದೆ. ಈ ಸ್ಥಿತಿ ಹೆಚ್ಚು ಕಾಲದ ವರೆಗಿದ್ದರೆ ಸ್ನಾಯುಗಳ ಕಾರ್ಯಕ್ಷಮತೆ ಕಡಿಮೆಯಾಗಿ ಆಯಾಸವಾಗುತ್ತದೆ. ಸ್ನಾಯುಗಳು ಕಾರ್ಯ ಮಾಡುವಂತಾಗಲು ಅದಕ್ಕೆ ಆಹಾರ ಬೇಕು. ಅದು ಸ್ನಾಯುಗಳಲ್ಲಿ ಕೂಡಿ ಬಿದ್ದ ಗ್ಲೂಕೋನೇಟ್ ಎಂಬ ಪದಾರ್ಥದಿಂದ ಪ್ರಾಪ್ತವಾಗುತ್ತದೆ.

ಶರೀರಕ್ಕೆ ಭೋಜನ ದೊರೆತಾಗ ಅದು ಪಚನಗೊಂಡು ಶರ್ಕರವಾಗಿ ರಕ್ತದ ಮುಖಾಂತರ ಸ್ನಾಯುಗಳಲ್ಲಿ ಸಂಗ್ರಹಗೊಳ್ಳುತ್ತದೆ. ಅಲ್ಲಿ ಅದು ಗ್ಲೂಕೋನೇಟ್ ಆಗಿ ಪರಿವರ್ತಿತವಾಗುತ್ತದೆ. ಶರೀರ ಕೆಲಸ ಮಾಡುವಾಗ, ಈ ಗ್ಲೂಕೋನೇಟ್ ಪ್ರಾಣವಾಯುವಿನೊಡನೆ ಕೂಡಿಕೊಂಡು, ಪರಿಣಾಮವಾಗಿ ಲ್ಯಾಕ್ಟಿಕ್ ಆ್ಯಸಿಡ್ ಹಾಗೂ ಇಂಗಾಲಾಮ್ಲವಾಯುವು ತಯಾರಾಗಿ, ಇಂಗಾಲಾಮ್ಲವು ಪುಪ್ಪುಸದೊಳಗೆ ಹೋಗಿ ಅಲ್ಲಿಂದ ಅದು ಉಚ್ಛ್ವಾಸನದಲ್ಲಿ ಶರೀರದಿಂದ ಹೊರಗೆ ಹೋಗುತ್ತದೆ. ಲ್ಯಾಕ್ಟಿಕ್ ಆ್ಯಸಿಡ್ ಶರೀರದಲ್ಲಿಯೆ ಉಳಿದುಕೊಳ್ಳುತ್ತದೆ. ಹೆಚ್ಚು ಹೆಚ್ಚು ಶರೀರಶ್ರಮದ ಕೆಲಸ ಮಾಡಿದಂತೆಲ್ಲ ಹೆಚ್ಚು ಹೆಚ್ಚು ಗ್ಲೂಕೋನೇಟ್ ಖರ್ಚಾಗುತ್ತದೆ. ಹೀಗಾಗಿ ಹೆಚ್ಚು ಹೆಚ್ಚು ಪ್ರಾಣವಾಯುವನ್ನು ಬಳಸಬೇಕಾಗುತ್ತದೆ. ಶರೀರ

ಶ್ರಮದ ಕೆಲಸ ಮಾಡುವಾಗ ಏದುಸಿರು ಬಿಡುವಂತಾಗುವುದು ಇದೇ ಕಾರಣದಿಂದ.

ಸ್ನಾಯುಗಳಲ್ಲಿ ಸಂಗ್ರಹಗೊಂಡ ಲ್ಯಾಕ್ಟಿಕ್ ಆ್ಯಸಿಡ್ ಪ್ರಾಣವಾಯುವಿನೊಡನೆ ಪುನಃ ಸಂಗ್ರಹಗೊಂಡು ಗ್ಲೂಕೋನೇಟ್ ತಯಾರಾಗುತ್ತದೆ. ಸಾಮಾನ್ಯ ಸ್ಥಿತಿಯಲ್ಲಿ ಲ್ಯಾಕ್ಟಿಕ್ ಆ್ಯಸಿಡ್ ಹಾಗೂ ಗ್ಲೂಕೋನೇಟ್‌ಗಳ ಪ್ರಮಾಣದಲ್ಲಿ ಸಂತುಲನವಿರುವದು. ಗ್ಲೂಕೋನೇಟ್ ಖರ್ಚಾದಷ್ಟು ಹೊಸದಾಗಿ ತಯಾರಾಗುತ್ತದೆ. ಆದರೆ ಶರೀರಶ್ರಮದ ಕೆಲಸವನ್ನು ಮಾಡಿದಾಗ ಈ ಸಂತುಲನದಲ್ಲಿ ವ್ಯತ್ಯಯುವುಂಟಾಗುವದು. ಗ್ಲೂಕೋನೇಟ್ ಖರ್ಚಾಗುವುದಕ್ಕೂ ಅದರ ಪುನರ್ನಿರ್ಮಾಣವಾಗುವುದಕ್ಕೂ ಪ್ರಾಣವಾಯುವು ಅವಶ್ಯವೆಂಬುದನ್ನು ಈ ಮೊದಲೇ ಹೇಳಲಾಗಿದೆ. ಸಾಮಾನ್ಯ ವೇಗದಿಂದ ಕೆಲಸ ಮಾಡುವಾಗ ಖರ್ಚಾದ ಗ್ಲೂಕೋನೇಟಿನ ಪ್ರಮಾಣವನ್ನು ತುಂಬಲು ಸಾಕಾಗುವಷ್ಟು ಪ್ರಾಣವಾಯುವು ಶರೀರದಲ್ಲಿ ಪ್ರವೇಶಿಸುತ್ತದೆ. ಸ್ವಲ್ಪ ಜೋರಾಗಿ ಕೆಲಸ ಮಾಡಿದಾಗ ಹೆಚ್ಚು ಪ್ರಮಾಣದಲ್ಲಿ ವೆಚ್ಚವಾದ ಗ್ಲೂಕೋನೇಟನ್ನು ಹೊಸದಾಗಿ ತುಂಬಿಕೊಳ್ಳಬಲ್ಲಷ್ಟು ಪ್ರಾಣವಾಯುವು ಲಭ್ಯವಾಗದೆ ಇರುವದರಿಂದ ಗ್ಲೂಕೋನೇಟ್ ಪ್ರಮಾಣ ಕಡಿಮೆಯಾಗಿ ಲ್ಯಾಕ್ಟಿಕ್ ಆ್ಯಸಿಡ್ಡಿನ ಪ್ರಮಾಣ ಹೆಚ್ಚಾಗುತ್ತದೆ. ಇದನ್ನೇ ನಾವು ಆಯಾಸವೆಂದು ಕರೆಯುವುದು.

### ಶಾರೀರಕ ಆಯಾಸವನ್ನು ಪರಿಹರಿಸುವ ಉಪಾಯ

ಯಾವುದೇ ರೀತಿಯಿಂದ ಗ್ಲೂಕೋನೇಟನ್ನು ಶರೀರದಲ್ಲಿ ಹೆಚ್ಚಿಸಿದರೆ ಆಯಾಸ ಶಮನಗೊಳ್ಳುವದು, ಹೀಗಾಗಲು ಹೊರಗಿನಿಂದ ಸಕ್ಕರೆಯು ಶರೀರದಲ್ಲಿ ಸೇರಿಕೊಳ್ಳುವಂತೆ ಮಾಡಬೇಕು. ಆದ್ದರಿಂದಲೇ ದಣಿದ ವ್ಯಕ್ತಿಗೆ ಸಕ್ಕರೆ, ಜೇನುತುಪ್ಪ ಇಲ್ಲವೆ ಗ್ಲೂಕೋಸಿನಿಂದ ಮಾಡಿದ ಪಾನೀಯವನ್ನು ಕೊಟ್ಟರೆ ಆಯಾಸ ಪರಿಹಾರಗೊಳ್ಳುವುದು. ಚಿಕ್ಕ ಮಕ್ಕಳು ತಮ್ಮ ವೇಳೆಯನ್ನೆಲ್ಲಾ ಆಟಪಾಟಗಳಲ್ಲಿ ಕಳೆಯುವದರಿಂದ ಅವರಿಗೆ ಸಕ್ಕರೆ ಹೆಚ್ಚು ಪ್ರಮಾಣದಲ್ಲಿ ಬೇಕು.

ಆಯಾಸವನ್ನು ಪರಿಹರಿಸಿಕೊಳ್ಳಲು ಇರುವ ಇನ್ನೊಂದು ಉಪಾಯವೆಂದರೆ ಶರೀರದಲ್ಲಿನ ಗ್ಲೂಕೋನೇಟಿನ ವ್ಯಯುವನ್ನು ತಡೆಗಟ್ಟುವದು ಮತ್ತು ಲ್ಯಾಕ್ಟಿಕ್ ಆ್ಯಸಿಡ್ಡಿನಿಂದ ಗ್ಲೂಕೋನೇಟಿನ ಪ್ರಮಾಣವನ್ನು ಹೆಚ್ಚಿಸುವದು. ವಿಶ್ರಾಂತಿಯಿಂದ ಇದನ್ನು ಸಾಧಿಸಬಹುದು. ಮಲಗಿದಾಗ ಗ್ಲೂಕೋನೇಟ್ ಕಡಿಮೆ ಪ್ರಮಾಣದಲ್ಲಿ ವ್ಯಯವಾಗುವದರಿಂದ ಹಾಯಾಗಿ ಮಲಗಿ ವಿಶ್ರಾಂತಿ ಪಡೆಯುವುದು ಒಳ್ಳೆಯದು. ನಿದ್ರಿಸುವಾಗ ಶ್ವಾಸೋಚ್ಛ್ವಸದ ಗತಿಯು ಮಂದವಾಗುವದರಿಂದ ಕಡಿಮೆ ಪ್ರಮಾಣದಲ್ಲಿ ಪ್ರಾಣವಾಯುವು ಶರೀರದಲ್ಲಿ ಪ್ರವೇಶಿಸುತ್ತದೆ. ಆದ್ದರಿಂದ ಹೆಚ್ಚು ಹೊತ್ತು ನಿದ್ರಿಸಿ ಎದ್ದಾಗಲೂ ಆಯಾಸವಾದಂತೆ ಅನಿಸುತ್ತದೆ. ಅಲ್ಲದೆ ಆಗ ಆಕಳಿಕೆಯೂ ಬರುವದುಂಟು. ಆಗ ಒಮ್ಮೆ ಚೆನ್ನಾಗಿ ಆಕಳಿಸಿ ಹವೆಯನ್ನು ಒಳಗೆ ಎಳೆದುಕೊಂಡಾಗ ಪ್ರಾಣವಾಯು ಹೆಚ್ಚು ಪ್ರಮಾಣದಲ್ಲಿ ದೇಹದಲ್ಲಿ ಪ್ರವೇಶಿಸಿ ಅಲ್ಲಿಯ ಕೊರತೆಯನ್ನು ತುಂಬಿಕೊಡುತ್ತದೆ.

ಶಾರೀರಕವಾಗಿ ಹೆಚ್ಚು ಆಯಾಸವಾಗದಂತಿರಲು ಹೇಗೆ ಕೆಲಸ ಮಾಡಬೇಕು ಎಂಬುದನ್ನು ತಿಳಿದುಕೊಳ್ಳುವುದೂ ಮಹತ್ವದ್ದು. ನೀವು ಕುಳಿತೇ ಕೆಲಸ ಮಾಡಿರಿ; ನಿಂತೇ ಕೆಲಸ ಮಾಡಿರಿ ಬೆನ್ನುಹುರಿ ನೇರವಾಗಿರುವಂತೆ ನೋಡಿಕೊಳ್ಳುವದು ಮಹತ್ವದು. ಕೆಲಸ ಮಾಡುವಾಗ ಮೇಲಿಂದ ಮೇಲೆ ಸ್ಥಾನ ಬಿಟ್ಟು ಏಳುತ್ತಿದ್ದರೆ ಇಲ್ಲವೆ ನೀವು ಮಾಡುವ ಕೆಲಸದತ್ತ ಮೇಲಿಂದ ಮೇಲೆ ಬಗ್ಗಿ ನೋಡುತ್ತಿದ್ದರೆ ಹೆಚ್ಚು ಆಯಾಸವಾದ ಅನುಭವವಾಗುತ್ತದೆ. ಆದ್ದರಿಂದ ಕೆಲಸಮಾಡುವಾಗ ಸಾಧ್ಯವಾದ ಮಟ್ಟಿಗೆ ಕೆಲಸ ಮಾಡುವ ಭಂಗಿಯನ್ನು ಬದಲಿಸಬಾರದು. ಲಯಾತ್ಮಕವಾಗಿ ಕೆಲಸ ಮಾಡುತ್ತಿದ್ದರೆ ಆಯಾಸ ಕಡಿಮೆಯಾಗುತ್ತದೆ. ಹಳ್ಳಿಯಲ್ಲಿ ಹೆಂಗಸರು ಹಿಟ್ಟು

ಬೀಸುವಾಗ ಹಾಡುವುದು ಇದೇ ಕಾರಣಕ್ಕಾಗಿ.

ಆಯಾಸವನ್ನು ಪರಿಹರಿಸುವ ವಿಧಾನಗಳನ್ನು ಕುರಿತು ಈ ವರೆಗೆ ಅನೇಕ ಅಧ್ಯಯನಗಳನ್ನು ನಡೆಸಲಾಗಿದೆ. ಆ ಪ್ರಕಾರ, ಹೆಚ್ಚು ದಣಿದು ಹೆಚ್ಚು ಅವಧಿಯ ವರಗೆ ವಿಶ್ರಾಂತಿ ಪಡೆಯುವುದಕ್ಕಿಂತ ಸ್ವಲ್ಪ ದಣಿವಾದ-ಕೂಡಲೇ ಸ್ವಲ್ಪ ಅವಧಿಯ ವರೆಗೆ ವಿಶ್ರಾಂತಿ ಪಡೆಯುವದೇ ಹೆಚ್ಚು ಪ್ರಯೋಜನಕರವಾದದ್ದು. ಸ್ನಾಯುಗಳು ಹೆಚ್ಚು ದಣಿದಾಗ ಅವು ಮೊದಲಿನಂತೆ ಕ್ರಿಯಾಶೀಲವಾಗಲು ಹೆಚ್ಚು ಸಮಯ ಹಿಡಿಯುತ್ತದೆ. ಅತಿ ಹೆಚ್ಚು ಪರಿಶ್ರಮದ ಕೆಲಸ ಮಾಡಿದಾಗ ಸ್ನಾಯುಗಳಿಗೆ ತುಂಬಿಬಾರದಷ್ಟು ಹಾನಿಯಾಗುವ ಸಂಭವವೂ ಉಂಟು.

ಒಂಟೆಯ ಮೇಲೆ ಭಾರವಾದ ವಸ್ತುಗಳನ್ನು ಹೇರಿದಾಗ ಅದು ಆಯಾಸಗೊಂಡು ಕೆಳಗೆ ಬೀಳುವ ವರೆಗೂ ನಡೆಯುತ್ತಲೇ ಇರುತ್ತದೆ ಮತ್ತು ಇಂಥಾ ಸ್ಥಿತಿಯಲ್ಲಿ ಅದು ಬದುಕುವ ಸಂಭವವೂ ಕಡಿಮೆ ಎಂದು ಹೇಳಲಾಗುತ್ತದೆ. ಹೆಚ್ಚು ಶ್ರಮದ ಕೆಲಸ ಮಾಡುವವರು ಪ್ರತಿ ಎರಡು ಗಂಟೆಗಳಿಗೊಮ್ಮೆ ಐದರಿಂದ ಹತ್ತು ನಿಮಿಷಗಳ ವರೆಗೆ ವಿಶ್ರಾಂತಿ ಪಡೆಯುವುದು ವಿಹಿತವಾದದ್ದು. ಹೀಗೆ ಮಾಡುವದರಿಂದ ಕಾರ್ಯಕ್ಷಮತೆ ಬೆಳೆಯುವುದಲ್ಲದೆ ಶರೀರವೂ ಸದೃಢವಾಗಿ ಉಳಿಯುವುದು.

## ಮಾನಸಿಕ ಆಯಾಸ

ಮಿದುಳಿನಿಂದ ಬಂದ ಸಂಕೇತದ ಮೇರೆಗೆ ವಿಭಿನ್ನ ಅಂಗಗಳು ವರ್ತಿಸುತ್ತವೆ. ಮಿದುಳಿನಿಂದ ಹೆಚ್ಚು ಸಂಖ್ಯೆಯಲ್ಲಿ ಸಂಕೇತಗಳು ಬಂದಾಗ ಸ್ನಾಯುಗಳು ಹೆಚ್ಚು ಕ್ಷಿಪ್ರವಾಗಿ ಕಾರ್ಯ ನಿರ್ವಹಿಸುತ್ತದೆ. ಆದರೆ ಸಂಕೇತಗಳ ಸಂಖ್ಯೆ ಕಡಿಮೆಯಾದರೆ ಸ್ನಾಯುಗಳು ಆಯಾಸಗೊಳ್ಳದಿದ್ದರೂ ಚುರುಕಾಗಿ ಕೆಲಸ ಮಾಡಲಾರವು. ಈ ಸ್ಥಿತಿಗೇ 'ಮಾನಸಿಕ ಆಯಾಸ'ವೆಂಬ ಹೆಸರು.

ಕೆಲಸ ಮಾಡುವಾಗ ಬೇಸರಿಕೆ ಬಂದರೂ ಕೆಲವರು ನಿರ್ವಾಹವಿಲ್ಲದೆ ಕೆಲಸವನ್ನು ಮುಂದುವರಿಸಬೇಕಾಗಬಹುದು. ಆಗ ಕಾರ್ಯ ನಿರ್ವಹಿಸುವವನ ಅವಚೇತನವು ಆ ವ್ಯಕ್ತಿ ಕೆಲಸವನ್ನು ಮುಂದುವರಿಸಿಕೊಂಡು ಹೋಗುವುದನ್ನು ವಿರೋಧಿಸುತ್ತದೆ. ಆದ್ದರಿಂದ ಆಗ ಅವನ ಮಿದುಳಿನಿಂದ ಬರುವ ಸಂಕೇತಗಳ ಸಂಖ್ಯೆ ಕಡಿಮೆಯಾಗುತ್ತದೆ. ಹೀಗಾಗಿ ಅವನಿಗೆ ದಣಿವಾದಂತೆನಿಸುತ್ತದೆ. ಅನಿಚ್ಛೆಯಿಂದ ಬಹಳ ಕಾಲದ ವರೆಗೆ ಕೆಲಸವನ್ನು ಮುಂದುವರಿಸಿಕೊಂಡು ಹೋದರೆ ಮಿದುಳಿನಿಂದ ಹೊರಹೊಮ್ಮುವ ಸಂಕೇತಗಳ ಸಂಖ್ಯೆ ಕಡಿಮೆಯಾಗುತ್ತದಷ್ಟೇ ಅಲ್ಲ, ಎಲ್ಲ ಶಾರೀರಕ ಕ್ರಿಯೆಗಳೂ ಮಂದವಾಗುತ್ತವೆ. ಇದರಿಂದಾಗಿ ಶ್ವಾಸೋಚ್ಛ್ವಾಸವೂ ನಿಧಾನವಾಗಿ ನಡೆಯುತೊಡಗಿ ಪ್ರಾಣವಾಯುವಿನ ಕೊರತೆಯು ಅನುಭವ ಶರೀರಕ್ಕಾಗ ತೊಡಗುತ್ತದೆ. ಆಗ ಕೆಲಸ ಮಾಡುವಾತ ಹೆಚ್ಚು ಪ್ರಾಣವಾಯುವನ್ನು ಶರೀರದಲ್ಲಿ ತುಂಬಿಕೊಳ್ಳಲು ಆಕಳಿಸಿ ದೀರ್ಘವಾಗಿ ಉಸಿರೆಳೆದುಕೊಳ್ಳುತ್ತಾನೆ. ಮನಸ್ಸಿಲ್ಲದ ಮನಸ್ಸಿನಿಂದ ಕೆಲಸ ಮಾಡಿದರೆ ಆಕಳಿಕೆ ಬರುವುದು ಈ ಕಾರಣದಿಂದಲೇ.

ಇಂತಹ ಸ್ಥಿತಿಯಲ್ಲಿ ಆ ವ್ಯಕ್ತಿಯ ಸ್ನಾಯುಗಳು ಆಯಾಸಗೊಂಡಿರುವುದಿಲ್ಲವಾದ್ದರಿಂದ ಅವನು ಮಲಗಿ ವಿಶ್ರಾಂತಿ ತೆಗೆದುಕೊಳ್ಳಬೇಕೆಂದರೆ ಪ್ರಯೋಜನವಿಲ್ಲ, ಮನಸ್ಸಿನಲ್ಲಿ ಚೈತನ್ಯವನ್ನು ತುಂಬುವುದು ಇಂತಹ ಸ್ಥಿತಿವೇಳೆಯಲ್ಲಿ ಅವಶ್ಯವಾದದ್ದು. ಸಮಾಜದಲ್ಲಿ ಉಚ್ಚ ಹಾಗೂ ಮಧ್ಯಮ ವರ್ಗಕ್ಕೆ ಸೇರಿದ ಜನರು ಶರೀರಶ್ರಮದ ಕೆಲಸವನ್ನು ಅಷ್ಟಾಗಿ ಮಾಡುವುದಿಲ್ಲವಾದ್ದರಿಂದ ಅವರಿಗೆ ಶಾರೀರಕವಾಗಿ ಶ್ರಮವಾಗುವ ಸಂಭವ ಕಡಿಮೆ. ಆದ್ದರಿಂದ ವಿಶ್ರಾಂತಿ ತೆಗೆದುಕೊಳ್ಳುವ ಆವಶ್ಯಕತೆಯೂ ಅವರಿಗೆ ಕಡಿಮೆ.

## ಮಾನಸಿಕ ಆಯಾಸವನ್ನು ಪರಿಹರಿಸುವ ಉಪಾಯ

ಚಹ, ಕಾಫಿಗಳಂತಹ ಪೇಯಗಳು

ಮನಸ್ಸಿಗೆ ಉತ್ತೇಜನವನ್ನು ನೀಡುತ್ತವೆ. ಆದ್ದರಿಂದ ಮಾನಸಿಕವಾಗಿ ಆಯಾಸಕ್ಕೊಳಗಾದವರು ಚಹವನ್ನೊ ಕಾಫಿಯನ್ನೊ ಸೇವಿಸುವದು ವಿಹಿತ. ಆಗ ಒಳ್ಳೆ ಸ್ವಾರಸ್ಯವಾಗಿ ಹರಟೆಹೊಡೆಯುವ ಅಭ್ಯಾಸವನ್ನು ಬೆಳೆಸಿಕೊಂಡರಂತೂ ಇನ್ನೂ ಒಳ್ಳೆಯದು. ಆದ್ದರಿಂದ ಮಾನಸಿಕ ಆಯಾಸವನ್ನು ಪರಿಹರಿಸಿಕೊಳ್ಳಲು ಮುಖ್ಯವಾದದ್ದು ತಮಗೆ ಒಗ್ಗದ ಕೆಲಸವನ್ನು ಬಿಟ್ಟು ಆಸಕ್ತಿಯಿದ್ದ ಇನ್ನೊಂದು ಕೆಲಸವನ್ನು ಕೈಗೆತ್ತಿಕೊಳ್ಳುವುದು. ಇದೇ ವಿಶ್ರಾಂತಿ ಪಡೆಯುವುದಕ್ಕೆ ಒಕ್ಕ ಉಪಾಯ.

ದಿನವಿಡಿ ಆಫೀಸಿನಲ್ಲಿ ತಲೆ ತಗ್ಗಿಸಿ ಕೆಲಸ ಮಾಡಿ ದಣಿದು ಮನೆಗೆ ಬರುವವರು ಹಾಸಿಗೆಯ ಮೇಲೆ ಬಿದ್ದುಕೊಳ್ಳುವುದಕ್ಕಿಂತ ತಮಗೆ ಇಷ್ಟವಾದ ಯಾವುದೇ ಕೆಲಸವನ್ನು ಕೈಗೆತ್ತಿಕೊಳ್ಳುವುದು ಲೇಸು. ಇದು ಬೇಡವಾಗಿದ್ದರೆ ಅಂತಹರು ತಮಗೆ ಬೇಕಾದ ಆಟವನ್ನು ಆಡಿ ವಿಶ್ರಾಂತಿ ಪಡೆಯಬಹುದು, ಏಕೆಂದರೆ ಇದರಿಂದಾಗಿ ಮನಸ್ಸಿಗೆ ಹೆಚ್ಚಿನ ಚೈತನ್ಯ ದೊರೆಯುವುದಲ್ಲದೆ ಶರೀರಕ್ಕೂ ಹೆಚ್ಚು ಪ್ರಮಾಣದಲ್ಲಿ ಪ್ರಾಣವಾಯುವು ದೊರೆತು ಆಯಾಸ ಪರಿಹಾರಗೊಳ್ಳುತ್ತದೆ.

ಮಾನಸಿಕ ಆಯಾಸದಿಂದ ಬಳಲುವವರ ಪೈಕಿ ಉಚ್ಚ ಹಾ[illegible]ಧ್ಯಮವರ್ಗೀಯರೇ ಹೆಚ್ಚು. ಅವರು ತಮ್ಮ ಕಾರ್ಯವನ್ನು ಮನಸ್ಸುಗೊಟ್ಟು ಮಾಡದಿರುವುದೇ ಇದಕ್ಕೆ ಕಾರಣ. ಈ ದಿನಗಳಲ್ಲಿ ಮಹಿಳೆಯರು ಹೆಚ್ಚಾಗಿ ವಿದ್ಯಾವಂತರಾಗಿರುವರಿಂದ ತಮ್ಮ ಕಾರ್ಯಕ್ಷೇತ್ರ ಅಡುಗೆಮನೆಯಿಂದ ಹೊರಗಿದೆಯೆಂದು ಭಾವಿಸುತ್ತಾರೆ. ಆದರೆ ಅಡುಗೆ ಮನೆಯಲ್ಲಿ ದುಡಿಯುವುದೇನೂ ಅವರಿಗೆ ತಪ್ಪುವದಿಲ್ಲ. ಮನಸ್ಸಿಲ್ಲದ ಮನಸ್ಸಿನಿಂದ ಅವರು ಕೆಲಸ ಮಾಡುವುದರಿಂದ ಬೇಗನೆ ಆಯಾಸವಾಗುತ್ತದೆ.

ಅನೇಕ ಮಹಿಳೆಯರು ತಮಗೆ ಬೆನ್ನು ಮುರಿಯುವಷ್ಟು ಮನೆಗೆಲಸವಿರುತ್ತದೆಂದು ಗೊಣಗುತ್ತಿರುತ್ತಾರೆ. ವೇಳೆ ಸಿಕ್ಕಾಗಲೆಲ್ಲಾ ಮಲಗಿ ವಿಶ್ರಾಂತಿ ಪಡೆಯಲು ಇಚ್ಛಿಸುತ್ತಾರೆ. ಅವರಿಗಾದ ಆಯಾಸ ಮಾನಸಿಕ ಸ್ವರೂಪದ್ದೇ ಹೊರತು ಶಾರೀರಕವಲ್ಲವೆಂಬುದು ಅವರಿಗೆ ಹೊಳೆಯುವುದೇ ಇಲ್ಲ. ಹೀಗಾಗಿ ಅವರ ಆಯಾಸ ಹೆಚ್ಚಾಗುತ್ತದೆಯೇ ಹೊರತು ಕಡಿಮೆಯಾಗುವುದಿಲ್ಲ. ಇಡೀ ದಿನ ದುಡಿದು 'ಹಣ್ಣಾದ' ಹೆಂಡತಿಯನ್ನು ಗಂಡ ಸಿನೇಮಾಕ್ಕೋ ನಾಟಕಕ್ಕೋ ಕರೆದರೆ ಅವಳು ಆಯಾಸವೆಲ್ಲವನ್ನೂ ಮರೆತು ಹೊರಗೆ ಹೊರಡುವ ಸಿದ್ಧತೆಯನ್ನು ನಡೆಸತೊಡಗುತ್ತಾಳೆ. ಅವಳಿಗಾದ ಶ್ರಮ ಶಾರೀರಕವಾದದ್ದಲ್ಲ. ಮಾನಸಿಕವಾದದ್ದೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಇದೇ ಪ್ರಕಾರ ಅಧಿಕಾಂಶ ಗಂಡಸರು ದೊಡ್ಡ ದೊಡ್ಡ ಕನಸುಗಳನ್ನು ಕಾಣುತ್ತಿರುತಾರೆ. ತಮ್ಮ ಯೋಗ್ಯತೆ ದೊಡದು, ತಾವು ಪ್ರತಿಭಾವಂತರು, ತಮ್ಮ ಪ್ರತಿಭೆಯನ್ನು ಯಾರೂ ಗುರುತಿಸುವವರಿಲ್ಲ ಎಂದೆಲ್ಲ ಗೊಣಗುತ್ತಿರುತ್ತಾರೆ. ಹೀಗಾಗಿ ತಮ್ಮ ಕೆಲಸವನ್ನು ಏಕಾಗ್ರಚಿತ್ತರಾಗಿ ಮಾಡುವುದು ಅವರಿಂದ ಸಾಧ್ಯವಾಗುವುದೇ ಇಲ್ಲ. ಇದರಿಂದಾಗಿ ಅವರ ಮಾನಸಿಕ ಆಯಾಸ ಹೆಚ್ಚಾಗುತ್ತದೆ. ಇಂಥವರು ಒಮನಸ್ಸಿನಿಂದ ಕೆಲಸ ಮಾಡುವುದನ್ನು ಕಲಿಯಬೇಕು. ಒಂದೇ ಸವನೆ ಕೆಲಸ ಮಾಡುವುದರಿಂದ ತಾವು ಮಾಡುವ ಕಾರ್ಯದ ಬಗೆಗಿರುವ ಅಭಿರುಚಿ ಕಡಿಮೆಯಾಗುವುದಲ್ಲದೆ ಮಾನಸಿಕವಾಗಿ ಆಯಾಸವೂ ಆಗುವುದು. ಆದ್ದರಿಂದ ಕೆಲಸ ಮಾಡುವಾಗ ಮಧ್ಯೆ ಮಧ್ಯೆ ತಮ್ಮ ಮನಸ್ಸಿಗೊಪ್ಪುವ ರೀತಿಯಲ್ಲಿ ಕಾರ್ಯವಿಧಾನವನ್ನು ಬದಲಿಸಿಯೋ ಮತ್ತಾವುದೇ ಕೆಲಸವನ್ನು ಕೈಗೆತ್ತಿಕೊಂಡೋ ವಿಶ್ರಾಂತಿ ಪಡೆಯಬೇಕು. ಮಾನಸಿಕವಾಗಿ ಆಯಾಸವಾದಾಗ ಮಲಗಿ ವಿಶ್ರಾಂತಿ ಪಡೆಯುವದೆಂದರೆ ದಿನವಿಡಿ ಸುಮ್ಮನೆ ಕುಳಿತದ್ದರಿಂದ 'ಆಯಾಸಗೊಂಡು' ಅದನ್ನು' ಪರಿಹರಿಸಲು 'ವಿಶ್ರಾಂತಿ' ಪಡೆದಂತೆಯೆ ಸರಿ. ✡

# ಚಿಕ್ಕವನೇ ಇವನು?

ಜಿ. ಟಿ. ನಾರಾಯಣರಾವ್

ಮೈಸೂರಿನಲ್ಲಿ ಮೊದಲಬಾರಿ ದಸರಾ ವಸ್ತು ಪ್ರದರ್ಶನವನ್ನು ನೋಡಲು ಹೋಗಿದ್ದೆ (೧೯೭೨). ಧ್ವನಿವರ್ಧಕಗಳಿಂದ ಪ್ರಸಾರವಾಗುತ್ತಿದ್ದ ಪಿಟೀಲ ವಾದನ ಒಂದು ಕ್ಷಣ ನನ್ನ ಲಕ್ಷ್ಯವನ್ನು ಆ ಕಡೆಗೆ ಸೆಳೆಯಿತು. ಪ್ರದರ್ಶನದ ಅಂಗವಾಗಿ ಲಾಲ್ಗುಡಿ ಜಯರಾಮನ್ ಅವರ ಪಿಟೀಲು ವಾದನವನ್ನು ಏರ್ಪಡಿಸಿದ್ದಾರೆ. ನಾನು ಬಂದದ್ದು ಕೇವಲ ಆಕಸ್ಮಿಕವಾದರೂ ಇದೆಂಥ ವಿಸ್ಮಯಕರ ಸಂಘಟನೆ ಎಂದು ಸಂತೋಷಿಸಿ ವೇದಿಕೆಯನ್ನು ಅರಸಿ ಹೋದೆ. ದೂರದಿಂದ ಕಂಡ ದೃಶ್ಯ ಬೇರೆಯೇ: ಪ್ರಾಯಶಃ ಪಿಟೀಲಿನ ಕಮಾನಿನಷ್ಟೇ ಉದ್ದದ ಕಿರಿ ಅಣುಗ ಪ್ರಧಾನ ಕಲಾವಿದ, ಪಕ್ಕ ಪಿಟೀಲು ವಾದನಕಾರರಾಗಿ ನನಗೆ ಪರಿಚಿತರೇ ಆಗಿದ್ದ ಮಹದೇವಪ್ಪನವರು. ಕಣ್ಣುಮುಚ್ಚಿಕೊಂಡರೆ ಅದೇ ಲಾಲ್ಗುಡಿ ವೈಖರಿ, ಅದೇ ತಿರುವು ಅದೇ ಕಛೇರಿ ಓಟ, ಮುಗಿದ ಬಳಿಕ ಮಹದೇವಪ್ಪನವರನ್ನು ಕೇಳಿದ. ಈ ಪೋರ ಯಾರೆಂದು. ತನ್ನ ಮಗ ನಾಗರಾಜ ಎಂದು ಆ ಹನ್ನೊಂದು ವರ್ಷದ ಮುದ್ದು ಕೂಸನ್ನು ಅವರು ನನಗೆ ಪರಿಚಯಿಸಿದಾಗ ಆಶ್ಚರ್ಯವಾಯಿತು.

ತೀರ ಈಚೆಗೆ (ಫೆಬ್ರುವರಿ ೧೯೭೩) ಮೈಸೂರು ನಗರದಲ್ಲಿ ನಡೆದ ಒಂದು ಸಾರ್ವಜನಿಕ ಸಂಗೀತ ಕಛೇರಿ. ಪ್ರಧಾನ ಹಾಡುಗಾರರು ದೆಹಲಿ ವಿಶ್ವವಿದ್ಯಾಲಯದ ಸಂಗೀತ ಪ್ರಾಧ್ಯಾಪಕ ಟಿ. ಆರ್. ಸುಬ್ರಹ್ಮಣ್ಯ ಅವರು. ಅವರಿಗೆ ಪಕ್ಕ ವಾದನಕಾರ ನಮ್ಮ ನಾಗರಾಜ. ಜಿ. ಎನ್ ಬಿಯವರ ಶಿಷ್ಯರಾದ ಸುಬ್ರಹ್ಮಣ್ಯಂ ಅವರದು ಅದೇ ಪ್ರವಾಹೋಪಮ ಶೈಲಿ— ಆಲಾಪನೆ ಆಗಲಿ, ಬಿರ್ಕಾಗಳಾಗಲಿ, ನೆರವಲ್ ಆಗಲಿ, ಕಲ್ಪನಾಸ್ವರ ವಿಸ್ತಾರವಾಗಲಿ. ಎಲ್ಲೆಲ್ಲೂ ಅವರ ಚೈತನ್ಯ ಅಸಾಧಾರಣ ಕೆಲವೊಂದು ತಿರುಗಾಸುಗಳಂತೂ ಎಂಟೆದೆಯ ಚೌಡಯ್ಯನವರಿಗೂ, ಸವಾಲಾಗುವಂಥವು. ಇವರೊಂದಿಗೆ ನಾಗರಾಜ ನಿಭಾಯಿಸಬಲ್ಲನೇ, ಎಳೆ ಮನಸ್ಸಿಗೆ ತನ್ನ ಅಸಹಾಯಕತೆಯಿಂದ ಘಾಸಿ ಆಗಬಾರದಲ್ಲ, ಇಷ್ಟು ಹೀಚಾಗಿರುವಾಗಲೇ ಆ ಹಿರಿಯ ಗಾಯಕರೊಂದಿಗೆ ಈತನನ್ನು ಕೂರಿಸಬಾರದಿತ್ತೋ ಏನೋ ಎಂಬ ಪ್ರಾಮಾಣಿಕ ಸಂದೇಹ ನನ್ನಂತೆ ಇತರ ಕೆಲವರಿಗೂ ಇತ್ತು. ಮೊದಲ ಕೀರ್ತನೆಯಲ್ಲಿಯೇ ನಾಗರಾಜನ ಪ್ರತಿಮೆ (ಪಿಟೀಲಿನ ಅಗ್ರಭಾಗದ ಮೇಲೆ ಗಲ್ಲ ಒತ್ತಿ ಮದುಮಗಳಂತೆ ಈ ಕೂಸು ಕೂತಿರುತ್ತದೆ). ಅಸಾಧಾರಣ ಹುಮ್ಮಸ್ಸಿನಿಂದ



ಸುಬ್ರಹ್ಮಣ್ಯ ಶೈಲಿಗೆ ಪೋಷಣ ರಸವನ್ನು ಪಿಟೀಲಿನಿಂದ ಎರೆದದ್ದು ಕೇಳಿದಾಗ ತುಂಬ ಧೈರ್ಯವಾಯಿತು, ಸಮಾಧಾನವಾಯಿತು. ಮುಂದಿನ ಹಾಡುಗಳಲ್ಲಿ ಸುಬ್ರಹ್ಮಣ್ಯಂ ಯಾವ ಪಲುಕುಗಳಿಗೂ ಯಾವ ಕಸರತ್ತುಗಳಿಗೂ ಒಂದಿಷ್ಟೂ ಅಳುಕದೆ ನಾಗರಾಜ ಅನುಸರಿಸಿದ್ದು, ಎತ್ತಿ ಹಿಡಿದದ್ದು, ಪದೇಪದೆ ಹರವು ತೋರಿಸಿದ್ದು ನೋಡಿದಾಗ ಪದೇ ಪದೇ ನನ್ನ ಸ್ಮರಣೆಗೆ ಬಂದದ್ದು ಚೌಡಯ್ಯನವರ ಕೃಷ್ಣ ಸಾರಥ್ಯ. ನಾಗರಾಜನ ಪ್ರತಿಭೆಗೆ ತುಂಬ ಮೆಚ್ಚುಗೆ ಪ್ರದರ್ಶಿಸಿದ ಸುಬ್ರಹ್ಮಣ್ಯಂ ಅವರು ಪುರಂದರದಾಸರ "ಚಿಕ್ಕವನೇ ಇವನು?" ಎಂಬ ಕೃಷ್ಣನ ಮೇಲಿನ ಕೀರ್ತನೆಯನ್ನು ಹಾಡಿದಾಗ ಅವರ ಸಮಯಸ್ಫೂರ್ತಿ ಮತ್ತು ಆ ಹಾಡಿನ ಔಚಿತ್ಯ ರಸಿಕರೆಲ್ಲರಿಗೂ ಅಪಾರ ರಸಾನಂದ ನೀಡಿತು.

ವಿದ್ವಾನ ಎಸ್. ಮಹದೇವಪ್ಪನವರು ನಮ್ಮ ನಾಡಿನ ಹೆಸರಾಂತ ಪಿಟೀಲುವಾದಕರ ಪೈಕಿ ಒಬ್ಬರು. ಇವರ ಹಿರೇಮಗ ನಾಗರಾಜ (೧೯೬೦) ತನ್ನ ಹತ್ತನೆಯ ವಯಸ್ಸಿನವರೆಗೆ ಇತರ ಎಲ್ಲ ಹುಡುಗರ ಹಾಗೆ ಪಾಠ ಮತ್ತು ಅದಕ್ಕಿಂತ ಹೆಚ್ಚಾಗಿ ಆಟದಲ್ಲಿ ಮಗ್ನನಾಗಿರುತ್ತಿದ್ದ. ಅಲ್ಲೇ ಎಲ್ಲೋ ನಡೆದ ಒಂದು ಸಂಗೀತ ಕಛೇರಿಯಲ್ಲಿ ಒಬ್ಬ ಚಿಕ್ಕ ಹುಡುಗನ ಮೃದಂಗ ವಾದನ ಹಾಗೂ ಅವನಿಗೆ ದೊರೆತ ಶಹಭಾಸ್‌ಗಿರಿ ಕಂಡ ನಾಗರಾಜ ತಾನಾಗಿಯೇ ತನ್ನ ತಂದೆಯೊಡನೆ ತನಗೆ ಸಂಗೀತ ಕಲಿಸಬೇಕೆಂದು ಹಟ ಹಿಡಿದ. ಸರಿ, ಮರುದಿನದಿಂದ ನಾಗರಾಜನಿಗೆ ಹಾಡುಗಾರಿಕೆಯ ಪಾಠಗಳು ಸುರುವಾದುವು. ಸರಳೆ, ಜಂಟಿ ವರಸೆ ಮುಂತಾದ ಕವಾಯತಿಯಲ್ಲಿ ಎಂಟು ತಿಂಗಳುಗಳು ಸಂದುಹೋದುವು— ಇವನು ನಿಷ್ಪ್ರಯೋಜಕ ಎಂಬುದಾಗಿ ಸಂಗೀತ ಮೇಷ್ಟ್ರು ಇವನ ಕೈ ಬಿಟ್ಟರು. ಇವನಿಗಾದರೂ ಕಂಠ ಸರಿಯಾಗಿ ವರ್ತಿಸದೆ ಪಿಟೀಲೇ ತನ್ನ ಮಾಧ್ಯಮ ಎಂದು ಹೊಳೆದಿರಬೇಕು, ಹೀಗಾಗಿ, ತಂದೆ ಗುರುವಾಗಿ ಮಗ ಶಿಷ್ಯನಾಗಿ ಪಿಟೀಲು ಪಾಠ ಆರಂಭವಾಯಿತು.

## ಬಸವನ ಹುಳ

ಬಸವನಹುಳು ಪ್ರಪಂಚದಲ್ಲಿಯೆ ಅತಿ ಶಕ್ತಿಶಾಲಿಯಾದುದೆಂದರೆ ಅಚ್ಚರಿ ಎನಿಸಬಹುದು. ಒಂದು ಔನ್ಸು ಭಾರದ ಬಸವನ ಹುಳು ೨೪ ಪೌಂಡು ತೂಕವನ್ನು ಎಳೆದೊಯ್ಯಬಲ್ಲದು ಅಂದರೆ ತನ್ನ ತೂಕದ ೪೦೦ ಪಟ್ಟು ಭಾರವನ್ನು ಅದು ಎಳೆಯಬಲ್ಲದೆಂದಾಯಿತು. ಹತ್ತು ಪೌಂಡು ತೂಕದ ಮಗುವೊಂದು ಕಾರನ್ನು ಎಳೆದಂತಾಗುತ್ತದೆ ಇದು. ಆದರೆ ಬಸವನ ಹುಳದ ನಡಿಗೆ ತೀರ ಸಾವಕಾಶ ವಾದುದು. ಇದರ ನಡಿಗೆಯ ವೇಗವನ್ನು ನಿರ್ಧರಿಸುವ ಕೆಲ ಪ್ರಯತ್ನಗಳೂ ನಡೆದಾಗ ಇವುಗಳ ಸಾಮಾನ್ಯ ವೇಗ ಒಂದು ಗಂಟೆಗೆ ೦.೦೦೦೩೬ ಮೈಲು ಮತ್ತು ಇವುಗಳಲ್ಲಿ ವೇಗದಿಂದ ನಡೆಯಬಲ್ಲವು ಪ್ರತಿ ಗಂಟೆಗೆ ೦.೦೩೧೩ ಮೈಲು ಕ್ರಮಿಸುತ್ತವೆಂದು ಕಂಡು ಬಂದಿದೆ.

ಸಾಕಿದ ಬಸವನ ಹುಳಗಳ ಓಟದ ಸ್ಪರ್ಧೆಯೊಂದು ಇಂಗ್ಲಂಡಿನಲ್ಲಿ ಪ್ರತಿ ವರ್ಷ ಜೂನ ತಿಂಗಳಲ್ಲಿ ನಡೆಯುತ್ತದೆ. ಗಾಜಿನ ಹಾಳೆಯ ಮೇಲೆ ೨೪ ಅಂಗುಲಗಳಷ್ಟು ಅಂತರ ಕ್ರಮಿಸುವದೇ ಈ ಸ್ಪರ್ಧೆಯ ಕರಾರು. ಇದರಲ್ಲಿ ಕೂಡ ಇಂಗ್ಲಂಡದ ಬಸವನ ಹುಳವೊಂದು ೧೦೩ ಗಂಟೆಗಳಲ್ಲಿ ಒಂದು ಮೈಲು ಅಂತರ ಕ್ರಮಿಸುವ ವಿಕ್ರಮ ಸಾಧಿಸಿದೆ.

ಈತನಿಗಾಗಿ ಕಿರಿ ಪಿಟೀಲೊಂದನ್ನು ಸಂಪಾದಿಸಬೇಕಾಯಿತು. ಅಯಸ್ಕಾಂತ ಕಬ್ಬಿಣವನ್ನು ಸೆಳೆವ ಸಹಜ ರೀತಿಯಲ್ಲಿ ನಾಗರಾಜ ಪಿಟೀಲನ್ನು ಆಕರ್ಷಿಸಿದ. ಇತರರು ನಾಲ್ಕು ತಿಂಗಳ ಪಾಠದ ಅನಂತರ ಸಾಧಿಸಲಾಗದ ಚಳಕಗಳು ಇವನಿಗೆ ನಾಲ್ಕು ದಿವಸಗಳಲ್ಲೇ ಸಿದ್ಧಿಸುತ್ತಿದ್ದುವು. ಶಾಲೆಯ ಮಾಮೂಲೀ ಪಾಠವೊಂದನ್ನುಳಿದು ಮಿಕ್ಕ ಸಮಸ್ತ ಕಾಲವೂ ನಾಗರಾಜನಿಗೆ ಪಿಟೀಲಿನೊಂದಿಗೆ ಸಹಯೋಗ, ತಪಸ್ಸು.

೧೯೭೧ರ ದಸರಾ ಉತ್ಸವದ ಅಂಗವಾಗಿ ಮೈಸೂರಿನ ಪುರಭವನದಲ್ಲಿ ಸಂಗೀತ ವಿದ್ವಾನ್ ಟಿ. ಪುಟ್ಟಸ್ವಾಮಯ್ಯನವರ ಕಛೇರಿ ಒಂದು ದಿವಸ ಏರ್ಪಾಡಾಗಿತ್ತು. (ಇವರು ಮಹದೇವಪ್ಪನವರ ಗುರುಗಳು ಕೂಡ.) ಪಿಟೀಲು ವಾದನಕ್ಕೆ ಮಹದೇವಪ್ಪನವರು ಬರಬೇಕೆಂದು ಪುಟ್ಟಸ್ವಾಮಯ್ಯನವರು ಅಪೇಕ್ಷಿಸಿದ್ದರು. ಆದರೆ ಮಹದೇವಪ್ಪನವರು ಅದೇ ವೇಳೆ ಬೇರೆ ಒಂದು ಕಾರ್ಯಕ್ರಮದಲ್ಲಿ ಹಾಜರಿರಲೇಬೇಕಾಗಿತ್ತು. ಇನ್ನು ಆ ಅವೇಳೆಯಲ್ಲಿ (?) ಬೇರೆ ಯಾವ ಪಿಟೀಲುಗಾರರೂ ಮೈಸೂರಿನಲ್ಲಿ ಬಿಡುವಾಗಿರಲಿಲ್ಲ. ಈ ಸಿಕ್ಕನ್ನು ಪುಟ್ಟಸ್ವಾಮಯ್ಯನವರೇ ಬಿಡಿಸಿದರು. "ನಾಗರಾಜ ನುಡಿಸುವುದನ್ನು ಆಲಿಸಿದ್ದೇನೆ. ಅವನೇ ಇವತ್ತು ನನ್ನೊಡನೆ ಕೂರಲಿ." ಇದೇ ನಾಗರಾಜನ ಪ್ರಥಮ ಸಾರ್ವಜನಿಕ ಬೈಠಕ್ಕು. ಅಲ್ಲಿ ಅವನು ಆ ಹಿರಿಯ ಕಲಾವಿದರನ್ನು ಎಚ್ಚರಿಕೆಯಿಂದಲೂ ಜಾಣ್ಮೆಯಿಂದಲೂ ಅನುಸರಿಸಿ ರಸಿಕರ ಮೆಚ್ಚುಗೆ ಗಳಿಸಿದ. ಮುಂದಿನ ದಿವಸಗಳಲ್ಲಿ ಮಹಾರಾಜಪುರಂ ಸಂತಾನಂ, ಕುರೂಡಿ ವೆಂಕಣ್ಣಾಚಾರ್, ಎಚ್. ಟಿ. ರಾಮಸ್ವಾಮಿ, ಬೊಂಬಾಯಿ ಸಹೋದರಿಯರು ಮೊದಲಾದ ಘನ ವಿದ್ವಾಂಸರೊಡನೆ ಸಾರ್ವಜನಿಕ ಕಛೇರಿಗಳಲ್ಲಿ ಪಿಟೀಲು ನುಡಿಸಿ ನಾಗರಾಜ ಮೆಚ್ಚಿನ ಅನುಭವವನ್ನೂ ಸ್ವಂತಿಕೆಯನ್ನೂ ಗಳಿಸಿಕೊಂಡ. ನಮ್ಮ ರಾಜ್ಯದ ವಿವಿಧ ಊರುಗಳಲ್ಲಿ ಇವನ ತನಿಕಛೇರಿಗಳು ನಡೆದಿವೆ. ಇಲ್ಲೆಲ್ಲ ತಂದೆ ಪಕ್ಕವಾದನಕಾರರಾಗಿ ಕುಳಿತಿರುವುದು ವಾಡಿಕೆ. ತುಂಬ ವಿನಯವಂತಿಕೆಯಿಂದ ಮಹದೇವಪ್ಪನವರು ಹೇಳುವ ಮಾತಿದು "ನನ್ನ ಬೆಳೆದ ಮನಸ್ಸಿನ ಭಾವನೆಗಳೆಲ್ಲವೂ ಬೆರಳುಗಳಿಗೆ ಇಳಿಯುವುದಿಲ್ಲ; ಇವನದೋ ನನಗೇ ಆಶ್ಚರ್ಯವಾಗುವಂತೆ ಬೆರಳುಗಳಲ್ಲಿ ಲಘುತ್ವ ಉಂಟು, ಭಾವನೆಗಳಲ್ಲಿ ಹೊಸತನ ಉಂಟು. ಹಾಗಾಗಿ ಇವನೇ ಪ್ರಧಾನ ವಾದನಕಾರನಾಗಬೇಕೆಂದು ನಾನು ಭಾವಿಸಿದ್ದೇನೆ."

ಬೆಂಗಳೂರಿನ ಗಾನಕಲಾ ಪರಿಷತ್ತಿನ ೧೯೭೨ರ ಸ್ಪರ್ಧೆಯಲ್ಲಿಯೂ ಗಾಯನ ಸಮಾಜದ ೧೯೭೩ ರ ಸ್ಪರ್ಧೆಯಲ್ಲಿಯೂ ನಾಗರಾಜ ಪಿಟೀಲು ತನಿವಾದನಕ್ಕಾಗಿ ಪ್ರಥಮ ಬಹುಮಾನ ಪಡೆದಿದ್ದಾನೆ. ಮದ್ರಾಸಿನ ಸಂಗೀತ ಅಕಾಡಮಿಯ ಡಿಸೆಂಬರ್ ೧೯೭೪ ರ ವಾರ್ಷಿಕಾಧಿವೇಶನಕ್ಕೆ ನಾಗರಾಜ ಆಹ್ವಾನಿತನಾಗಿ ಹೋಗಿದ್ದ. ಅಲ್ಲಿ ಅವನು ರಘು, ರವಿ ಎನ್ನುವ ಇಬ್ಬರು ತರುಣ ವೇಣುವಾದನಕಾರರಿಗೆ ಕಛೇರಿಯಲ್ಲಿ ಪಿಟೀಲುವಾದನ ಮಾಡಬೇಕಾಗಿತ್ತು. ಈ ಕೊಳಲುಗಾರರು ತಿಂಗಳುಗಟ್ಟಲೆ ಗಟ್ಟಿಮಾಡಿ ಅಂದಿನ ಕಛೇರಿಯಲ್ಲಿ ಪ್ರಧಾನ ರಾಗವಾಗಿ ರಸಿಕಪ್ರಿಯವೆನ್ನುವ ಅಪೂರ್ವ ಹಾಗೂ ಕಠಿಣರಾಗವನ್ನು ಬಿತ್ತರಿಸಿದರು. ಇಂಥ ಯಾವ ಅವಕಾಶವೂ ಇಲ್ಲದಿದ್ದ ನಾಗರಾಜ ಈ ರಾಗವನ್ನು ಸರಿಯಾಗಿ ಸೆರೆಹಿಡಿದು ಪಳಗಿಸಿ ನಡೆಸಿದ ರೀತಿಯನ್ನು ಆಲಿಸಿದ ಮದ್ರಾಸಿನ ಕಲಾವಿದರು ಇವನಿಗೊಂದು ವಿಶೇಷ ಪಾರಿತೋಷಕವನ್ನು ಪಕ್ಕವಾದನಕಾರರ ಪೈಕಿ ಶ್ರೇಷ್ಠನಾದವನು ಇವನೆಂಬ) ನೀಡಿ ಹರಸಿದ್ದಾರೆ. ಇದನ್ನು ಕಂಡವರೂ ಕೇಳಿದವರೂ ಅಂದಿದ್ದಾರೆ "ಅಂದು ನಮ್ಮ ಚೌಡಯ್ಯ ಹೇಗೋ ಇಂದು ನಮ್ಮ ನಾಗರಾಜ ಹಾಗೆ ಮದ್ರಾಸಿನಲ್ಲಿ ಮೈಸೂರಿನ ಪತಾಕೆಯನ್ನು ಎತ್ತಿಹಿಡಿದಿದ್ದಾನೆ" ಎಂದು.

ಕಾಣಲು ಇವನಿನ್ನೂ ಚಿಕ್ಕವನು, ನಿಜ. ಆದರೆ ಪ್ರತಿಭೆ ಕಲಾಮಂತಿಕೆಗಳಲ್ಲಿ ಬಲು ದೊಡ್ಡವನು ಇನ್ನೂ ದೊಡ್ಡವನಾಗಲಿರುವವನು ಎಂಬುದು ಕೂಡ ಅಷ್ಟೇ ನಿಜ. ✡

ಅರ್ನೆಸ್ಟ್ ಶಿರ್ಲೆ

# ರಾಜಕುಮಾರನ ಪುಟ್ಟರಾಜ್ಯ

ಆಸ್ಟ್ರೇಲಿಯಾದ ಲಿಯೋನಾರ್ಡ್ ಜಾರ್ಜ್ ಕ್ಯಾಸ್ಲೆ ರೇಲ್ವೆ ಫಾಯರ್‌ಮನ್ನನ ಮಗನಾಗಿದ್ದರೂ ತನ್ನನ್ನು ರಾಜಕುಮಾರ ಲಿಯೋನಾರ್ಡ್ ಎಂದು ಕರೆದುಕೊಳ್ಳುತ್ತಾನೆ. ಪಶ್ಚಿಮ ಆಸ್ಟ್ರೇಲಿಯಾದಲ್ಲಿಯ ಪುಟ್ಟ ರಾಜ್ಯದ ರಾಜಕುಮಾರನೀತ. ವೃತ್ತಿಯಿಂದ ಕೃಷಿಕನಾದರೂ ಕುತಂತ್ರಗಳಿಂದ ಪ್ರಖ್ಯಾತಿ ಪಡೆದು ತನಗೆ ತಾನೇ ರಾಜಕುಮಾರ ಪಟ್ಟ ಕಟ್ಟಿಕೊಂಡ. ಇದು ಸಂಭವಿಸಿದ್ದು ೧೯೬೪ರಲ್ಲಿ. ಪ್ರಿನ್ಸ್ ಲಿಯೋನಾರ್ಡನಿಗೆ ಈಗ ೪೨ ವರ್ಷ ವಯಸ್ಸು.

ಪಶ್ಚಿಮ ಆಸ್ಟ್ರೇಲಿಯಾದ ಒಂದು ಪ್ರಾಂತದಲ್ಲಿ ಲಿಯೋನಾರ್ಡ್ ೧೯೬೪ರಲ್ಲಿ ಪರ್ಥ್ ನಗರದ ಉತ್ತರಕ್ಕೆ ೩೨೦ ಮೈಲು ದೂರದಲ್ಲಿ ೧೮೦೦೦ ಎಕರೆ ಭೂಮಿಯನ್ನು ಕೊಂಡುಕೊಂಡ. ಕೃಷಿ ಇಲ್ಲದೆ ಪಾಳು ಭೂಮಿಯಂತಿತ್ತು ಆ ಪ್ರದೇಶ. ಲಿಯೋನಾರ್ಡ್ ತನ್ನ ಹೆಂಡತಿ ಶಿರ್ಲೆ ಹಾಗೂ ಮಕ್ಕಳಾದ ಆಮಾನ್, ವೇನ್, ರಿಚರ್ಡ್ ಇವರೊಂದಿಗೆ ಆ ವಿಶಾಲ ಭೂಮಿಯಲ್ಲಿ ಐದು ವರ್ಷ ಕಾಲ ಮೈಮುರಿದು ದುಡಿದ. ಫಲವಾಗಿ ಆ ಪಾಳು ಭೂಮಿಯಲ್ಲಿ ೧೫೦೦೦ ಬುಶೆಲ್ ಗೋದಿಯನ್ನು ಆತ ಪಡೆಯುವಂತಾಯಿತು.

ಸರಿ. ಪಶ್ಚಿಮ ಆಸ್ಟ್ರೇಲಿಯಾ ಸರಕಾರದ ಕಣ್ಣು ಈತನ ಮೇಲೆ ಬಿತ್ತು. ಆ ಸರಕಾರದ ಗೋದಿ ಪ್ರಮಾಣ ಸಮಿತಿಯು ಲಿಯೋನಾರ್ಡನ ಭೂಮಿಯ ಬೆಳೆಯ ಪರಿಶೀಲನೆ ನಡೆಸಿ, ಆತನ ಕುಟುಂಬಕ್ಕೆ ಪರಮಾವಧಿ ೧೬೪೨ ಬುಶೆಲ್ ಗೋದಿ ದೊರೆಯಬೇಕು, ಉಳಿದದ್ದೆಲ್ಲ ಸರಕಾರಕ್ಕೆ ಸೇರಬೇಕು ಎಂದು ತನ್ನ ತೀರ್ಮಾನ ಇತ್ತಿತ್ತು. ಗೋದಿ ಸಮಿತಿಯು ಆ ಭೂಮಿಯ ಕಳೆದ ಏಳು ವರ್ಷಗಳ ಬೆಳೆಯ ಸರಾಸರಿ ಲೆಕ್ಕಕ್ಕೆ ಹಿಡಿದು ಈ ತೀರ್ಮಾನಕ್ಕೆ ಬಂದಿತ್ತು. ಲಿಯೋನಾರ್ಡನ ಶ್ರಮವೆಲ್ಲ ಹೊಳೆಯಲ್ಲಿ ಹುಣಸೇಹಣ್ಣು ತೊಳೆದಂತಾಯಿತು. ತಾನು ಬೆಳೆದ ಬೆಳೆಯಲ್ಲಿ ಪ್ರತಿಶತ ೧೧ರಷ್ಟು ಮಾತ್ರ ಲಿಯೊನಾರ್ಡನಿಗೆ ಲಭ್ಯವಾಗುವಂತಿತ್ತು ಈ ತೀರ್ಮಾನದಿಂದ. ಆತನು ಸರಕಾರಕ್ಕೆ ಅಪೀಲು ಮಾಡಿಕೊಂಡರೂ ಏನೂ ಫಲ ದೊರೆಯಲಿಲ್ಲ.

ಗೋದಿ ಸಮಿತಿ ತೀರ್ಮಾನದ ವಿರುದ್ಧ ಅಪೀಲು ಮಾಡುವಂತಿಲ್ಲ ಎಂದು ಪಶ್ಚಿಮ ಆಸ್ಟ್ರೇಲಿಯಾ ಸರಕಾರವು ಒಂದು ಕಾಯದೆಯನ್ನೇ ರಚಿಸಲಿತ್ತು. ಆದರೂ ಲಿಯೋನಾರ್ಡ್ ತೆಪ್ಪಗೆ ಕುಳಿತುಕೊಳ್ಳಲಿಲ್ಲ. ಮಧ್ಯಯುಗೀನ ಕಾಯದೆಗಳ ಪ್ರಕಾರ ಪಶ್ಚಿಮ ಆಸ್ಟ್ರೇಲಿಯಾ ಸರಕಾರ ಮತ್ತು ಗವರ್ನರ್, ಆಸ್ಟ್ರೇಲಿಯಾ ಫೆಡರಲ್ ಸರಕಾರ ಮತ್ತು

ಗವರ್ನರ್ ಜನರಲ್ ಹಾಗೂ ರಾಣಿ ಎಲಜಾಬೆಥ್ ಇವರ ವಿರುದ್ಧ ಕಾಯದೆ ಕ್ರಮ ಕೈಕೊಳ್ಳಲು ಅನುವಾದ. ರಾಜ್ಯದ ಮುಖ್ಯ ಮಂತ್ರಿ, ಗವರ್ನರ ಹಾಗೂ ಗೋದಿ ಸಮಿತಿಗೆ ಲಿಯೊನಾರ್ಡನು ತನ್ನ ಪ್ರತಿಭಟನೆಗಳನ್ನು ಕಳಿಸಿದ. ಇವರಲ್ಲಿ ಲಿಯೋನಾರ್ಡನಿಗೆ ಉತ್ತರಿಸಿದವ ಗವರ್ನರ್ ಒಬ್ಬನೆ. 'ನಿನ್ನ ಗೋದಿ ಪ್ರಮಾಣದಲ್ಲಿ ಹೆಚ್ಚು ಕಡಿಮೆ ಮಾಡಲಿಕ್ಕಾಗದು' ಎಂದು ಗವರ್ನರನಿಂದ ಉತ್ತರ ಬಂತು.

ಲಿಯೋನಾರ್ಡ್ ಧೃತಿಗೆಡಲಿಲ್ಲ. ಯಾರೇ ಆಗಲಿ, ಸ್ವತಃ ರಾಣಿಯೇ ಆಗಲಿ ಅನ್ಯಾಯದಿಂದ ಏನನ್ನಾದರೂ ಕಿತ್ತುಕೊಂಡರೆ ಪರಿಹಾರಧನ ಕೊಡಬೇಕು ಎಂಬ ಕಾಯದೆಯನ್ನು ಆಶ್ರಯಿಸಿ ಲಿಯೊನಾರ್ಡನು ರಾಣಿಯ ಪ್ರತಿನಿಧಿಯಾದ ಗವರ್ನರನು ಈ ವ್ಯವಹಾರದಲ್ಲಿ ತೊಡಗಿರುವದರಿಂದ ಸ್ವಾತಂತ್ರ್ಯಪ್ರಾಪ್ತಿಗಾಗಿ ರಾಣಿಗೆ ಅಪೀಲು ಮಾಡಿಕೊಳ್ಳಲು ಅವಕಾಶ ಇದೆ ಎಂದು ವಾದಿಸಿದ.

ಇಲ್ಲಿಗೇ ನಿಲ್ಲದೆ ಲಿಯೋನಾರ್ಡನು ೧೯೭೦ ರಲ್ಲಿ ತನ್ನ ಹಟ್‌ನದಿ ಪ್ರಾಂತವು ಸ್ವತಂತ್ರ ರಾಜ್ಯವಾಗಿದೆ ಎಂಬರ್ಥದ ಸ್ವಾತಂತ್ರ್ಯ ಘೋಷಣ ಎಚ್ಚರಿಕೆಯನ್ನು ಪಶ್ಚಿಮ ಆಸ್ಟ್ರೇಲಿಯಾದ ಮುಖ್ಯ ಮಂತ್ರಿ, ಗವರ್ನರ್ ಪ್ರಧಾನಿ ಹಾಗೂ ಗವರ್ನರ್ ಜನರಲ್ ಸರ್ ಪಾಲ್ ಹ್ಯಾಸ್ಲಕ್ ಇವರೆಲ್ಲರಿಗೆ ಕಳಿಸಿಕೊಟ್ಟ.

ಲಿಯೋನಾರ್ಡ್ ತನ್ನ ೧೮೦೦೦ ಎಕರೆ ಭೂಪ್ರದೇಶಕ್ಕೆ 'ಹಟ್‌ನದಿ ರಾಜ್ಯ' ಎಂದು ಹೆಸರಿಸಿದ. ತಾನೇ ವರಿಷ್ಠನಾಗಿ ಆ ರಾಜ್ಯಕ್ಕೊಂದು 'ಆತ್ಮರಕ್ಷಣಾ ಸರಕಾರ'ವನ್ನು ರಚಿಸಿದ.

ಈ ವಿವಾದದಲ್ಲಿಯ ಅಂಶಗಳನ್ನೆಲ್ಲ ಕೂಲಂಕಷವಾಗಿ ಆಸ್ಟ್ರೇಲಿಯಾದ ಫೆಡರಲ್ ಸರಕಾರವು ಪರಾಮರ್ಶಿಸುವವರೆಗೆ ಲಿಯೊನಾರ್ಡ್ ಉಪದ್ವ್ಯಾಪಕ್ಕಿಳಿಯಬಾರದು ಎಂದು ಗವರ್ನರ್ ಜನರಲ್ ಪ್ರಾರಂಭದಲ್ಲಿ



ಎಚ್ಚರಿಕೆ ಇತ್ತರೂ ಕೊನೆಗೆ ಫೆಡರಲ್ ಸರಕಾರವು ಈ ವಿವಾದದಲ್ಲಿ ಹಸ್ತಕ್ಷೇಪ ಮಾಡಲಾರದು ಎಂದು ತಿಳಿಸಿಬಿಟ್ಟರು.

ಇದರಿಂದ ಲಿಯೊನಾರ್ಡ್ ಕ್ಯಾಸ್ಲೆ ಕುಟುಂಬದವರಿಗೆ ಉತ್ತೇಜನ ದೊರೆತಂತಾಯಿತು. ಆಗ ಹಟ್‌ನದಿ ರಾಜ್ಯದಲ್ಲಿ ಕಾಯಂ ಆಗಿ ವಾಸಿಸುತ್ತಿದ್ದವರೆಂದರೆ ಕ್ಯಾಸ್ಲೆ-ಕುಟುಂಬದವರಷ್ಟೇ. ಲಿಯೊನಾರ್ಡ್ ತನ್ನ ಮೂವರು ಮಕ್ಕಳನ್ನು ಸಹ ಆಡಳಿತಾಧಿಕಾರಿಗಳನ್ನಾಗಿ ನೇಮಿಸಿದ. ನಂತರ ತನ್ನ ರಾಜ್ಯಕ್ಕೆ ಮನ್ನಣೆ ಗಳಿಸಿಕೊಳ್ಳಲು ಬ್ರಿಟಿಶ್ ಕಾಯದೆಗಳ ಮೊರೆ ಹೊಕ್ಕ. "ನಮ್ಮದು ಆತ್ಮರಕ್ಷಣೆಯ ಸರಕಾರ. ನಮ್ಮ ಜನತೆಯ ಪರವಾಗಿ ವಾದಿಸಬಲ್ಲ ಸರಕಾರವೆಂದರೆ ಇದೊಂದೇ ಆಗಿದೆ. ಆದ್ದರಿಂದ ಈ ನಮ್ಮ ಸರಕಾರಕ್ಕೆ ಮನ್ನಣೆ ನೀಡಬೇಕು" ಎಂದು ಲಿಯೋನಾರ್ಡನ ವಾದ.

ಏತನ್ಮಧ್ಯೆ ಆಸ್ಟ್ರೇಲಿಯಾದ ಪ್ರಧಾನಿ ಬದಲಾದರು. ಜಾನ್ ಗಾರ್ಟನ್ ತೆರಳಿ ಬಿಲ್ಲಿ ಮ್ಯಾಕ್‌ಮೋಹನ್ ಆಸ್ಟ್ರೇಲಿಯಾದ ಪ್ರಧಾನಿಯಾದರು. ಪಶ್ಚಿಮ ಆಸ್ಟ್ರೇಲಿಯಾದಲ್ಲಿಯ ಈ ಪ್ರತ್ಯೇಕತಾವಾದಿಗಳ ಹಂಚಾಟವನ್ನು ತಾವು ಸಹಿಸಲಾರೆವು. ಅವರನ್ನು ನಿಯಂತ್ರಿಸುವ ಕಾರ್ಯದಲ್ಲಿ ಪಶ್ಚಿಮ ಆಸ್ಟ್ರೇಲಿಯಾ ಸರಕಾರಕ್ಕೆ ತಮ್ಮ ಸಂಪೂರ್ಣ ಬೆಂಬಲವಿದೆಂದೂ ಮ್ಯಾಕ್‌ಮೋಹನ್ ಸಾರಿದರು.

"ರಕ್ಷಣೆ ಬ್ರಿಟಿಶ್ ಕಾಯದೆಯ ಮೂಲತತ್ವ. ಅದನ್ನೇ ಅವಲಂಬಿಸಬೇಕು" ಎಂದು ಲಿಯೋನಾರ್ಡ್ ವಾದಿಸುತ್ತಿದ್ದಾಗ 'ರಾಜದ್ರೋಹ ಕಾಯದೆ'ಯಲ್ಲಿ ಆತನಿಗೆ ಅನುಕೂಲವಾದ ಕಲಮೊಂದು ದೊರಕಿತು.

ಅಧಿಕಾರ ಪ್ರಾಪ್ತಿಗಾಗಿ ಪ್ರಯತ್ನಿಸುತ್ತಿರುವ ರಾಜಕುಮಾರನಿಗೆ ನೆರವು ನೀಡುವದು ರಾಜದ್ರೋಹವಲ್ಲ' ಎಂದು ಆ ಕಾಯದೆಯಲ್ಲಿರುವ ಕಲಮಿಗೇ ಲಿಯೋನಾರ್ಡ ಗಟ್ಟಿಯಾಗಿ ಅಂಟಿಕೊಂಡು ಇನ್ನು ಮುಂದೆ ಹಟ್‌ನದಿ ರಾಜ್ಯದ ರಾಜ್ಯದ ರಾಜಕುಮಾರನು, ಬರಿ ಆಡಳಿತಗಾರನಲ್ಲ ಎಂದು ಘೋಷಿಸಿದನು.

ಹೀಗೆ ಅವನ ವಶದಲ್ಲಿಯ ಭೂಪ್ರದೇಶ ಒಂದು ರಾಜ್ಯವಾಗಿ, ಲಿಯೋನಾರ್ಡ್ ರಾಜಕುಮಾರನಾಗಿ ಅಂತಸ್ತನ್ನು ಘನತೆಯನ್ನೂ ಹೊಂದಿದನು. ಸ್ವತಂತ್ರ ರಾಜ್ಯ ಎಂದ ಮೇಲೆ ಅದಕ್ಕೊಂದು ಮಂತ್ರಿ ಮಂಡಳ, ಒಂದು ನೀತಿ, ಕಾಯದೆಗಳು ಎಲ್ಲ ಬೇಕಲ್ಲವೇ? ಲಿಯೋನಾರ್ಡ್ ತನ್ನ ಮೂವರು ಮಕ್ಕಳಲ್ಲಿ ವೇನೆ ವಿದೇಶ ಮಂತ್ರಿ, ರಿಚರ್ಡ್ ಅರ್ಥ ಮಂತ್ರಿ, ಆಯಾನ್ ಅಂಚೆ ಮಂತ್ರಿ ಹೀಗೆ ನೇಮಿಸಿದ. ರಾಷ್ಟ್ರಧ್ವಜ, ರಾಷ್ಟ್ರಗೀತೆಗಳನ್ನೂ ಲಿಯೋನಾರ್ಡ್ ಒದಗಿಸಿದ.

ಹೊರಗಿನ ಜಗತ್ತು ಲಿಯೋನಾರ್ಡನ ಈ ನಾಟಕವನ್ನು ನೋಡುತ್ತಲೇ ಇದ್ದಿತು. ಪತ್ರಿಕೆಗಳಂತೂ ವಿಶೇಷ ವಾರ್ತೆಗಾಗಿ ಕುಣಿದು ಕುಪ್ಪಳಿಸಿದವು. ಜನತೆಗೂ ಮೋಜು. ಹೀಗೆ ಪತ್ರಿಕೆಗಳೂ ಜನತೆಯೂ ಲಿಯೋನಾರ್ಡ್ ಹಾಗೂ ಆತನ ಸ್ವತಂತ್ರ ರಾಜ್ಯದ ಬಗೆಗೆ ಆಸಕ್ತಿ ಪ್ರದರ್ಶಿಸುತ್ತಿದ್ದುದನ್ನು ಕಂಡ ಪಶ್ಚಿಮ ಆಸ್ಟ್ರೇಲಿಯದ ಮುಖ್ಯಮಂತ್ರಿಗೆ ಕಸಿವಿಸಿಯಾಯಿತು. ಗೋದಿ ಸಮಿತಿಯೂ ಆತನಿಗೆ ಸಾಕಷ್ಟು ಹೆಚ್ಚಿಗೆ ಗೋದಿ ಮಂಜೂರು ಮಾಡಲು ಮುಂದಾಯಿತು. ಆದರೆ ಲಿಯೋನಾರ್ಡ್ ಒಪ್ಪಲಿಲ್ಲ. ಇಷ್ಟೇ ಅಲ್ಲ, ಪ್ರಪಂಚದಲ್ಲೆಲ್ಲ ಅನ್ನಾಭಾವದ ಪರಿಸ್ಥಿತಿ ಇದ್ದರೂ ಆತನು ತನ್ನ ರಾಜ್ಯದಲ್ಲಿ ಗೋದಿ ಬೆಳೆಯುವ ಪ್ರಮಾಣವನ್ನು ತಗ್ಗಿಸಿಬಿಟ್ಟ. ಇಷ್ಟೂ ಅಲ್ಲದೆ ಆತನ ರಾಜ್ಯವು ಗೋದಿಯನ್ನೇ ಅವಲಂಬಿಸಿ ಬದುಕಬೇಕಾದ ಪರಿಸ್ಥಿತಿ ಉಳಿದಿರಲಿಲ್ಲ. ಹಟ್‌ನದಿ ರಾಜ್ಯ ಈಗ ಪ್ರವಾಸಿಕರ ಆಕರ್ಷಣೆಯ ಕೇಂದ್ರವಾಗಿ ಬಿಟ್ಟಿತ್ತು.

ಕರಾವಳಿಯಿಂದ ಕೇವಲ ೧೪ ಮೈಲು ದೂರವಿರುವ ಈ ರಾಜ್ಯದ ಮುಖ್ಯ ಆಕರ್ಷಣೆಗಳೆಂದರೆ ಕೆಲ ಕಾಂಗರೂ ಪ್ರಾಣಿಗಳು ಹಾಗೂ ಚಿತ್ರವಿಚಿತ್ರವಾದ ವನಪುಷ್ಪಗಳು. ಆದರೂ ಪ್ರವಾಸಿಕರು ತಂಡ ತಂಡವಾಗಿ ಈ ಪುಟ್ಟ ರಾಜ್ಯಕ್ಕೆ ಭೇಟಿಕೊಡುತ್ತಲೇ

ಇದ್ದಾರೆ. ಇವರಿಂದ ಆ ಪುಟ್ಟ ರಾಜ್ಯಕ್ಕೆ ತಕ್ಕಷ್ಟು ಆದಾಯ ಇದೆ.

ಈ ಪುಟ್ಟ ರಾಜ್ಯದ ಅಂಚೇ ಮಂತ್ರಿ ಇಯಾನ್ ತಮ್ಮ ರಾಜ್ಯಕ್ಕಾಗಿ ಅಂಚೇ ಚೀಟಿಗಳನ್ನು ಮುದ್ರಿಸಿ ಕೊಡಬೇಕು ಎಂದು ಕ್ಯಾನಬೆರಾ ಸರಕಾರವನ್ನು ಕೇಳಿಕೊಂಡರೆ ಅರ್ಥಮಂತ್ರಿ ರಿಚರ್ಡ್ ತಮಗೆ ನೋಟುಗಳನ್ನು ಮುದ್ರಿಸಿ ಕೊಡಬೇಕೆಂದು ಆಸ್ಟ್ರೇಲಿಯಾ ಸರಕಾರವನ್ನೇ ಕೇಳಿಕೊಂಡರು. ಎರಡನ್ನೂ ಸರಕಾರ ಒಪ್ಪಲಿಲ್ಲ. ಲಿಯೋನಾರ್ಡ್ ನ್ಯೂರಿಝೀಲ ೦ಡಿನಲ್ಲಿ ತನ್ನ ರಾಜ್ಯಕ್ಕಾಗಿ ಅಂಚೇಚೀಟಿ ಹಾಗೂ ನೋಟುಗಳನ್ನು ಮುದ್ರಿಸಿಕೊಂಡ.

ವಿದೇಶಮಂತ್ರಿ ವೇನೇ ಕೂಡ ಆಸ್ಟ್ರೇಲಿಯದ ಸರಕಾರಕ್ಕೆ ಪತ್ರ ಬರೆದು ಅದು ತನ್ನ ವಿದೇಶ ನೀತಿಯನ್ನು ಲಿಯೋನಾರ್ಡ್ ಸರಕಾರದ ವಿದೇಶ ನೀತಿಗೆ ಹೊಂದಾಣಿಕೆ ಮಾಡಿಕೊಳ್ಳಬೇಕು ಎಂದು ಕೇಳಿಕೊಂಡನು. ಇದೂ ತಿರಸ್ಕೃತವಾಯ್ತು.

ಈ ತಂತ್ರಗಳೆಲ್ಲ ಜಗತ್ತಿಗೆ ಬಿಸಿ ಬಿಸಿ ಸುದ್ದಿಗಳಾದವು. ಪ್ರವಾಸಿಗರ ಸಂಖ್ಯೆ ಹೆಚ್ಚಿತು. ಈ ರಾಜ್ಯ ಸ್ವತಂತ್ರವಾದ ತರುಣದಲ್ಲಿ ವರ್ಷದಲ್ಲಿ ೩೦೦ ಪ್ರವಾಸಿಗಳು ಭೆಟ್ಟಿಕೊಟ್ಟಿದ್ದರೆ ೧೯೭೩ ರಲ್ಲಿ ಇವರ ಸಂಖ್ಯೆ ೭೦೦ಕ್ಕೇರಿತು. ಕಳೆದ ವರ್ಷದಲ್ಲಂತೂ ೪೫೦೦೦ ಪ್ರವಾಸಿಗಳು ಈ ರಾಜ್ಯಕ್ಕೆ ಸಂದರ್ಶನ ನೀಡಿದ್ದರಂತೆ.

ಈಗೀಗ ಬಿಡುವಿನ ದಿನಗಳಲ್ಲಂತೂ ಪ್ರತಿನಿತ್ಯ ೧೫೦೦ ಪ್ರವಾಸಿಕರು ಈ ಪುಟ್ಟ ರಾಜ್ಯಕ್ಕೆ ಭೆಟ್ಟಿ ನೀಡುತ್ತಿದ್ದಾರೆ. ಇಲ್ಲಿಯ ರಾಜಕುಮಾರನನ್ನು ಆತನ ಸ್ವಯಂಮಾರ್ಜಿತ ರಾಜ್ಯವನ್ನು ನೋಡುವದಕ್ಕಾಗಿ ಕುತೂಹಲ



ದಿಂದ ಅವರು ಬರುತ್ತಾರೆ. ಕೇವಲ ಈ ಪುಟ್ಟ ರಾಜ್ಯದಲ್ಲಷ್ಟೇ ಚಲಾವಣೆಯಲ್ಲಿರುವ ನೋಟುಗಳನ್ನೂ ಅಂಚೆ ಚೀಟಿಗಳನ್ನೂ ಈ ಪ್ರವಾಸಿಗರು ಆಸ್ಟ್ರೇಲಿಯಾದ ಹಣ ಕೊಟ್ಟು ಕೊಳ್ಳುತ್ತಾರೆ, ಕೇವಲ ಕುತೂಹಲಕ್ಕಾಗಿ. ಚಹ, ಕಾಫಿ, ಕೇಕ್, ಮಿಠಾಯಿ, ಚರ್ಮದ ವಸ್ತುಗಳು ಮುಂತಾದವನ್ನೂ ಪ್ರವಾಸಿಗರು ಇಲ್ಲಿ ಖರೀದಿಸುತ್ತಾರೆ.

ಈ ಪುಟ್ಟ ರಾಜ್ಯದ ಜನಸಂಖ್ಯೆ ಕೇವಲ ೩೦ ರಷ್ಟು. ಇವರಲ್ಲಿ ಗುಡಿ ಕೈಗಾರಿಕೆ ವಸ್ತುಗಳನ್ನು ತಯಾರಿಸಿ ಪ್ರವಾಸಿಗರಿಗೆ ಮಾರಾಟ ಮಾಡುವವರೂ ಇದ್ದಾರೆ.

ಲಿಯೋನಾರ್ಡ್ ರಾಜಠೀವಿಯಿಂದ ಆಡಳಿತ ನಡೆಸುತ್ತಾರೆ. ರಾಜ್ಯದ ಆರ್ಥಿಕ ಪರಿಸ್ಥಿತಿಯನ್ನು ಆತ ಇಂದಿಗೂ ಬಹಿರಂಗಗೊಳಿಸುವದಿಲ್ಲ. ಸಾರ್ವಜನಿಕ ಅವಗಾಹನೆಗಾಗಿ ಮುಂಗಡ ಪತ್ರವನ್ನು ಮಂಡಿಸುವದಿಲ್ಲ. ಈ ಪುಟ್ಟ ರಾಜ್ಯದ ವಾರ್ಷಿಕ ಆದಾಯ ೨॥ ಲಕ್ಷ ಅಮೇರಿಕನ್ ಡಾಲರುಗಳು ಎಂದು ತಜ್ಞರು ಹೇಳಿದರೆ, 'ಹೌದು ಅಷ್ಟು ಇರಬಹುದು' ಎನ್ನುತ್ತಾನೆ ಈ ರಾಜಕುಮಾರ ಲಿಯೋನಾರ್ಡ್.

ಈತ "ಪ್ರಿನ್ಸ್ ಲಿಯೋನಾರ್ಡ್" ಎಂದು ಅಂಕಿತ ಹಾಕುವನಾದರೂ "ಯುವರ್ ಹಾಯನೆಸ್" ಎಂದೂ ಕರೆಯಿಸಿಕೊಳ್ಳುವ ಚಟವೂ ಈತನಿಗಿದೆ. ಆದರೆ ಕುಟುಂಬೀಯರಿಗೆ ಆಪ್ತಮಿತ್ರರಿಗೆ ಮಾತ್ರ ಈತ 'ಲೆನ್' ಮಾತ್ರ. ನಿರಹಂಕಾರಿ, ನಿಗರ್ವಿ.

ನಿರಾಡಂಬರ ವೇಷಭೂಷಣದಲ್ಲೇ ಎಲ್ಲ ಪ್ರವಾಸಿಕರನ್ನೂ ಸ್ವಾಗತಿಸಲು ಈತ ತತ್ಪರನಿರುತ್ತಾನೆ. ಔಪಚಾರಿಕ ಸಮಾರಂಭಗಳೇನಾದರೂ ಒದಗಿದಲ್ಲ ರಾಜಕುಮಾರನ ಆಡಂಬರದ ವೇಷಧರಿಸುತ್ತಾನೆ. ರಾಜ್ಯಕ್ಕೆ ಬರುವ ಪ್ರವಾಸಿಕರಿಗೆಲ್ಲ ರಾಜ್ಯದ ಇತಿಹಾಸವನ್ನು ಬಣ್ಣಿಸುತ್ತಾನೆ. ರಾಜಧಾನಿ ನೈನ್ ಹಾಗೂ ಅದರಲ್ಲಿಯ ಕಟ್ಟಡಗಳ ಬಗ್ಗೆ ಸಂಶೋಧನೆ ನಡೆಸಲು ಕೇಳಿಕೊಳ್ಳುತ್ತಾನೆ. 'ಆಶೆಯ ಮೂಲ ಕನಸಿನ ಫಲ ನನ್ನೀ ತಾಯ್ನಾಡು' ಎಂದು (This Land of Hope, This Land of dreams, This Land I call my own) ತನ್ನ ರಾಷ್ಟ್ರಗೀತೆಯನ್ನು ಅವರಿಗೆ ಹಾಡಿ ತೋರಿಸುತ್ತಾನೆ,

ಈ ರಾಜ್ಯಕ್ಕೆ ಸಂದರ್ಶಕರ ದಟ್ಟಣೆ ಹೆಚ್ಚುತ್ತಿರುವದರಿಂದ ಅವರಿಗಾಗಿ ೨೫ ಕೋಟಿ ಡಾಲರುಗಳ ವೆಚ್ಚದಿಂದ ಅಂತಾರಾಷ್ಟ್ರೀಯ ಮಟ್ಟದ ಹಾಟೆಲುಗಳು, ಆಕಾಶವಾಣಿ ಕೇಂದ್ರ ಮುಂತಾದವನ್ನು ಸ್ಥಾಪಿಸುವ ಯೋಜನೆ ಇಟ್ಟುಕೊಂಡಿದ್ದಾನೆ ರಾಜಕುಮಾರ ಲಿಯೋನಾರ್ಡ್.

"ಇನ್ನು ಐವತ್ತು ವರ್ಷಗಳಲ್ಲಿ ಈ ರಾಜ್ಯದ ಸ್ವರೂಪವನ್ನೇ ಬದಲಿಸಿಬಿಡುತ್ತೇನೆ. ಅನೇಕ ಅಂತಸ್ತುಗಳ ಹೊಟೆಲ್ಲುಗಳು, ಆಕಾಶವಾಣಿ, ವಿಮಾನ ನಿಲ್ದಾಣ, ಆಸ್ಪತ್ರೆಗಳು, ವಿಹಾರಕ್ಕಾಗಿ ಒಂದು ಸರೋವರ ಎಲ್ಲವನ್ನೂ ಒದಗಿಸುತ್ತೇನೆ," ಎನ್ನುತ್ತಾನೆ ರಾಜಕುಮಾರ.

ರಾಜ್ಯದ ಗಡಿಯಲ್ಲಿ ಗಡಿಸುಂಕದ ಕಾವಲುಗಾರನನ್ನು ಈಗ ಇಟ್ಟಿದ್ದಾನೆ. ಈ ರಾಜ್ಯಕ್ಕೆ ಪ್ರವೇಶಪಡೆಯಬಯಸುವವರು ಪ್ರವೇಶ



ಅವನು ನಿಜವಾಗಿಯೂ ಫಾಸ್ಟ್ ಬೌಲರ್ರೇ??

ಪತ್ರಕ್ಕಾಗಿ ೫೩ ಸೆಂಟು ಹಣತೆತ್ತು ಒಳಬರಬೇಕು. ರಾಜ್ಯದಲ್ಲಿ ಅಂಚೇಸೇವೆ ಪ್ರಾರಂಭವಾದರೆ ರಾಜ್ಯದ ಆದಾಯ ಹೆಚ್ಚುವದೆಂದೂ ಈತನ ನಿರೀಕ್ಷೆ.

ಪಶ್ಚಿಮ ಆಸ್ಟ್ರೇಲಿಯಾ ಸರಕಾರದ ಅಧಿಕಾರಿಗಳು ಈ ರಾಜ್ಯಕ್ಕೆ ಪ್ರವೇಶಿಸಿ ರಾಜಕುಮಾರನ ಈ ಎಲ್ಲ ಅಕ್ರಮಗಳಿಗಾಗಿ ದಂಡ ವಿಧಿಸಿದಾಗಲೆಲ್ಲ ಈತ, ಆ ಘಟನೆಗಳನ್ನು ಅಂತಾರಾಷ್ಟ್ರೀಯ ಸಮಸ್ಯೆಗಳಾಗಿ ಪರಿವರ್ತಿಸದೆ, ದಂಡದ ಹಣವನ್ನು ತೆತ್ತು ಬಿಡುತ್ತಿದ್ದಾನೆ.

ಆಸ್ಟ್ರೇಲಿಯಾದಲ್ಲಿ ಮತದಾನ ಮಾಡುವದು ಕಡ್ಡಾಯವಿದೆ. ಈತ ತನ್ನ ಮತ ಚಲಾಯಿಸಲಿಲ್ಲ. 'ತಾನು ಆಸ್ಟ್ರೇಲಿಯಾದ ನಾಗರಿಕನೇ ಅಲ್ಲ' ಎಂಬ ತನ್ನ ವಾದವನ್ನು ಅಧಿಕಾರಿಗಳು ನಿರಾಕರಿಸಿದ್ದರಿಂದ ತಾನು ದಂಡ ಕೊಡಬೇಕಾಯಿತು ಎನ್ನುತ್ತಾನೆ ಈತ ಒಮ್ಮೆ ಲೈಸನ್ಸ್ ಇಲ್ಲದೆ ಈತ ಮದ್ಯ ಮಾರಾಟ ಮಾಡಿದಾಗ ಆಸ್ಟ್ರೇಲಿಯಾದ ಅಧಿಕಾರಿಗಳು ದಂಡ ವಿಧಿಸಿದರು. ಇದನ್ನು ಲಿಯೋನಾರ್ಡ್ ಪರಕೀಯರ ಆಕ್ರಮಣ ಎಂದು ಹೆಸರಿಸಿದ.

ಹಟ್‌ನದೀ ರಾಜ್ಯದ ಅಂಚೆಯನ್ನು ಸಾಗಿಸಲು ಆಸ್ಟ್ರೇಲಿಯಾದ ಅಂಚೆ ಶಾಖೆ ಸಿದ್ಧವಿಲ್ಲ. ಅಂಥ ಪ್ರದೇಶವೇ ಇಲ್ಲ ಎಂದು ಅವರ ವಾದ. ಆದರೆ ಲಿಯೋನಾರ್ಡನ ಅಂಚೆಯನ್ನೆಲ್ಲ ಪಶ್ಚಿಮ ಆಸ್ಟ್ರೇಲಿಯಾದ ರಾಜಧಾನಿ ಪರ್ಥದಲ್ಲಿರುವ ಆತನ ಮನೆಗೆ ತಲುಪಿಸಲು ಮಾತ್ರ ತಪ್ಪುವದಿಲ್ಲ.

ಇಂಥ ಘರ್ಷಣೆಗಳನ್ನೆಲ್ಲ ರಾಜಕುಮಾರ ಲಿಯೋನಾರ್ಡ್ ಸ್ವಾಗತಿಸುತ್ತಾನೆ. ಇದರಿಂದ ತನ್ನ ಪ್ರಸಿದ್ಧಿ ಇನ್ನಷ್ಟು ಹೆಚ್ಚುತ್ತದೆ ಎಂದೇ ಅವನ ಅಭಿಪ್ರಾಯ.

ಜನರಿಗೆ ಬಿರುದು ಬಾವಲಿಗಳನ್ನು ನೀಡುವ ಅಟ್ಟಹಾಸವೂ ಇವನಿಗಿದೆ. ಪಶ್ಚಿಮ ಆಸ್ಟ್ರೇಲಿಯಾದ ಖ್ಯಾತ ಚಿತ್ರಕಾರರಾದ ಫ್ರಾಂಕ್ ಬರಿಲ್ ಪಾಶ್ ಮತ್ತು ರಾಬರ್ಟ್ ಡೇವಿಡ್ ಪೋಪ್ ಅವರು ಚಿತ್ರಿಸಿದ ಚಿತ್ರಗಳು ನೈನವ ಚರ್ಚಿನಲ್ಲಿವೆ. ರಾಜಕುಮಾರ ಲಿಯೋನಾರ್ಡ್ ಇವರಿಗೆ ಅನುಕ್ರಮವಾಗಿ ಅರ್ಲ್ ಆಫ್ ನೈನ್ ಮತ್ತು ಅರ್ಲ್ ಆಫ್ ಫಿನಿಕ್ಸ್ ಎಂದು ಬಿರುದುಗಳನ್ನಿತ್ತು ಗೌರವಿಸಿದ್ದಾರೆ. ಈ ಪುಟ್ಟ ರಾಜ್ಯದ ಅಂಚೇಶಾಖೆಯನ್ನು ರೂಪಿಸಿಕೊಟ್ಟ ಅಮೇರಿಕದ ಜಾನ್ ಸ್ಟೀವನ್ ವ್ಹೇಟ್ಲೆಗೆ ಈತನಿಂದ ಬ್ಯಾರನ್ ಆಫ್ ಟಕ್ಸನ್ ಎಂಬ ಪದವಿ ಪ್ರದಾನವಾಗಿದೆ.

ಒಂದು ವರ್ಷದಲ್ಲಿಯೆ ಹನ್ನೆರಡು ಜನರಿಗೆ ಮನ್ನೆಯರ ಸ್ಥಾನ ಲಭಿಸಿದೆ, ಇಪ್ಪೇಷ್ಟರೆಲ್ಲ ಮನ್ನೆಯರಾಗುತ್ತಿದ್ದಾರೆ. ಆಸ್ಟ್ರೇಲಿಯಾ ಸರಕಾರವು ರಾಜಕೀಯ ಪಕ್ಷಕ್ಕೆ ಕೊಡುಗೆಯಿಂದ ಹಣ ನೀಡಿದವರಿಗೆ ಬಿರುದನ್ನು ದೊರಕಿಸಲು ಶಿಫಾರಸು ಮಾಡುವದಾದರೆ ನಮ್ಮ ರಾಜ್ಯದಲ್ಲಿ ಅರ್ಧ ಮೈಲು ಬೇಲಿ ಹಾಕಲು ನೆರವಾದವರಿಗೆ ಪ್ರಶಸ್ತಿ ನೀಡಿದರೇನು ತಪ್ಪು? ಎನ್ನುತ್ತಾನೆ ಲಿಯೋನಾರ್ಡ್.

"ಕಲ್ಪನಾಲೋಕದ ರಾಜಕುಮಾರನೆಂದು ಕರೆದುಕೊಳ್ಳಲು ಲಿಯೋನಾರ್ಡ್‌ಗೆ ಸಂತೋಷವೆನಿಸುತ್ತಿದ್ದರೆ ನಮ್ಮ ಆಕ್ಷೇಪವಿಲ್ಲ" ಎಂದು ಪಶ್ಚಿಮ ಆಸ್ಟ್ರೇಲಿಯಾ ಸರಕಾರದ ಮುಖ್ಯಮಂತ್ರಿ ಹೇಳಿದ್ದರೂ ಹಟ್‌ನದೀ ರಾಜ್ಯಕ್ಕೆ ಕಾಯದೆಬದ್ಧ ಅಸ್ತಿತ್ವ ಇಲ್ಲ ಎಂದು ಆಸ್ಟ್ರೇಲಿಯಾ ಫೆಡರಲ್ ಸರಕಾರ ಘೋಷಿಸಿದೆ.

ತನ್ನ ರಾಜ್ಯಕ್ಕೆ ಅಸ್ತಿತ್ವ ಇದೆ ಎಂದು ಲಿಯೋನಾರ್ಡನ ವಾದ. ಅಂತೇ ಆತನು ವಿಶ್ವರಾಷ್ಟ್ರ ಸಂಸ್ಥೆಯಲ್ಲಿ ತನ್ನ ರಾಜ್ಯಕ್ಕೆ ಸದಸ್ಯತ್ವ ದೊರಕಿಸಲು ಪ್ರಯತ್ನಿಸುತ್ತಿದ್ದಾನೆ. ಈತನ ಈ ಪ್ರಯತ್ನದಲ್ಲಿ ಆಸ್ಟ್ರೇಲಿಯಾ ಸರಕಾರ ಸಹಕರಿಸುತ್ತಿಲ್ಲ. ಆದರೂ ರಾಜಕುಮಾರ ಲಿಯೋನಾರ್ಡ್ ತಾನು ನಿರಾಶನಾಗಿಲ್ಲ ಎನ್ನುತ್ತಾನೆ, ಆತಾ ಬಲವತ್ ರಾಜನ್ ಅಲ್ಲವೆ?

✡

'ಏಶಿಯಾ ಮ್ಯಾಗಝಿನ್'ನಿಂದ

ಪ್ರಾಚೀನ ಕಾವ್ಯಸುಧೆ

# ದಶಾವತಾರದ ವರ್ಣನೆ

–ದಲಕೆ

ಭಾಗವತತತ್ವವನ್ನೂ ಹರಿಸರ್ವೋತ್ತಮತ್ವವನ್ನೂ ಪ್ರಚಾರ ಮಾಡುವದಕ್ಕಾಗಿ ನವವಿಧಭಕ್ತಿಯಿಂದ ನಾಲ್ಕುಲಕ್ಷಕ್ಕೂ ಮಿಕ್ಕಿ ಪದಪದ್ಯಗಳನ್ನು ಉಗಾಭೋಗ ಸುಳಾದಿಗಳನ್ನು ರಚಿಸಿದ ಪುರಂದರದಾಸರು ಹರಿಯ ಹತ್ತುಅವತಾರಗಳನ್ನು ಬಣ್ಣಿಸುವ ಹಾಡುಗಳನ್ನೂ ಸ್ವಾರಸ್ಯಪೂರ್ಣವಾಗಿ ರಚಿಸಿದ್ದಾರೆ. ಬಗೆದುಂಬಿ ಭಾವಪೂರ್ಣವಾಗಿ ಹಾಡಿರುವ ಈ ದಶಾವತಾರದ ಹಾಡುಗಳೇ ನೂರಕ್ಕೂ ಮಿಕ್ಕಿರಬಹುದಾಗಿವೆ. ಈ ಹಾಡುಗಳಲ್ಲಿ ಕೆಲವನ್ನು ಆಯ್ದು ಇಲ್ಲಿ ಕೊಡಲಾಗಿದೆ.

## ನಾರಾಯಣ ಗೋವಿಂದ-ಹರಿಹರಿ

ನಾರಾಯಣ ಗೋವಿಂದ | ಪ |
ನಾರಾಯಣ ಗೋವಿಂದ ಮುಕುಂದ
ಸುರವರ ಪರಮಾನಂದ | ಅ. ಪ. |

ಮೊದಲು ಮತ್ಸ್ಯನಾಗಿ ಉದಿಸಿ
ಸೋಮಕನನು
ಕಡೆದು ವೇದಗಳ ತಂದ ||೧||

ಮಂದರಗಿರಿಯಲಿ ಸಿಂಧು ಮಥಿಸಿ ಸುಧೆ
ತಂದು ಭಕ್ತರಿಗುಣಿಸಿದ ||೨||

ಭೂಮಿಯ ಕದ್ದ ಖಳನನು ಮರ್ದಿಸಿ
ಆ ಮಹಾಸತಿಯಳ ತಂದ ||೩||

ದುರುಳ ಹಿರಣ್ಯನ ಕರುಳು ಬಗೆದು ತನ್ನ
ಕೊರಳೊಳಗಿಟ್ಟಾನಂದದಿಂದ ||೪||

ಪುಟ್ಟನಾಗಿ ದಾನ ಕೊಟ್ಟ ಬಲಿಯ ತಲೆ
ಮೆಟ್ಟಿ ತುಳಿದ ಬಗೆಯಿಂದ ||೫||

ಧಾತ್ರಿಯೊಳಗೆ ಮುನಿಪುತ್ರನಾಗಿ ಬಂದು
ಕ್ಷತ್ರಿಯರೆಲ್ಲರ ಕೊಂದ ||೬||

ಮಡದಿಗಾಗಿ ತಾ ಕಡಲನೆ ಕಟ್ಟಿ
ಹಿಡಿದು ರಾವಣನ ಕೊಂದ ||೭||

ಗೋಕುಲದೊಳು ಹುಟ್ಟಿ ಆಕಳ ಕಾಯ್ದು
ಶ್ರೀ ಕೃಷ್ಣನು ತಾ ಬಂದ ||೮||

ಛಲದಲಿ ತ್ರಿಪುರರ ಸತಿಯರ ವ್ರತದ
ಫಲವನಳಿದ ಬಗೆಯಿಂದ ||೯||

ಧರೆಯೊಳು ಪರಮ ನೀಚರ ಸವರಲು ಕು
ದುರೆಯನೇರಿದ ಕಲಿಚಂದ ||೧೦||

ದೋಷದೂರ ಶ್ರೀ ಪುರಂದರ ವಿಠಲ
ಪೋಷಿಪ ಭಕ್ತರ ವೃಂದ ||೧೧||

## ನೀನೇ ಅಚ್ಯುತ

ನೀನೇ ಅಚ್ಯುತ ನೀನೇ ಮಾಧವ
ಹರಿಗೋವಿಂದನು ನೀನೆ
ನೀನೇ ಗತಿಯೆಂದು ನಂಬಿದ ದಾಸಗೆ
ಅಭಯ ಕೊಟ್ಟಾತನು ನೀನೇ | ಪ |

ಜಲದೊಳು ಪೊಕ್ಕು ಮೈನಡುಗಿಸಿ ಭಾರವ
ಕಳೆದಾತನು ನೀನೆ |
ಇಳೆಯ ಕದ್ದಸುರನ ದಾಡೆಯಿಂದ
ಸೀಳಿ ಕಂಬ
ದೊಳುದ್ಭವಿಸಿದೆ ನೀನೆ ||೧||

ಬಲಿಯ ಪಾತಾಳಕೆ ತುಳಿದೆಯೊ ನೀನು ಕೊ
ಡಲಿಯ ಹಿಡಿದವನು ನೀನೆ |
ಜಲಧಿಯ ದಾಟಿ ಅಸುರನ ಕಡಿದು
ಲಲನೆಯ ತಂದಾತ ನೀನೆ ||೨||

ಗೊಲ್ಲರ ಮನೆಯಲಿ ಬೆಣ್ಣೆಯ ಕದ್ದು
ಕಳ್ಳನೆನಿಸಿದವ ನೀನೆ ।
ಬಲ್ಲಿದ ತ್ರಿಪುರದಿ ಬತ್ತಲೆ ನಿಂತು
ಬಳ್ಳಿಹಯವ ಹತ್ತಿದೆ ನೀನೆ ॥ ೩ ॥

ಪಾಂಡವರಿಗತಿ ಪ್ರಿಯನೆಂದೆನಿಸಿದ
ಪುಂಡರೀಕಾಕ್ಷನು ನೀನೆ ।
ಪುಂಡಲೀಕ ಪುರುಷೋತ್ತಮಮೂರುತಿ
ಪುರಂದರ ವಿಠಲನು ನೀನೆ ॥ ೪ ॥

## ಏನ ಬೇಡಲಿ

ಏನ ಬೇಡಲಿ ಸ್ವಾಮಿ– ನಿನ್ನ । ಪ ।
ಏನ ಬೇಡಲಿ ನಿನ್ನ ಚಂಚಲ ಕಠಿಣನ
ಮೌನದಿಂದಲಿ ಮೋರೆ ಓರೆ
ಮಾಡುವನ । ಅ ಪ ।

ಕರುಳ ಹರಕನ ಬೇಡಲೇನು
ಕಿರಿದು ತಿಂಬುವನ
ಕೊರಳಗೊಯ್ಕ–ಅರಣ್ಯ ತಿರುಗುವವನ
ತಿರುಗಿ ಬೆಣ್ಣೆ ಕದ್ದು ತಿಂಬುವನ । ೧ ।

ಮಾಸ ಶೂನ್ಯನ ಕೈಯ ಕತ್ತಿ
ಬೀಸಿ ಸವರುವನ
ಕಾಸು ವೀಸವನೆಲ್ಲ ಮೀಸಲು ಮಾಡಿಟ್ಟು
ಕೇಸಕ್ಕಿ ಉಂಡುಂಡು
ಮಾಸಮಾಡುವನ ॥ ೨ ॥

ಬೇಡಿದರೆ ನೀಡಿ–ಅವರ ಮೋರೆ
ಬಿಡೆಯುವನನ್ನು ನೋಡಿ
ಬಡವರ ಕರೆತಂದು ಅಡಿಗ ಸೇರಿಸಿಕೊಂಡ
ಒಡೆಯ ಶ್ರೀ ಪುರಂದರ ವಿಠ್ಠಲ
ದೊರೆಯೆ ॥ ೩ ॥

## ಪಾರ್ವತಿ–ರುಕ್ಮಿಣಿ ಸಂವಾದ

ಜಲದ ನೀಲಗಾತ್ರ ಏತರ ಚಲುವ ರುಕ್ಮಿಣಿ
ಬಿಳಿಯ ಜಡೆಯ ಮೈಯ ಜೋಗಿಗೊಲಿದ
ಪಾರ್ವತಿ

ಉದಕದೊಳಗೆ ವಾಸವೇಕೆ ಸದನವಿಲ್ಲವೆ?
ಸುದತಿ ಸುಡುವ ಕಾಡಿಗಿಂತ ಲೇಸು
ಅಲ್ಲವೆ? ॥ ೧

ಶೃಂಗವ ಬೆನ್ನಿಲೆತ್ತಿದವನ ಸೊಗಸು
ನೋಡಿದೆ
ಗಂಗೆಯ ಶಿರದಿ ಪೊತ್ತವನ ಗರುವ
ಕೇಳಿದೆ ॥ ೨ ॥

ವಸುಧೆ ನೆಗಹಿ ಬೇರ ಮೆಲುವ ಅಶನವಿಲ್ಲವೆ?
ಹಸಿದು ವಿಷವ ಕುಡಿದ ಎಂತು
ಸ್ವಾದವಲ್ಲವೆ? ॥ ೩ ॥

ಕರುಳ ಕೊರಳ ಸರವು ಏಕೆ ಸರವು
ದೊರಕದೆ?
ಕೊರಳ ರುಂಡ ಮಾಲೆ ಏಕೆ
ಕಾಂಚನವಿಲ್ಲವೆ? ॥ ೪ ॥

ಧರಣಿ ಮೂರಡಿ ಬೇಡಲಿಕ್ಕೆ ದೊರೆಯು
ಅಲ್ಲವೆ?
ನರಕಪಾಲ ಪಿಡಿವ ಜಗದ
ಕರ್ತೃವಲ್ಲವೆ? ॥ ೫ ॥

ಮಾತೆ ಶಿರವ ಅಳಿದವನ ಮಾತು ಕೇಳಿದೆಯಾ
ಶಾಶನಾಣೆ ಸುತನ ಕೊಂದ ನೀತಿ
ನೋಡಿದೆಯಾ ॥ ೬ ॥

ಕೋತಿಗಳನು ಕೂಡಲಿಕ್ಕೆ ಜಾತಿ ತನ್ನದೆ?
ಭೂತಗಣಗಳಾಳುವುದಕೆ ಭೀತಿ
ಇಲ್ಲವೆ ॥ ೭ ॥

ಹತ್ತಿರಿದ್ದ ವಾಜಿ ಬಿಟ್ಟು ಹದ್ದನೇರ್ವರೆ
ಎತ್ತಿನ ಬೆನ್ನನೇರಿದವರು
ಉತ್ತಮರಾಹರೆ ॥ ೮ ॥

ಸುತ್ತಲಿದ್ದ ಬಾಲೆಯರೊಳು
ಬತ್ತಲಿರುವರೆ?
ಮತ್ತನಾಗಿ ಮರೆದ ಋಷಿಯ ಶಾಪ
ಹತ್ತಲಿಲ್ಲವೆ? ॥ ೯ ॥

ಹರಿಹರರೊಳು ಭೇದವೇನು ಹೇಳೆ ರುಕ್ಮಿಣಿ
ಪುರಂದರ ವಿಠಲ ತಾನೆ ಬಲ್ಲ ಕೇಳೆ
ಪಾರ್ವತಿ ॥ ೧೦ ॥

# ನಿಸರ್ಗದ ಮಡಿಲಲ್ಲಿ

ಶ್ರೀಮತಿ ಪ್ರಿಯದರ್ಶಿನಿ

ಪ್ರಕೃತಿ ರಮಣಿಯ ಭಯಾನಕ ಸೌಂದರ್ಯವನ್ನು ಸವಿಯಬೇಕಾದರೆ ಕೇರಳ ನಾಡಿಗೇ ಹೋಗಬೇಕು.

ಕೇರಳದ ಉತ್ತರದ ಕೊನೆಯಾದ ಮಾನಂದವಾಡಿಗೆ ೧೫ ಮೈಲಿ ದೂರದಲ್ಲಿ ಅರಿಮಲೆ ಒಂದು ಗೊಂಡಾರಣ್ಯದ ಮಧ್ಯದಲ್ಲಿನ ಊರು. ಮನೋರಮಾ ಎಸ್ಟೇಟ್, ಅರಿಮಲೆಯ ತುತ್ತ ತುದಿಯಲ್ಲಿತ್ತು. ಕಾಡಿನ ಮಧ್ಯೆ ಕಾಫಿ ಎಸ್ಟೇಟ್ ಹರಡಿತ್ತು. ಎಸ್ಟೇಟಿನ ಮಾಲೀಕರು ಮೈಸೂರು ಕಡೆಯವರು. ಬಯಲು ಸೀಮೆಯ ವಾತಾವರಣದಲ್ಲಿ ಬೆಳೆದ ಅವರಿಗೆ ಆ ಭಯಾನಕ ರಮಣೀಯತೆಯಲ್ಲಿ ವಾಸ ಮಾಡಲು ಹೆದರಿಕೆಯೇ. ಆದ್ದರಿಂದ ಅವರು ತಮ್ಮ ಮೈದುನ ವರದಾಚಾರ್ಯರನ್ನು ಕುಟುಂಬ ಸಮೇತ ತಮ್ಮಲ್ಲಿಗೆ ಕರೆಸಿಕೊಂಡಿದ್ದರು. ವರದಾಚಾರ್ಯರು ಹೆಗ್ಗಡದೇವನ ಕೋಟೆಯ ಕಾಕನಕೋಟೆಯಂಥ ಕಾಡುಸೀಮೆಯಲ್ಲಿ ಇದ್ದು ಪಳಗಿದವರೂ ಹೌದು. ಆದರೂ ಅರಿಮಲೆಯ ಆ ಭೀಷಣವಾದ ದಟ್ಟಡವಿಯೆತ್ತ? ಹೆಗ್ಗಡ ದೇವನ ಕೋಟೆಯ ಕಾಡೆತ್ತ? ಆದರೂ ಅವರು ಅಳುಕುವವರಲ್ಲ. ಎಂತಲೇ ಭಾವನವರೊಂದಿಗೆ ವಾಸಮಾಡಲು ಸಮ್ಮತಿಸಿದ್ದರು.

ಎಸ್ಟೇಟಿನ ಆವರಣದಲ್ಲೇ, ಅದರ ದಕ್ಷಿಣದ ಕೊನೆಯಲ್ಲಿ ಒಂಡಂಬಟ್ಟೆ ಎಂದು ಕರೆಯಲ್ಪಡುವ ತಿಟ್ಟಿನಲ್ಲಿ ಮೇಸ್ತ್ರಿ ಕೃಷ್ಣನ ಆವಾಸ ಸ್ಥಾನ, ಕೃಷ್ಣ ಘಟ್ಟದ ಕಡೆಯವನು. ಇನ್ನೂ ಪ್ರಾಯದವನು. ಚುರುಕುತನ ಪ್ರಾಮಾಣಿಕತೆಗಳಿಂದಾಗಿ ಸಾಧಾರಣ ಕೂಲಿಯಾಗಿ ಬಂದವನು ಬೇಗನೆ ಮೇಸ್ತ್ರಿಯ ಪದವಿಗೇರಿದ್ದನು. ಎಸ್ಟೇಟಿನ ಹೊರ ಬೇಲಿಯಿಂದಾಚೆಯ ತೋಪಿನ ಕೊನೆಯಲ್ಲಿ ಪಣಿಯರ ಪುರೆಗಳು ಅರ್ಥಾತ್ ಗುಡಿಸಲುಗಳು.

ಅಂದು ಕೃಷ್ಣ ಕೆಲಸ ಮುಗಿಸಿ ಪಣಿಯರಿಗೆ ಕೊಡುವ ಕೂಲಿ ಕೊಟ್ಟು ಗುಡಿಸಲಿಗೆ ತೆರಳಲಿದ್ದ. ಎಸ್ಟೇಟಿನ ಆವರಣದೊಳಗೇ ಅವನ ಗುಡಿಸಲಿಗೆ ೭-೮ ಮಾರು ದೂರದ ತಿರುವಿನಾಚೆ, ಪೊದೆಗಳ ಪಕ್ಕದಲ್ಲಿ ಹಾದು ಬರುತ್ತಿದ್ದ. ಮುಳುಗುವ ಸೂರ್ಯನ ಹೊಂಬಿಸಿಲು, ದಟ್ಟವಾದ ಪೊದೆಗಳ ಮೇಲೆ ಬಿದ್ದು, ಕತ್ತಲಾದ ಆ ಜಾಗವನ್ನು ಬೆಳಕಿನಿಂದ ಹೊಳೆಯುವಂತೆ ಮಾಡಿತ್ತು. ಅವನ ಮಡದಿಯೂ ತಾಯಿಯೂ ಯಾರದೋ ಮದುವೆಗೆಂದು ದೂರದ ಹಳ್ಳಿಗೆ ತೆರಳಿದ್ದರಿಂದ ಗುಡಿಸಲಿಗೆ ಬೇಗ ಹೋಗುವ ಅವಸರವೇನಿರಲಿಲ್ಲ ಅವನಿಗೆ. ಕಪ್ಪು ಹಸುರಿನ ಪೊದೆ, ಮರಗಳನ್ನು ಹೊನ್ನಿನ ಕಿರಣಗಳು ಬಂಗಾರವಾಗಿ ಮಾರ್ಪಡಿಸಿದ ಆ ಅಚ್ಚರಿಯ ನೋಟವನ್ನು. ತೆರೆದ ಕಂಗಳಿಂದ ಮೈಮರೆತು ನೋಡುತ್ತಾ ನಿಂತುಬಿಟ್ಟ ಕೃಷ್ಣ. ಅದೆಷ್ಟು ಹೊತ್ತು ಆ ಸೌಂದರ್ಯಾರಾಧನೆಯಲ್ಲಿ ಲೀನನಾಗಿದ್ದನೋ, ಹಠಾತ್ತನೆ 'ಕರ್ ಪುರ್' ಶಬ್ದ ಅವನ ಧ್ಯಾನವನ್ನು ಭಂಗಮಾಡಿತ್ತು. ನೋಡುತ್ತಾನೆ. ಪೊದೆಗಳೆಡೆಯಿಂದ ಎರಡು ಪುಟ್ಟ ಹುಲಿಮರಿಗಳು ಈಚೆ ಬಂದಿವೆ. ಒಂದರ ಮೇಲೊಂದು ಬಿದ್ದು ಒದ್ದಾಡುತ್ತ ಆಟವಾಡುವ ಚಂದವನ್ನು ನೋಡಿ ಕೃಷ್ಣ ಹಿಗ್ಗಿದನು. ಬಾಗಿ ಆ ಮರಿಗಳನ್ನೆತ್ತಿಕೊಂಡವನೇ ಮನೆಯೆಡೆಗೆ ನಡೆದ. ಅದರ ಪರಿಣಾಮವೇನಾದೀತು ಎಂಬ ಕಲ್ಪನೆಯೂ ಅವನಿಗಿಲ್ಲ:

ಕೇವಲ ಸೌಂದರ್ಯದ ಭಕ್ತನಾಗಿ ಮರಿಗಳ ನ್ನೆತ್ತಿಕೊಂಡು ಪರವಶತೆಯಿಂದ ಕವಿಗಿಂತ ಕವಿಯಾಗಿ ನಡೆದಿದ್ದ. ಗುಡಿಸಲಿಗೆ ಬಂದು ಹಾಲು ಅನ್ನ ಕಲೆಸಿ ತಟ್ಟೆಯಲ್ಲಿಟ್ಟು ಮರಿಗಳ ಮುಂದೆ ಇಟ್ಟ. ಅವು ಮೂಸಿಯೂ ನೋಡ ಲಿಲ್ಲ. ಅವನ್ನು ಗೋಣಿಯ ಚೀಲ ಹಾಸಿ ಮಲಗಿಸಿ, ದೊಡ್ಡ ಕುಕ್ಕೆಯನ್ನು ಅವುಗಳ ಮೇಲೆ ಮಗುಚಿ ಹಾಕಿ, ಸಂಜೆಯ ಗಂಜಿ ಯೂಟ ಮುಗಿಸಿ ಮಲಗಿಬಿಟ್ಟ. ಮಹತ್ತರ ವಾದ ಕಾರ್ಯ ಸಾಧಿಸಿದಂತೆ ಗೆಲುವಿನಿಂದ ನಿದ್ರೆ ಮಾಡಿದ. ಮಾರನೆಯ ದಿನ ಹೊತ್ತಿಗೆ ಮುಂಚೆಯೇ, ಕಲ್ವಾತಿ ಸಂತೆಗೆ ಹೋಗಲು ಗಾಡಿ ಕಟ್ಟಬೇಕಿತ್ತು. ಹೊತ್ತಿಗೆ ಮುಂಚೆಯೇ ಏಳಬೇಕೆಂಬ ಸಂಕಲ್ಪದಿಂದ ಸುಖವಾಗಿ ನಿದ್ರಿಸಿದ.



ಆ ರಾತ್ರಿ ನಿಶ್ಯಬ್ದ ಗಾಢಾಂಧಕಾರದಲ್ಲಿ ಪೊದೆಗಳೆಡೆಯಲ್ಲಿ ಕಂಡಗಳಂತೆ ನಿಗಿನಿಗಿ ಹೊಳೆ ಯುವ ಎರಡು ಜ್ವಲಂತ ಗೋಲಗಳು ಅಳ್ಳೆ ದೆಯವರು ನೋಡಿದರೆ ಕೊಳ್ಳಿಯ ಪಿಶಾ ಚಿಯ ಕೈಗೊಳ್ಳಿಗಳೆಂದು ಹೆದರುವಂಥ ಅಗ್ನಿ ಕಣಗಳು. ಅವು ತಾಯಿ ಹುಲಿಯ ಕಣ್ಣು ಗಳು. ಆ ಕಣ್ಣುಗಳು ಮರಿಗಳಿಗಾಗಿ ಅತ್ತಿಂ ದಿತ್ತ ಚಲಿಸುವಾಗ, ಕಪ್ಪನೆಯ ರಾತ್ರಿಯಲ್ಲಿ ಭೀಭತ್ಸವಾಗಿ ತೋರುತ್ತಿವೆ. ಇಟ್ಟ ಜಾಗ ದಲ್ಲಿ ಮರಿಗಳಿಲ್ಲ. ತಾಯಿ ಹುಲಿ ಭೀಕರವಾಗಿ ಆರ್ಭಟಿಸಿತು. ಅತ್ತಿತ್ತ ಚಲಿಸುತ್ತಾ, ಹುಡು ಕುತ್ತಲೇ ಇತ್ತು. ಮನುಷ್ಯರು ಬರಬಹು ದೆಂಬ ಅಂಜಿಕೆಯನ್ನು ತೊರೆದು ಎಸ್ಟೇಟ್ ಪೂರ್ತಿ ಗುಡುಗಾಡಿತು. ಎಲ್ಲಿ ಮರಿಗಳು! ಪುಟ್ಟ ಮರಿಗಳಿಗಾಗಿ ತಾನು ತಂದಿದ್ದ ಬೇಟೆ ಯನ್ನು ಪೊದೆಗಳೆಡೆಯೇ ಬಿಟ್ಟು, ವಾಸನೆ ನೋಡಿ ಮೂಸುತ್ತ ನೇರವಾಗಿ ತಿಟ್ಟನಲ್ಲಿರುವ ಕೃಷ್ಣನ ಗುಡಿಸಲೆಡೆಗೆ ಬಂದಿತು. ತಾಯಿಯ ಬರವು ಮರಿಗಳಿಗೆ ತಿಳಿಯಿತು. ಕುಕ್ಕೆಯೊಳಗೆ ಮಿಸುಕಾಡಿದವು. ಕರ್ ಪುರ್ ಎಂದು ಶಬ್ದ ಮಾಡಿದವು. ಮರಿಗಳ ಇರವು ತಾಯಿಗೆ ತಿಳಿ ಯದಿರುವುದೇ? ತನಗೂ ಮರಿಗಳಿಗೂ ಅಡ್ಡ ವಾಗಿ ಗಟ್ಟಿ ಗೋಡೆಯ ಮನೆ ಅಡ್ಡಿ ಬಂದಾಗ ಅದರ ರೋಷ ಇಮ್ಮಡಿಯಾಯಿತು. ಉಗ್ರವಾಗಿ ಗರ್ಜಿಸಿತು.

ಸವಿಗನಸಿನ ಗುಂಗಿನಲ್ಲಿದ್ದ ಕೃಷ್ಣ ಹಠಾತ್ತನೆ ಎಚ್ಚೆತ್ತು ಆಲಿಸಿದ. ಭೀಕರವಾದ ಗರ್ಜನೆ. ಅವನ ಎದೆ ಝಲ್ಲೆಂದಿತು. ಬೇಗನೆ ಎದ್ದು ಓಡಿ ಕಿಂಡಿಯಲ್ಲಿ ಇಣುಕಿದ. ಗೋಡೆಯ ಬದಿಗೆ

ಬಂದಿದ್ದ ಹುಲಿಯನ್ನು ಕಂಡುಬಿಟ್ಟ. ಅವನ ಕೈಕಾಲುಗಳು ಥರಥರನೆ ನಡುಗಿದವು. ಜಂಘಾ ಬಲ ಉಡುಗಿ ಹೋದಂತೆನಿಸಿತು. ನಾಲಿಗೆಯು ದ್ರವವಾರಿತು. ಸಾಧ್ಯವಿದ್ದಷ್ಟು ಭದ್ರವಾಗಿ ಬಾಗಿಲನ್ನು ಭದ್ರಪಡಿಸಿ, ಕೈಕಾಲು ಮುದುರಿ ಕೊಂಡು ಕುಳಿತುಬಿಟ್ಟ. ಮನಸ್ಸು ದೇವ ರನ್ನು ನೆನೆಯುತ್ತಿತ್ತು. ಗಳಿಗೆಯ ಪರವಶತೆ ಯಲ್ಲಿ ತಾನು ಮಾಡಿದ ಕೆಲಸ, ಇಂತಹ ಆಪತ್ತಿನಲ್ಲಿ ತನ್ನನ್ನು ತಂದು ನೂಕಿದ್ದನ್ನು ನೆನೆದು ನಡುಗಿದ.

ಇತ್ತ ಹುಲಿ ಗೋಡೆಗಳನ್ನು ಮುಂಗಾಲು ಗಳಿಂದ ಕೆರೆಯಿತು. ಕೃಷ್ಣನಿಗೆ ಅದು ತನ್ನ ಮೈಯನ್ನೇ ಕೆರೆದಂತೆ ಭಾಸವಾಗಿ ಮೈಯೆಲ್ಲಾ ಬೆವರಿಂದ ತೊಯ್ದು ಹೋಯಿತು. ಗುಡಿ ಸಲನ್ನು ಬಾರಿಬಾರಿಗೂ ಸುತ್ತಿ ಬಂದು ಮತ್ತೊಂದು ಕಡೆ ಕೆರೆಯಿತು ಹುಲಿ. ಆದರೆ ಕೃಷ್ಣನ ಅದೃಷ್ಟಕ್ಕೆ ಗೋಡೆ ಬಲವಾಗಿತ್ತು. ಆದ್ದರಿಂದ ಅದರ ಪ್ರಯತ್ನ ವಿಫಲ ವಾಯ್ತು. ಒಳಗಡೆ ಮರಿಗಳ ಗಲಾಟೆ ಕೇಳಿ ದಂತೆ, ಬಿಟ್ಟುಹೋಗಲೂ ಮನಸ್ಸಿಲ್ಲದೆ, ಬಾಗಿ ಲನ್ನು ತೆಗೆದಾಗ ತನ್ನ ಮರಿಗಳನ್ನಪಹರಿಸಿದ ಘಾತುಕನನ್ನು ಬಗೆಯಬೇಕೆಂದು ಸಿದ್ಧವಾ ಗಿತ್ತು. ಕೃಷ್ಣನಿಗೆ ಯುಗ ಯುಗ ಕಳೆಯು ತ್ತಿದ್ದಂತೆನಿಸುತ್ತಿತ್ತು. ಹುಲಿ ಬಾಗಿಲನ್ನು ಕಾಯುತ್ತಲೇ ಕುಳಿತಿತ್ತು.

೩ ಗಂಟೆಗೇ ಸಾಮಾನ್ಯವಾಗಿ ಗಾಡಿ ಕಟ್ಟ ಲಾರಂಭಿಸುತ್ತಿದ್ದ ಕೃಷ್ಣ–ಇಂದು ಬೆಳಗಿನ ಝಾಮ ಗಂಟೆ ನಾಲ್ಕಾದರೂ ಅವನ ಸುಳಿವಿಲ್ಲ. ವಿಸ್ಮಯಗೊಂಡ ವರದಾಚಾರ್ಯರು ಎದ್ದು ಕೃಷ್ಣನನ್ನೆಬ್ಬಿಸಲು ಗುಡಿಸಲ ಕಡೆ ಹೊರ ಟರು. ಅವರ ಭಾವ ಎಂದರು. "ಇಷ್ಟು ಹೊತ್ತಿನಲ್ಲಿ ಹೋಗಬೇಕೆಂದರೆ ಹುಷಾರಾ ಗಿಯೇ ಇರಬೇಕಪ್ಪ. ನೋಡಿಕೊಂಡು ಹೋಗು" ಎಂದು ಎಚ್ಚರಿಸಿದರು. "ಅದೆಲ್ಲಾ ಪರವಾಗಿಲ್ಲ ಟಾರ್ಚಿದೆ, ಕುದುಗೋಲಿದೆ. ನೋಡಿಕೊಳ್ಳಬಲ್ಲೆ." ಎಂದ ಉತ್ತರಿಸಿ ವರದಾಚಾರ್ಯರು ಸಾಕಷ್ಟು ಸಾವಧಾನ ವಾಗಿಯೇ ಕಿಟ್ಟನ ಕಡೆ ನಡೆಯುತ್ತಿದ್ದವರು.

'ಕೊಳ್ಳಿಯಂಥಾ ಕಣ್ಣುಗಳನ್ನು ದಿಟ್ಟಿಸಿ ಸ್ವಲ್ಪ ಶಂಕಿತರಾಗಿ ಅಲ್ಲೇ ನಿಂತು ಟಾರ್ಚನ್ನು ಬಿಟ್ಟರು. ಟಾರ್ಚಿನ ಕ್ಷಣ ಮಿಂಚಿನ ಬೆಳಕಿ ನಲ್ಲಿ ಭಯಂಕರವಾದ ಹೆಣ್ಣು ಹುಲಿ ಎದ್ದು ನಿಂತು, ಬರುವವರನ್ನು ಆಕ್ರಮಿಸಲು ತಯಾ ರಾಗಿ ನಿಂತದ್ದು ಕಂಡಿತು. ಅವರು ಹಾಗೆಯೇ ಹಿಂದುಹಿಂದಕ್ಕೆ ಸರಿಯುತ್ತಾ ಮನೆ ಕಡೆ ನಡೆದು ಬಿಟ್ಟರು. ಮನೆಗೆ ಭರದಿಂದ ತಲಪಿ ದವರೇ ಭಾವನವರಿಗೆ ವಿಷಯವನ್ನು ತಿಳಿಸಿ ದರು. ಅವರಿಗೆ ಬಹಳ ಗಾಬರಿಯಾಗಿ ಬಿಟ್ಟಿತು. ಮನೆಯ ಸುತ್ತ ಮಲಗಿದ್ದ ಆಳು ಗಳನ್ನೆಬ್ಬಿಸಿಕೊಂಡು, ಹುಲಿ ಬಂದು ಕೃಷ್ಣನ ಮನೆ ಬಾಗಿಲಿನಲ್ಲಿ ಕುಳಿತಿರುವುದನ್ನು ತಿಳಿಸಿ ದರು. ಒಡನೆಯೇ ಆಳುಗಳೆಲ್ಲರಿಗೂ ಈಟಿ ಕೋವಿ ಕೊಡಲಿಗಳಿಂದ ಸಜ್ಜಾಗಿ ಕಿಟ್ಟನ ಕಡೆ ನಡೆದರು. ಇನ್ನೂ ಅಷ್ಟು ದೂರದಲ್ಲಿರು ವಾಗಲೇ "ಓ ಕೃಷ್ಣ, ಕೃಷ್ಣಾ" ಎಂದು ಒಟ್ಟಿಗೆ ಕೂಗು ಹಾಕಿದರು. ಕೂಗು ಒಂದಕ್ಕೆರಡಾಗಿ ಮಾರ್ದನಿಗೊಂಡಂತೆ ಹುಲಿಯ ಭಯಂಕರ ಗರ್ಜನೆ, ವನಾಂತರಾಳದಲ್ಲೆಲ್ಲಾ ಮೊಳಗಿತು. ಎಷ್ಟೇ ಆಯುಧಪಾಣಿಗಳಾಗಿದ್ದರೂ, ವಾತ್ಸ ಲ್ಯದ ತಳಮಳಿಕೆಯಲ್ಲಿ ಜೀವದ ಹಂಗು ದೊರೆದು ಎದುರು ಸೆಣಸಿ ನಿಂತ ತಾಯಿ ಹುಲಿಯನ್ನು ಕಣಕಲು, ಹುಲಿ ಬೇಟೆಯಲ್ಲಿ ನಿಷ್ಣಾತರಾದ ಆ ಜನರು ಹಿಂಜರಿದು, ನಿಂತಲ್ಲೇ ನಿಂತರು. ಬೆಳ್ಳಗೆ ಬೆಳಗಾಗಿ ಸೂರ್ಯನ ಹೊಂಗಿರಣಗಳು ಪಸರಿಸಿದಾ ಗಲೂ, ಸುಮಾರು ೩ ಗಂಟೆಗಳ ಕಾಲ ಹಾಗೆಯೇ ನಿಂತಿದ್ದರು. ಹುಲಿಯೂ ಬೇಸರಿ ಸದೆ ನಿಂತಲ್ಲೇ ಆಕ್ರಮಣಕ್ಕೆ ತಯಾರಾಗಿ ಹಂತೇ ಇತ್ತು. ಆದರೆ ಎದುರಾಳಿಗಳು ಆಕ್ರ ಮಣ ಮಾಡುವ ಸೂಚನೆ ಕಂಡುಬರಲಿಲ್ಲ. ಅದು ನಿಧಾನವಾಗಿ ಹಿಂತಿರುಗಿ, ಒಂದೊಂದೇ ಹೆಜ್ಜೆ ಹಿಂದಿಡುತ್ತಾ ಕಾಡಿನೊಳಗೆ ಮರೆಯಾಗಿ ಮಾಯವಾಯ್ತು. ಒಂದಷ್ಟು ಹೊತ್ತು ಸುಮ್ಮನಿದ್ದು, ನಂತರ ಎಲ್ಲರೂ ಕೃಷ್ಣನ ಗುಡಿಸಲ ಬಳಿಗೆ ಓಡಿ ಬಂದು 'ಓ ಕೃಷ್ಣಾ! ಬಾಗಿಲು ತೆಗೆ ಕೃಷ್ಣಾ!' ಎಂದು ಕೂಗಿ

ಬಾಗಿಲು ಬಡಿದರು. ಆದರೆ ಒಳಗಿಂದ ಯಾವ ಪ್ರತಿಕ್ರಿಯೆಯೂ ಬರಲಿಲ್ಲ.

ವರದಾಚಾರ್ಯರು ಬಾಗಿಲ ಕಿಂಡಿಯ ಬಳಿ ಬಂದು ಬಗ್ಗಿ ನೋಡುತ್ತಾರೆ!... ಘಾಬರಿ ಭಯಗಳಿಂದ ಬಿಳಿಚಿಕೊಂಡು ಪ್ರತಿಮೆಯಂತೆ, ನಿಸ್ಪಂದನಾಗಿ ಮೊಳಕಾಲ ಮೇಲೆ ತಲೆಯಿಟ್ಟು ಮುದುರಿ ಕುಳಿತಿದ್ದ ಕೃಷ್ಣ. 'ಕೃಷ್ಣಾ ಬಾಗಿಲು ತೆಗೆ ನಿನ್ನ ಒಡೆಯ ಬಂದಿದೇನೆ, ಎಂದು ಕಿಂಡಿಯಿಂದ ಕೂಗಿದರು. ನಿಧಾನವಾಗಿ ಕೃಷ್ಣನ ಮೈ ಅಲುಗಾಡಿತು. ಚೇತನಗೊಂಡ ಅವನು ಮೆಲ್ಲಗೆ ಮೇಲಕ್ಕೆದ್ದು ಅವರನ್ನೊಮ್ಮೆ ನೋಡಿ ಹುಲಿಯಲ್ಲ! ತನ್ನ ಧನಿಯೇ ಎಂದು ಖಚಿತವಾಗಿ/ ನಿರ್ಧರಿಸಿ ಕೊಂಡು, ಸರ್ವ ಶಕ್ತಿಯನ್ನೂ ಉಪಯೋಗಿಸಿ ಬಾಗಿಲು ಬಳಿ ಬಂದು ಬಾಗಿಲು ತೆಗೆದ. ಅಷ್ಟೆ. ತ್ರಾಣವಿಲ್ಲದೆ ಅವರ ಕಾಲ ಬಳಿ ಬಿದ್ದು ಬಿಟ್ಟ. ಅವನಿಗೆ ತಲೆಗೆ ನೀರು ತಟ್ಟಿ ಶೈತ್ಯೋಪಚಾರ ಮಾಡಿ. ನಂತರ ನಡೆದು ದನ್ನು ಕೇಳಿ ತಿಳಿದುಕೊಂಡಾಗ ಅವರಿಗೆ ವಿಸ್ಮಯವಾಯ್ತು. ಕುತೂಹಲದಿಂದ "ಎಲ್ಲಿ? ಮರಿಗಳು ತೋರಿಸು" ಎಂದರು. ಕವಿಚಿದ್ದ ಪಕ್ಕೆಯನ್ನು ತೆಗೆದು ಕೃಷ್ಣ ಮರಿಗಳನ್ನು ಹೆದಹೆದರುತ್ತಲೇ ಹೊರಗೆ ತಂದು ಬಿಟ್ಟ.

ಎಳೆ ಬಿಸಿಲಿನಲ್ಲಿ ಹಚ್ಚಹಸಿರಾದ ಹುಲ್ಲಿನ ನಡುವೆ ಮಿರಮಿರನೆ ಮಿಂಚುವ ಹಳದಿ ಮೈಯ ಮೇಲೆ, ಕರಿ ಪಟ್ಟೆಗಳು ಹೊಳೆಯುತ್ತಿರಲು, ಆ ಮುದ್ದು ಮರಿಗಳು ಒಂದರ ಮೇಲೊಂದು ಬಿದ್ದು ಒದ್ದಾಡುತ್ತಿದ್ದರೆ ವನದೇವಿಯ ಹಸರು ಸೀರೆಯ ಜರತಾರಿ ಹೂವಿನಂತೆ ನಯನಮನೋಹರವಾಗಿದ್ದುವು. ಎಲ್ಲರೂ ಒಂದರಗಳಿಗೆ ಆ ಸುಂದರ ದೃಶ್ಯದಲ್ಲಿ ತನ್ಮಯರಾಗಿ ಮಾತಿಲ್ಲದೆ ನಿಂತರು.

ದೈವಸೃಷ್ಟಿ ಎಷ್ಟು ಅದ್ಭುತ! ಕ್ರೌರ್ಯದ ನಡುವೆ ಅಪರಿಮಿತವಾದ ಸೌಂದರ್ಯ ರಾಶಿಯ ಅಮೋಘ ನರ್ತನ! ಎಂದೆಲ್ಲಾ ಆಹ್ಲಾದ ವಿಸ್ಮಯಗಳಿಂದ ಹೀಗಿದ್ದರು ವರದಾಚಾರ್ಯರು ಕೃಷ್ಣನ ಭೀತ ಮುಖ ಮುದ್ರೆಯನ್ನು ದಿಟ್ಟಿಸಿದಾಗ, ಎದುರಿಗಿರುವವು ಹುಲಿಯ ಮರಿಗಳೆಂಬ ಅರಿವು ಮೂಡಿತು. ಒಡನೆಯೇ ಎಚ್ಚರಿಸಿದರು.

"ಈಗಲೇ ಇವುಗಳನ್ನು ಅವು ಇದ್ದ ಜಾಗದಲ್ಲಿ ತೆಗೆದುಕೊಂಡು ಹೋಗಿ ಬಿಟ್ಟು ಬಿಡು. ಇಂದಿನ ಅನುಭವ ದಿನವೂ ಬೇಕು ಎಂದಿಷ್ಟವಾದರೆ ಮರಿಗಳನ್ನಿರಿಸಿಕೊ."

ಕೃಷ್ಣ ನಡುಗುತ್ತಾ, "ಅಯ್ಯೋ ಒಡೆಯ! ಈಗಲೇ ಬಿಟ್ಟು ಬಿಡೋಣ" ಎಂದ. ಆದರೆ ಹಾಗೆ ಬಿಟ್ಟು ಬರಲು ಅವನಲ್ಲಿ ಯಾವ ಧೈರ್ಯವೂ ಉಳಿದಂತೆ ಕಾಣಲಿಲ್ಲ. ಅವನಿಗೆ ಎಲ್ಲರೂ ಧೈರ್ಯ ತುಂಬಿದರು. ಅವನನ್ನು ಮರಿಗಳೊಂದಿಗೆ ಮಧ್ಯೆ ಇಟ್ಟುಕೊಂಡು ಸುತ್ತಲೂ ನಡೆದರು. ಪೊದೆಗಳಡೆಯಲ್ಲಿ.

ಹುಲಿಯ ಬೇಟೆ ಜಿಂಕೆ ಅರೆಕೊರೆಯಾದ ಸ್ಥಿತಿಯಲ್ಲಿ ನಾರುತ್ತ ಬಿದ್ದಿತ್ತು. ಅಲ್ಲಿಯೇ ಮರಿಗಳನ್ನಿರಿಸಿ ಸರಸರನೆ ಹೊರಟು ಬಂದರು. ತೋಟದಲ್ಲಿ ಎಲ್ಲಿ ನೋಡಿದರೂ, ಹುಲಿಯ ಹೆಜ್ಜೆ ದಟ್ಟವಾಗಿ ಮೂಡಿತ್ತು. ಹಗಲು ಹೊತ್ತಾದರೂ, ಅವರಿಗೆ ಅದು ದಿಗಿಲನ್ನೇ ತರಿಸಿತು. ಎಲ್ಲರೂ ಬೇಗ ಬೇಗ ಮನೆ ಸೇರಿದರು. ಕೃಷ್ಣ ಅಂದು ಧಣಿಯ ಮನೆಯಲ್ಲೇ ಆಶ್ರಯ ಪಡೆದರು. ಮಾರನೆ ದಿನ ಪೊದೆಗಳೆಡೆಗೆ ವರದಾಚಾರ್ಯರು ಯಾರೆಷ್ಟು ಹೇಳಿದರೂ ಹೆದರದೆ ಕೇವಲ ಕುತೂಹಲ ದಿಂದಾಗಿ ನಡೆದರು.

ಅಲ್ಲಿ ಮರಿಗಳೂ ಇರಲಿಲ್ಲ. ಬೇಟೆಯೂ ಇರಲಿಲ್ಲ. ತಾಯಿ ಹುಲಿ ಒಂದು ಬಾರಿಯ ಅನುಭವವನ್ನು ಮರೆಯದೆ, ಮರಿಗಳನ್ನು ಸುರಕ್ಷಿತವಾದ ಮನುಷ್ಯರಿಲ್ಲದ ಎಡೆಗೆ ಕೊಂಡೊಯ್ದಿತ್ತು. ✡



## ಹೇಗೆ ತಿಳೀಬೇಕು?

ಅದೇ ತಾನೇ ನಾನು ವರ್ಗವಾಗಿ ಹೊಸ ಜಾಗದಲ್ಲಿ ಕೆಲಸಕ್ಕೆ ಹಾಜರಾಗಿದ್ದೆ. ಬಲಗಾಲಿನ ಹೆಬ್ಬೆರಳು ನೋವಿನಿಂದ ಬಹಳ ತೊಂದರೆ ಕೊಡುತ್ತಿದ್ದುದರಿಂದ ಹತ್ತಿರದಲ್ಲೇ ಇದ್ದ ಒಬ್ಬ ನುರಿತ ಡಾಕ್ಟರ ಹತ್ತಿರ ಚಿಕಿತ್ಸೆಗಾಗಿ ಹೋಗುತ್ತಿದ್ದೆ. ಡಾಕ್ಟರು ಕಾಲನ್ನು ನೋಡಿ ಹೆದರಿದಂತಿತ್ತು. ಕೆಲವು ಗುಳಿಗೆಗಳನ್ನು ಬರೆದುಕೊಟ್ಟು ಬೆಳಗ್ಗೆ ಹಾಗೂ ಸಂಜೆ ಎರಡು ಹೊತ್ತು ತೋರಿಸುವಂತೆ ತಿಳಿಸಿದ್ದರು. ಮತ್ತೆ ಎರಡು ದಿನ ಕೆಲವು ಬೇರೆ ಗುಳಿಗೆಗಳನ್ನು ಕೊಟ್ಟರು. ವ್ಯಾಧಿ ಏನೆಂಬುದನ್ನು ೪-೫ ದಿನಗಳ ಚಿಕಿತ್ಸೆಯ ನಂತರ ತಿಳಿಸುತ್ತೇನೆಂದು ಹೇಳಿದ್ದರು. ಅವರ ಚಿಕಿತ್ಸೆ ಹಾಗೂ ಮಾತನಾಡುವ ರೀತಿ ಬಹುಶಃ ನನಗೆ ಕ್ಯಾನ್ಸರ್ ಇರಬಹುದೇನೋ ಎಂಬ ಅಂಜಿಕೆ ಹುಟ್ಟಿಸಿತ್ತು. ಇದರಿಂದ ಗಾಬರಿಯಾಗಿ ತಜ್ಞರಲ್ಲಿ ತೋರಿಸಲು ಸರಕಾರಿ ಆಸ್ಪತ್ರೆಗೆ ಹೋದೆ. ಕೂಡಲೇ ಆಪರೇಷನ್ ಮಾಡಿ ಕಾಲಿನಲ್ಲಿ ಹೊಕ್ಕಿದ್ದ ಗಾಜಿನ ಚೂರನ್ನು ತೆಗೆದು ಚಿಕಿತ್ಸೆ ನೀಡಿದರು. ಮರುದಿನ ಮೊದಲಿನ ಡಾಕ್ಟರನ್ನು ಕಂಡು ವಿಷಯವನ್ನು ತಿಳಿಸಿದೆ. "ಅಲ್ರೀ, ನಿಮಗೇನಾಗಿದೆ ಎಂಬುದನ್ನು ತಿಳಿಸದಿದ್ದರೆ ನಾವಾದರೂ ಏನು ಚಿಕಿತ್ಸೆ ಮಾಡಬೇಕು"? ಎಂದು ಅವರು ಕೇಳಿದಾಗ ನನಗೆ ನಗು ತಡೆಯಲು ಸಾಧ್ಯವಾಗಲಿಲ್ಲ.

— ಎಸ್. ಆರ್. ಎಸ್.

## ನಾನಿರುವುದೆ-

ಒಂದು ಸಂಜೆ ೫-೩೦ರ ಸುಮಾರಿಗೆ ನಾನು ಮತ್ತು ನನ್ನ ಹಿರಿಯ ಸ್ನೇಹಿತರೊಬ್ಬರು ಮೈಸೂರು ನಗರದ ಮಹಾರಾಜಾ ಕಾಲೇಜಿನ ಪಕ್ಕದ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್ ಕಡೆಗೆ ಹೋಗುವ ರಸ್ತೆಯಲ್ಲಿ ಹೋಗುತ್ತಿದ್ದೆವು. ನಮ್ಮಿಂದ ಸ್ವಲ್ಪ ಮುಂದೆ ಇಬ್ಬರು ತರುಣಿಯರು ನಗುತ್ತಾ ಹರಟುತ್ತಾ ಹೋಗುತ್ತಿದ್ದರು. ಕಾಲೇಜಿನ ಕಡೆಯಿಂದ ಇಬ್ಬರು ತರುಣರು ಬಂದರು. ಆ ತರುಣಿಯರನ್ನು ಸಮೀಪಿಸಿದಂತೆ ಒಬ್ಬ, 'ಸುತ್ತ ಮುತ್ತ ಯಾರೂ ಇಲ್ಲ. ಇಲ್ಲ, ಇಲ್ಲ' ಎಂದು ಮೂರು ಸಲ ಹಾಡಿದ. ಆಗ ಒಬ್ಬ ಟ್ರಾಫಿಕ್ ಕಾನ್‌ಸ್ಟೇಬಲ್ ಎಡಗಡೆ ರಸ್ತೆಯಿಂದ ಸೈಕಲ್ಲಿನಲ್ಲಿ ಬಂದ. ಹುಡುಗನನ್ನು ಸಮೀಪಿಸಿ 'ನಾನಿರುವುದು ನಿನಗಾಗಿ, 'ನೀನಿರುವುದು ನನಗಾಗಿ' ಎಂದು ಹಾಡುತ್ತಾ ಹುಡುಗನ ಹತ್ತಿರ ಇಳಿದ. ಆ ವೇಳೆಗೆ ನಾವೂ ಅಲ್ಲಿಗೆ ಸಮೀಪಿಸಿ ನಿಂತೆವು. ಎಲ್ಲರಿಗೂ ನಗು ಬಂತು. ಪೋಲಿಸಿನವನಿಗೆ ನಾವು ಹೇಳಿದೆವು 'ಪರವಾಯಿಲ್ಲ ನಿನಗೂ ತಮಾಷೆಯಾಗಿರಲು ಬರುತ್ತೆ' ಎಂದು. ಎಲ್ಲರೂ ನಕ್ಕು ಚದುರಿದರು.

— ಆಚಾರ್ಯ

## ಇದು ನಾಗರಿಕತೆ

ತುಮಕೂರಿನಿಂದ ಬೆಂಗಳೂರಿಗೆ ಎಕ್ಸ್‌ಪ್ರೆಸ್ ಬಸ್ಸಿನಲ್ಲಿ ಪ್ರಯಾಣ ಮಾಡಲು ಕೇವಲ ಎಪ್ಪತ್ತೈದು ನಿಮಿಷಗಳು ಸಾಕು. ಬಸ್ಸು ಹತ್ತಿದಾಗ ಸೀಟುಗಳೆಲ್ಲ ತುಂಬಿದ್ದರಿಂದ ನಾನು ನಿಲ್ಲಬೇಕಾಯಿತು. ನನ್ನ ಜೊತೆ ಬಂದ ನಾಲ್ಕೈದು ಜನರೂ ಸಹ ನಿಂತೇ ಪ್ರಯಾಣ ಮಾಡಬೇಕಾಯಿತು. ಸುಮಾರು ಮುಕ್ಕಾಲು ಗಂಟೆ ಕಳೆದಿತ್ತು. ಬದಿಯ ಸೀಟನಲ್ಲಿ ಕುಳಿತಿದ್ದ ವ್ಯಕ್ತಿ ಎದ್ದು ನನಗೆ 'ಕುಳಿತುಕೊಳ್ಳಿ' ಎಂದು ಹೇಳಿತು. 'ಬೇಡ ಸೀಟು ನಿಮ್ಮದು' ಎಂದೆ ನಾನು. 'ಹಾಗಲ್ಲ ನೀವೂ ಸಹ ನನ್ನ ಹಾಗೆ ಬಸ್ ಚಾರ್ಜ್ ಕೊಟ್ಟಿದ್ದೀರ. ಅರ್ಧ ದೂರ ನಾನು ಕುಳಿತಿದ್ದೆ. ಇನ್ನರ್ಧ ದೂರ ನೀವು ಕುಳಿತುಕೊಳ್ಳಿ. ಇದು ನನ್ನ ಪ್ರಿನ್ಸಿಪಲ್' ಎಂದು ಉತ್ತರಿಸಿ ನನ್ನನ್ನು ಸೀಟನತ್ತ ದೂಡಿದ. ತುಂಬ ಸಾದಾ ಉಡುಪಿನಲ್ಲಿದ್ದ ವ್ಯಕ್ತಿಯು

ಈ ಗುಣವನ್ನು ಕಂಡು ನಮಗೆ ಅಚ್ಚರಿಯಾಗದಿರಲಿಲ್ಲ. ಈ ಕಾಲದಲ್ಲಿಯೂ ಇಂತಹ ವ್ಯಕ್ತಿಗಳಿದ್ದಾರಲ್ಲ ಎಂಬುದು ಸಂತೋಷದ ಸಂಗತಿ.

—'ನೃಪತುಂಗ'

## ಡಾಕು

ದಿನಪತ್ರಿಕೆಯಲ್ಲಿ ಎತ್ತರದ ನಿಲುವಿನ, ಹುರಿಕಟ್ಟಿದ ಮೀಸೆಯ, ನೋಡಿದರೆ ಹೆದರಿಕೆ ಬರುವಂತಿರುವವನ ಚಿತ್ರ ಬಂದದ್ದು ನೋಡಿ ಹೆದರಿದ ನನ್ನ ಮಗಳು ಸಹನಾ ಇವರು ಯಾರು ಎಂದು. ಕೇಳಿದಳು ಇವರು ಪ್ರಸಿದ್ಧ ಕಳ್ಳರು, ದರೋಡೆಗಾರರು ಶ್ರೀಮಂತರನ್ನು ಹೊಡೆದು, ಕೊಂದು ಅವರಲ್ಲಿದ್ದ ಹಣವನ್ನೆಲ್ಲ ಒಯ್ಯುತ್ತಾರೆ. ಇವರ ಹತ್ತಿರ ಬಂದೂಕು ಇರುತ್ತದೆ. ಕಾರು-ಕುದುರೆ ಎಲ್ಲ ಸಾಧನಗಳೂ ಇರುತ್ತವೆ. ಯಾವಾಗಲೂ ಗುಡ್ಡದಲ್ಲಿಯೇ ಇರುತ್ತಾರೆ. ಹಗಲು ವೇಷ ಬದಲಿಸಿ ಊರಲ್ಲಿ ಬರುತ್ತಾರೆ. ಸಾಮಾನ್ಯವಾಗಿ ಇವರಿಗೆ ಡಾಕು ಎನ್ನುತ್ತಾರೆ ಎಂದು ತಿಳಿಸಿ ಹೇಳಿದೆ.

ಒಂದು ದಿನ ಅವಳಿಗೆ ತುಂಬ ನೆಗಡಿಯಾಗಿ ಜ್ವರ ಬಂದವು. ಅವಳನ್ನು ದವಾಖಾನೆಗೆ ಕರೆದುಕೊಂಡು ಹೋಗಬೇಕೆಂದರೆ ಒಲ್ಲೆನೆಂದು ಹಟ ಹಿಡಿದಳು. ಎಷ್ಟು ರಮಿಸಿದರೂ, ಅವಳು ತನ್ನ ಹಟ ಬಿಡಲಿಲ್ಲ. ಯಾಕೆ? ಯಾಕೆ ಹೆದರುತಿ ಎಂದು ಕೇಳಿದೆ. ಅವಳು ಅಂಜುತ್ತಲೇ ಹೇಳಿದಳು, ಅಲ್ಲಿ ಡಾಕುಗಳಿರುತ್ತಾರೆ ಎಂದು. ದವಾಖಾನೆಯಲ್ಲಿ ಡಾಕುಗಳೆಂದರೇನು ? ಇದು ನನಗರ್ಥವಾಗಲಿಲ್ಲ. ಅದೇ ವಿಚಾರದಲ್ಲಿಯೇ ದವಾಖಾನೆಯ ಮುಂದೆ ಹಾದು ಹೊರಟಾಗ ಆಕಸ್ಮಾತ್ ನನ್ನ ದೃಷ್ಟಿ ದೊಡ್ಡ ಅಕ್ಷರಗಳಲ್ಲಿ ಬರೆದ ಫಲಕದ ಕಡೆಗೆ ಹೋಯಿತು. ಅಲ್ಲಿ ಕೆಳಗೆ ಡಾ. ಕು....ಎಂದು ಬರೆದಿತ್ತು. ಈಗ ನನಗೆ ನನ್ನ ಮಗಳ ಹೆದರಿಕೆಯ ಅರ್ಥವಾಯಿತು. ಮತ್ತೆ ಮನೆಗೆ ಬಂದು ನೀನು? ದವಾಖಾನೆಯ ಬೋರ್ಡ್ ಓದಿದ್ದೀಯಾ ಎಂದು ಕೇಳಿದೆ. 'ಹೌದು ಅದರ ಮೇಲೆ ಡಾಕು ಎಂದು ಬರೆದಿದೆ' ಎಂದಳು. "ಹುಚ್ಚಿ, ಡಾ ಅಂದರ ಡಾಕ್ಟರ ಕು. ಅಂದರ ಕುಮಾರಿ; ಲಗ್ನ ಆಗದ ಹೆಣ್ಣುಮಕ್ಕಳು ಕುಮಾರಿ. ಆ ಡಾಕ್ಟರ ಲಗ್ನ ಆಗಿಲ್ಲ. ಅದಕ್ಕೆ ಕುಮಾರಿ ಅಂತ ಬರದಾರ. ಅವರ ಹತ್ತರ ಬಂದೂಕ ಇರುವುದಿಲ್ಲ. ಖರೀ ಔಷಧಿ ಇರತದ" ಅಂತ ತಿಳಿ ಹೇಳಿ ಕರೆದೊಯ್ದು ಔಷಧಿ ತರಬೇಕಾದರೆ ನನ್ನ ಪುಣ್ಯವೆಲ್ಲ ಖರ್ಚಾಯಿತು.

—ವಾಸುದೇವ ಶಿಗ್ಗಾಂವ

## ಹಿಂದಿರುಗಿಸಿ

ಪೆಟ್ಟಿಗೆ ಅಂಗಡಿಯಲ್ಲಿ ಬಹಳ ಜನ ಸಂದಣಿಯಿತ್ತು. ಅಂಗಡಿಯವ ತುರಾತುರಿಯಿಂದ ಎಲ್ಲರಿಗೂ ಸಿಗರೇಟು. ಬೀಡ, ಬೀಡಿ, ಬಾಳೆಹಣ್ಣು ಇತ್ಯಾದಿ ಕೊಡುತ್ತಿದ್ದ. ನಮ್ಮಣ್ಣ ಮನೆಯಲ್ಲಿ ಸಿಗರೇಟು ಸೇದುತ್ತಿರಲಿಲ್ಲ. ಹೀಗೆ ಎಲ್ಲಾದರೂ ಹೊರಗೆ ಬಂದಾಗ ಮಾತ್ರ ಕದ್ದು ಸೇದುತ್ತಿದ್ದ. ಅವನೇ ಅಂಗಡಿಗೆ ಬಂದು ಸಿಗರೇಟು ತೆಗೆದುಕೊಂಡರೆ ಯಾರಾದರೂ ನೋಡಿಯಾರೆಂದು ನನ್ನನ್ನು ಕಳಿಸಿದ್ದ. ಕೈಗೆ ಹಣ ಕೊಟ್ಟು 'ನೋಡು, ಎರಡು ಒಳ್ಳೆಯ ಸಿಗರೇಟ್ ತಗಂಬಾ' ಎಂದ. ನಾನು ಓಡೋಡಿ ಬಂದವನೇ ಜನರ ಸಂದಿಯಲ್ಲಿ ನುಗ್ಗಿ ದುಡ್ಡು ಕೊಟ್ಟು ಅಂಗಡಿಯವನಿಗೆ ಎರಡು ಸಿಗರೇಟ್ ಎಂದ. ಅವನು ಯಾವುದು? ಎಂದ. ನಾನು ಯಾವುದೊಂದು ಯೋಚಿಸುತ್ತಿರುವಾಗಲೇ ಎರಡು ಬರ್ಕಲಿ ಸಿಗರೇಟ್ ಕೈಗಿಟ್ಟ. "ಇವು ಒಳ್ಳೇ ಸಿಗರೇಟೇ ತಾನೇ" ಎಂದು ಅಂಗಡಿಯವನನ್ನು ಕೇಳಿದೆ. ಅದಕ್ಕವನು, 'ನೋಡು ಮರಿ, ಸೇದಿ ನೋಡು. ಚನ್ನಾಗಿದ್ದರೆ ತಗಂಡೋಗು. ಇಲ್ದಿದ್ರೆ ವಾಪಾಸ್ ತಂದ್ ಕೊಡು!' ಎಂದು ಉತ್ತರ ಕೊಟ್ಟ. ತಕ್ಷಣ ನನಗೆ ಅವನು ಹೇಳಿದ್ದೇನೆಂದು ಹೊಳೆಯಲೇ ಇಲ್ಲ. ಬಹಳ ಹೊತ್ತಿನ ಅನಂತರ ಹೊಳೆಯಿತು. ಸಿಗರೇಟ್ ಸೇದಿ ನೋಡಿದ ಮೇಲೆ ವಾಪಸ್ ಹೇಗೆ ತಂದು ಕೊಡೋದು?

— ಕೃಷ್ಣ

ತೆಲುಗು ಕಥೆ

# ಮಿಸ್ಟೇಕನ್

ಮೂಲ: **ವಾಸಿರೆಡ್ಡಿ ಸೀತಾದೇವಿ**
ಅನು: **ಶ್ರೀಮತಿ ಶರ್ವಾಣಿ**

ಸ್ನೇಹಿತನೊಂದಿಗೆ ಹರಟೆ ಹೊಡೆಯುತ್ತ, ಸಿಗರೇಟ್ ಸೇದುತ್ತ ವಿಜಯವಾಡ ರೈಲ್ವೆ ಪ್ಲಾಟ್‌ಫಾರ್ಮಿನಲ್ಲಿ ನಿಂತಿದ್ದ ಮೂರ್ತಿ. ಅವನ ಸ್ನೇಹಿತ ರಂಗನಾಥ ಮದರಾಸಿಗೆ ಹೊರಟಿದ್ದ.

ಹಿಂದಿನಿಂದ ಯಾರದೋ ಕೈ ಭುಜದ ಮೇಲೆ ಬಿತ್ತು. ಬೆಚ್ಚಿಬಿದ್ದು ಹಿಂತಿರುಗಿ ನೋಡಿದೆ. ಮಾಸಿದ ಪೈಜಾಮಾ, ಜುಬ್ಬಾ ತೊಟ್ಟ ಆ ವ್ಯಕ್ತಿಯನ್ನು ನೋಡಿ ಮುಖ ಸಿಂಡರಿಸಿದ.

"ನನ್ನ ನೆನಪಿದೆಯೇ?" ಮೂರ್ತಿಯ ಮುಖವನ್ನು ದಿಟ್ಟಿಸಿ ನೋಡುತ್ತಾ ಕೇಳಿದ ಆ ವ್ಯಕ್ತಿ.

"ಇಲ್ಲ" ನಿರ್ಲಕ್ಷ್ಯವಾಗಿ ಜವಾಬು ಕೊಟ್ಟ ಮೂರ್ತಿ.

"ನನ್ನ ಹೆಸರು ಗೋಪಾಲ. ಐದು ವರ್ಷಗಳ ಹಿಂದೆ ಇದೇ ಪ್ಲಾಟ್‌ಫಾರ್ಮಿನಲ್ಲಿ ನಾವಿಬ್ಬರೂ ಸಂಧಿಸಿದ್ದೆವು" ಮೂರ್ತಿಯ ಅಂತರಾಳವನ್ನು ಕೆದಕುವವನಂತೆ ನೋಡಿದ ಗೋಪಾಲ.

ಮೂರ್ತಿಯ ಬೆನ್ನಿನಲ್ಲಿ ಚಳುಕು ಹೊಡೆದಂತಾಯಿತು.

"ನೆನಪಾಗಲಿಲ್ಲವೇ? ಇನ್ನೊ ಸ್ವಲ್ಪ ಜ್ಞಾಪಕ ಮಾಡಿಕೊಡಲೇನು?"

ಮೂರ್ತಿ ಬೆದರುಗಣ್ಣುಗಳಿಂದ ಪಕ್ಕಕ್ಕೆ ನೋಡಿದ. ರಂಗನಾಥ ಅಲ್ಲಿರಲಿಲ್ಲ. ದೂರದ ಬುಕ್ ಸ್ಟಾಲ್ ಬಳಿ ನಿಂತಿದ್ದ.

"ನೀವು ನನ್ನನ್ನು ಯಾರೋ ಅಂದುಕೊಂಡಂತಿದೆ. ನಾನು ಇದಕ್ಕೆ ಮೊದಲು ನಿಮ್ಮನ್ನೆಲ್ಲಿಯೂ ನೋಡಿಲ್ಲ." ಎಂದ ತನ್ನ ಕಳವಳವನ್ನು ಹತ್ತಿಕ್ಕಿಕೊಳ್ಳುತ್ತಾ.

"ನಿಮ್ಮ ಹೆಸರು ಮೂರ್ತಿ ಅಲ್ಲವೇನು? ಆಗ್ಗೂ ಈಗ್ಗೂ ನಿಮ್ಮಲ್ಲಿ ಹೆಚ್ಚು ಬದಲಾವಣೆಯೇನೂ ಆಗಿಲ್ಲ. ನಾನು ತುಂಬಾ ಬದಲಾಯಿಸಿರುವುದರಿಂದ ನಿಮಗೆ ಗುರ್ತು ಸಿಗಲಿಲ್ಲವೇನೋ.

"ಉಹುಂ. ನನ್ನ ಹೆಸರು ಮೂರ್ತಿ ಅಲ್ಲ. ಮಾಧವರಾವ್ ನನ್ನ ಹೆಸರು" ಎಂದ ಮೂರ್ತಿ ಪಾಠ ಒಪ್ಪಿಸುವವನಂತೆ.

ಗೋಪಾಲ ಆಶ್ಚರ್ಯದಿಂದ ಮೂರ್ತಿಯ

ಕಡೆ ನೋಡಿದ. ಮೂರ್ತಿ ಮತ್ತೊಂದು ಕಡೆ ದೃಷ್ಟಿ ಹೊರಳಿಸಿದ.

"ನಾನೇ ತಪ್ಪು ತಿಳಿದಿರಬಹುದು. ಒಬ್ಬರ ಹೋಲಿಕೆಯಂತೆಯೇ ಇನ್ನೊಬ್ಬರಿರಬಹುದು" ಎಂದ ಆಲೋಚನಾ ಮಗ್ನನಾಗಿ.

"ಹೌದು. ಆಗಾಗ ಅಥರಹ ಅಪಾರ್ಥ ಮಾಡಿಕೊಳ್ಳುವುದುಂಟು" ಎಂದ ಹಾಯಾಗಿ ಉಸಿರೆಳೆಯುತ್ತಾ ಮೂರ್ತಿ.

ಗೋಪಾಲ ನಕ್ಕ.

ಆ ನಗು ಗೋಪಾಲನ ಅಂತರ್ಯವನ್ನು ಕಲಕಿತು.

"ರೈಲು ಬರೋಕೆ ಇನ್ನೂ ಸಮಯವಿದೆ. ಕಾಫೀ ಕುಡಿಯೋಣ ಬರುತ್ತೀರೇನು?"

"ಉಹುಂ. ನೀವು ಕುಡಿಯಿರಿ. ನಾನೂ ನನ್ನ ಸ್ನೇಹಿತ ಈಗ ತಾನೇ ಕುಡಿದು ಬಂದೆವು." ಎಂದ ಮೂರ್ತಿ.

"ಸುಮ್ಮನೆ ಮರ್ಯಾದೆಗೆ ಕರೆದೆ ಅಷ್ಟೆ. ನನ್ನ ಹತ್ತಿರ ಅಷ್ಟು ದುಡ್ಡೂ ಇಲ್ಲ. ನಾನು ಕಾಫೀ ಕುಡಿದು ಬರುತ್ತೀನಿ" ಎಂದು ರೆಸ್ಟೋರೆಂಟಿನ ಕಡೆ ಹೊರಟ ಗೋಪಾಲ.

"ಮತ್ತೆ ಬರುತ್ತಾನೇನೋ! ಅಷ್ಟರಲ್ಲಿ ತಾನು ಹೊರಟು ಹೋದರೆ? ಆದರೆ ರಂಗನಾಥ ಏನೆಂದುಕೊಳ್ಳಬಹುದು." ಮೂರ್ತಿಯ ಮನಸ್ಸಿನಲ್ಲಿ ಪರಿಪರಿಯಾದ ಆಲೋಚನೆಗಳು ಬಂದು ಹೋದುವು.

ಅವನೇನೂ ತನ್ನನ್ನು ಗುರ್ತಿಸಲಿಲ್ಲವಲ್ಲಾ. ಹೆದರಿಕೆಯೇನು ಬಂತು? ಎಂದು ತನ್ನನ್ನು ತಾನು ಸಮಾಧಾನಪಡಿಸಿಕೊಂಡ.

ಹೇಗಿದ್ದವನು ಹೇಗಾಗಿ ಬಿಟ್ಟಿದ್ದಾನೆ? ಏನು ಜೋರಾಗಿದ್ದ ಅವತ್ತು! ಎಷ್ಟು ನೀಟಾಗಿ ಡ್ರೆಸ್ ಮಾಡಿಕೊಂಡಿದ್ದ! ದುರ್ವ್ಯಸನಗಳಿಗೆ ದಾಸರಾದವರ ಗತಿ ಎಂದಿಗಾದರೂ ಇಷ್ಟೇ.



ಆ ದಿನ...

ಐದು ವರ್ಷಗಳ ಹಿಂದೆ ನಡೆದ ವಿಷಯು... ತಾನು ತನ್ನ ಅಂತರಾತ್ಮದ ಕತ್ತು ಹಿಸುಕಿ ಒಳಗೇ ಗುಪ್ತವಾಗಿರಿಸಿಕೊಂಡ ಆ ದಿನ... ಮತ್ತೆ ಈಗ ಕಣ್ಣಮುಂದೆ ಬಂದು ನಿಂತು ವಿಕಟವಾಗಿ ನಕ್ಕಂತಾಯಿತು.

"ಲೋ ನಾಲ್ಕು ಸಾವಿರ ಭದ್ರವಾಗಿರಿಸಿಕೋ. ಮಾವನಿಗೆ ಕೊಟ್ಟು ಬಾ. ರೈಲಿನಲ್ಲಿ ನಿದ್ದೆ ಮಾಡಬೇಡ. ಮೊದಲೇ ಕಾಲ ಚೆನ್ನಾಗಿಲ್ಲ." ಎಂದು ಬಾರಿ ಬಾರಿಗೂ ಹೇಳುತ್ತಿದ್ದ ತಂದೆಯ ಮಾತು ಬೇಸರ ತರಿಸಿತ್ತು ಮೂರ್ತಿಗೆ.

ಮೊದಲೇ ಅಷ್ಟು ದುಡ್ಡು ಕೈಯಲ್ಲಿಟ್ಟುಕೊಂಡು ಪ್ರಯಾಣ ಮಾಡಬೇಕಲ್ಲಾ ಎಂದು ಒಳಗೊಳಗೇ ಅಂಜಿಕೆಯೆನಿಸತ್ತು. ಜತೆಗೆ ತಂದೆ ಬೇರೆ ಹೀಗೆ ಬಾರಿ ಬಾರಿಗೂ ಎಚ್ಚರಿಕೆ ಹೇಳುತ್ತಿದ್ದುದು ಅವನಿಗೆ ಸ್ವಲ್ಪವೂ ಸರಿ ಬಂದಿರಲಿಲ್ಲ.

"ಸರಿ, ಹಾಗೇ ಆಗಲಿ. ಇನ್ನು ನೀನು ಮನೆಗೆ ಹೋಗು."

"ಏನವಸರ? ಬಸ್ ಬರಲಿ. ಹೋಗ್ತೀನಿ." ಮೂರ್ತಿ ಹುಬ್ಬು ಗಂಟಿಕ್ಕಿ ಸುಮ್ಮನಾದ.

"ರೈಲಿನಲ್ಲಿ ಹುಷಾರು"

"ಅಬ್ಬಬ್ಬ, ಇನ್ನು ಸಾಕು, ಸುಮ್ಮನಿರಪ್ಪ" ಎಂದು ತಮ್ಮನ್ನು ಯಾರಾದರೂ ಗಮನಿಸುತ್ತಿದ್ದಾರೇನೋ ಎಂದು ಮೂರ್ತಿ ಸುತ್ತಲೂ ನೋಡಿದ. ಯಾರೂ ಇವರ ಕಡೆ ನೋಡುತ್ತಿರಲಿಲ್ಲ. ಅವರವರ ಕೆಲಸದಲ್ಲಿ ಅವರಿದ್ದರು. ಸ್ವಲ್ಪ ದೂರದಲ್ಲಿ ಟ್ರಿಮ್ಮಾಗಿ ಡ್ರೆಸ್ ಮಾಡಿಕೊಂಡಿದ್ದ ಯುವಕನೊಬ್ಬ ಮೂರ್ತಿಯ ಕಡೆ ನೋಡಿದ. ಮೂರ್ತಿಗೆ ಹೆದರಿಕೆಯಾಯಿತು. ಅವನೇಕೆ ತನ್ನ ಕಡೇನೇ ನೋಡುತ್ತಿದ್ದಾನೆ? ಏಕಿರಬಹುದು? ಅಪ್ಪ ಹೇಳಿದ್ದನ್ನ ಅವನು ಕೇಳಿರಲಾರ ತಾನೇ ಎಂದುಕೊಂಡ.

ಬಸ್ ಬಂತು. ಮೂರ್ತಿ ಬಸ್ಸುಹತ್ತಿ ಕುಳಿತ. ತಂದೆ ಮತ್ತೊಂದು ಸಲ ಎಚ್ಚರಿಕೆಯ ಮಾತುಗಳನ್ನು ಹೇಳಿ ಹೊರಟುಹೋದರು. ಮೂರ್ತಿ ಕೋಟಿನೊಳಗಿನಿಂದ ಕೈ ಹಾಕಿ ಷರ್ಟಿನ ಮೇಲ್ಭಾಗದಲ್ಲಿ ಕೈಯಿಟ್ಟು ಬನೀನಿನ ಜೇಬು ತಡವಿ ನೋಡಿಕೊಂಡ.

ಬನೀನಿನ ಜೇಬಿನಲ್ಲಿ ನಾಲ್ಕು ಸಾವಿರ ಹಣ ಇಟ್ಟು ಪಿನ್ನು ಹಾಕಿದ್ದ. ಷರ್ಟಿನ ಮೇಲಿಂದ ಉಬ್ಬಿದಂತೆ ಕಾಣುತ್ತದೆಯೆಂದು ಕೋಟು ಹಾಕಿಕೊಂಡಿದ್ದ. ಇಷ್ಟು ಜಾಗ್ರತೆ ವಹಿಸಿದ್ದರೂ ಅವನಿಗೆ ಹೆದರಿಕೆಯಾಗಿಯೇ ಇತ್ತು. ಜೇಬುಗಳ್ಳರ ಪ್ರಾವೀಣ್ಯವನ್ನು ಕುರಿತು ಬಹಳವಾಗಿ ಕೇಳಿದ್ದ ಅವನು.

"ಯಾವೂರಿಗೆ, ಹೊರಟಿದೀರಾ?" ಪಕ್ಕಕ್ಕೆ ತಿರುಗಿ ನೋಡಿದ ಮೂರ್ತಿ ದೆವ್ವನನ್ನು ಕಂಡವನಂತೆ ಬೆಚ್ಚಿ ಬಿದ್ದ. ಅವನ ಜಂಘಾಬಲವೇ ಉಡುಗಿ ಹೋದಂತಾಗಿತ್ತು.... ಬಸ್ ಸ್ಟಾಂಡಿನಲ್ಲಿ ತನ್ನನ್ನು ಗಮನಿಸುತ್ತಾ ನಿಂತಿದ್ದ ಯುವಕ ಅವನು. ತನ್ನ ಹತ್ತಿರ ಹೆಚ್ಚು ಹಣ ಇದೆ ಅಂತ ತಿಳಿದುಬಿಟ್ಟದೆ ಅವನಿಗೆ, ಅದಕ್ಕೆ ಹತ್ತಿರ ಸೇರಿದಾನೆ. ಎಂದುಕೊಂಡ ಮೂರ್ತಿ.

"ಏನು ಸ್ವಾಮಿ, ಎಲ್ಲಿಯುವರೆಗೆ ನಿಮ್ಮ ಪ್ರಯಾಣ?".

"ಒಂಗೋಲಿಗೆ ಹೋಗಬೇಕು, ಹೈದ್ರಾಬಾದ್– ಮದ್ರಾಸ್ ಎಕ್ಸ್‌ಪ್ರೆಸ್‌ನಲ್ಲಿ" ಎಂದ ಮೂರ್ತಿಗೆ ತಾನು ನಿಜ ಹೇಳಬಾರದಾಗಿತ್ತೇನೋ ಎನ್ನಿಸಿತು.

"ನಾನು ಗೂಡೂರಿಗೆ ಹೋಗಬೇಕು-ಸದ್ಯ ಜತೆ ಸಿಕ್ಕಿತು. ಬೋರ್ ಹೊಡೆಯದೆ ಹರಟೆ ಹೊಡೆಯುತ್ತಾ ಪ್ರಯಾಣ ಮಾಡ-ಬಹುದು" ಎಂದ ಆ ವ್ಯಕ್ತಿ.

ಸಂದೇಹವೇ ಇಲ್ಲ. ಇವನು ತನ್ನ ಬಳಿ ಬೇಕೆಂದೇ ಬಂದು ಕುಳಿತಿದ್ದಾನೆ. ಅಯ್ಯೋ ದೇವರೇ, ಇವನಿಂದ ನನ್ನನ್ನು ರಕ್ಷಿಸುವ ಭಾರ ನಿನ್ನದೇ ಎಂದು ಮೂರ್ತಿ ಮನಸ್ಸಿ-ನಲ್ಲಿಯೇ ಬೇಡಿಕೊಂಡ ಆ ವ್ಯಕ್ತಿ ಏನೇನೊ ಮಾತನಾಡುತ್ತಲೇ ಇದ್ದ. ಮೂರ್ತಿ ಸುಮ್ಮನೆ ಕಾಟಾಚಾರಕ್ಕೆ ಆ... ವೂ... ಎಂದು ಜವಾಬು ಕೊಡುತ್ತಾ ಕಾಲ ಕಳೆದ.

ಇಬ್ಬರೂ ಬಸ್ಸಿನಿಂದಿಳಿದರು.

ಆ ವ್ಯಕ್ತಿ ರಿಕ್ಷಾ ಕೂಗಿದ. ಮೂರ್ತಿ ಬೇರೆ ರಿಕ್ಷಾ ಕೂಗುತ್ತಿದ್ದುದನ್ನು ಕಂಡು,

"ಯಾಕೆ ದಂಡ, ಬನ್ನಿ, ಒಂದೇ ರಿಕ್ಷಾದಲ್ಲಿ ಹೋಗೋಣ." ಎಂದು ಬಲವಂತ ಪಡಿಸಿದ.

ಮೂರ್ತಿಯ ಎದೆ ಡವಡವನೆ ಬಡಿದು ಕೊಂಡಿತು. ಜೇಬು ಕತ್ತರಿಸುವ ಪ್ರಯತ್ನ ದಲ್ಲಿಯೇ ಇದಾನೆ, ಕಳ್ಳ ಬಡ್ಡೀ ಮಗ. ಮೇಲೆ ನೋಡಲು ಎಷ್ಟು ಮರ್ಯಾದಸ್ಥ ನಂತೆ ಸೋಗು ಹಾಕಿದಾನೆ ಎಂದು ಕೊಳ್ಳುತ್ತಲೇ ರಿಕ್ಷಾ ಹತ್ತಿದ.

"ನಿಮ್ಮ ಹೆಸರು?" ರಿಕ್ಷಾದಲ್ಲಿ ಕುಳಿತು ಕೇಳಿದ ಆ ವ್ಯಕ್ತಿ.

"ಮೂರ್ತಿ"

"ನನ್ನ ಹೆಸರು ಗೋಪಾಲ" "ಮೂರ್ತಿ ಕೇಳದಿದ್ದರೂ ತಾನೇ ಹೇಳಿದ.

ಕಳ್ಳರು ನಿಜವಾದ ಹೆಸರನ್ನು ಹೇಳ್ತಾರೆಯೇ? ಇದೊಂದು ಸುಳ್ಳು ಹೆಸರೇ ಆಗಿರಬೇಕು. ಕಳ್ಳ... ಮಗ. ಮೂರ್ತಿಯ ಆಲೋಚನೆಯನ್ನು ಕಡಿಯುತ್ತಾ, "ಮೊದಲೇ ಸೆಕೆ, ಆ ಕೋಟು ತೆಗೆದು ಕೈಯಲ್ಲಿ ಹಿಡಿದು ಕೊಳ್ಳಬಾರದೆ ?" ಎಂದ ಗೋಪಾಲ

"ಅಬ್ಬಾ ಕಳ್ಳ ರಾಸ್ಕಲ್. ಜೇಬು ಕತ್ತರಿಸೋಕೆ ನಿಂಗೆ ಕೋಟು ಅಡ್ಡ ಬಂತೇನೋ? ನಂಗಷ್ಟೂ ಗೊತ್ತಾಗೋಲ್ಲವೆ? ನಾನು ಸತ್ತರೂ ಕೋಟು ಬಿಚ್ಚೊಲ್ಲ." ಎಂದು ಮನಸಿನಲ್ಲಿ ಅಂದುಕೊಂಡೂ ಮೇಲೆ ಮಾತ್ರ "ನನಗೇನೂ ಸೆಕೆಯಾಗುತ್ತಿಲ್ಲ ಬಿಡಿ" ಎಂದ ಮೂರ್ತಿ.

ಗೋಪಾಲ ಒಂದು ಕ್ಷಣ ವಿಸ್ಮಯದಿಂದ ಮೂರ್ತಿಯ ಕಡೆ ನೋಡಿದ.

ಆ ಕಳ್ಳ ನೋಟ ನೋಡು, ತನ್ನ ಬಲೇಲಿ ಬೀಳ್ಲಿಲ್ಲಾಂತ ಚಿಂತೆ ಎಂದು ತನ್ನ ಜಾಣತನವನ್ನು ತಾನೇ ಮೆಚ್ಚಿಕೊಂಡ ಮೂರ್ತಿ.

ಇಬ್ಬರೂ ರಿಕ್ಷಾ ಇಳಿದರು.

ರಿಕ್ಷಾದವನಿಗೆ ಕೊಡಬೇಕಾದ ದುಡ್ಡಿನಲ್ಲಿ ಅರ್ಧ ಮೂರ್ತಿ ಕೊಡ ಹೋದರೆ "ಇರಲಿ ತೀನಿ" ಎಂದ ನಗುತ್ತಾ ಗೋಪಾಲ.

ಮೂರ್ತಿಗೆ ಚಾಟಿಯಿಂದ ಹೊಡೆದಂತಾಯಿತು. "ಎಲಾ ಇವನ, ಬಡ್ಡಿ ಸಹಿತ ವಸೂಲು ಮಾಡ್ತೀನೀಂತ ಎಷ್ಟು ಧೈರ್ಯವಾಗಿ ಹೇಳ್ತಿದಾನೆ! ಸಂದೇಹವಿಲ್ಲ, ಇವನು ನಯವಂಚಕ. ಒಳ್ಳೇ ಮಾತಿನಿಂದ ನನ್ನನ್ನ ಬುಟ್ಟಿಗೆ ಹಾಕಿಕೊಂಡು ಹಣ ಹೊಡೆದು ಬಿಡೋಣ ಅಂತ ಪ್ಲಾನು" ಮೂರ್ತಿ ಕೋಟಿನ ಕೆಳಗೆ ಷರ್ಟಿನ ಮೇಲ್ಭಾಗವನ್ನು ಮುಟ್ಟಿ ನೋಡಿಕೊಂಡು ಹಾಯಾಗಿ ಉಸಿರೆಳೆದ.

ಕೌಂಟರ್ ಬಳಿ ಇಬ್ಬರೂ ನಿಂತುಕೊಂಡರು ಗೋಪಾಲ ಮುಂದೆ ನಿಂತಿದ್ದ. ಟಿಕೆಟ್ ಕೊಂಡು 'ನಡೆಯಿರಿ ಹೋಗೋಣ' ಎಂದ.

"ಟಿಕೆಟ್..."

"ನಾನು ತಗೊಂಡಿದೀನಿ"

ಎಷ್ಟು ವೇಷ ಹಾಕ್ತಿದಾನೋ ನಂಬಿಸೋಕೆ; ಎಷ್ಟೊ ದಿನಗಳಿಂದ ಪರಿಚಯ ಇರೋರ ಹಾಗೆ ಮಾಡ್ತಿದಾನೆ! ಇವನ ಚಾಲಾಕು ನನ್ನ ಹತ್ತಿರಾನೇ? ನನ್ನ ಹುಷಾರಿನಲ್ಲಿ ನಾನಿದ್ದರೆ ಸರಿ ಎಂದುಕೊಳ್ಳುತ್ತಾ ಕೋಟಿನ ಜೇಬಿನಲ್ಲಿ ಬೇರೆಯಾಗಿ ಇಟ್ಟುಕೊಂಡಿದ್ದ. ಹಣದಿಂದ ಲೆಕ್ಕ ಮಾಡಿ ತನ್ನ ಟಿಕೆಟ್ಟಿನ ಹಣ ಕೊಟ್ಟು ಬಿಟ್ಟ– ಬೇಡವೆಂದರೂ ಕೇಳದೆ.

ರೈಲು ಒಂದು ಗಂಟೆ ತಡವಾಗಿ ಬರುತ್ತದೆಯೆಂದು ತಿಳಿಯಿತು. ಕನಿಷ್ಟ ಪಕ್ಷ ಇನ್ನು ಮೂರು ಗಂಟೆಗಳನ್ನಾದರೂ ರೇಲ್ವೆ ಸ್ಟೇಶನ್ನಿನಲ್ಲಿ ಕಳೆಯಬೇಕು.

"ಅಷ್ಟು ಹೊತ್ತು ಇಲ್ಲಿ ಕುಳಿತು ಮಾಡೋದೇನು ? ಬನ್ನಿ. ಟೀ ಕುಡಿದು ಬರೋಣ" ಎನ್ನುತ್ತಾ ಗೋಪಾಲ ಸ್ಟೇಶನ್ನಿಗೆ ಎದುರಾಗಿದ್ದ ಬಾರ್ ಕಡೆ ಹೆಜ್ಜೆಹಾಕಿದ. ಮೂರ್ತಿಗೆ ಇಷ್ಟವಿಲ್ಲದಿದ್ದರೂ ವಿಧಿಯಿಲ್ಲದೆ ಅವನನ್ನು ಹಿಂಬಾಲಿಸಿದ.

"ಏನ್ಸಾರ್, ಈ ನಡುವೆ ಕಾಣಿಸಲೇ ಇಲ್ಲ." ಬೇರರ್ ನಗುತ್ತಾ ಗೋಪಾಲನನ್ನು ಪ್ರಶ್ನಿಸಿದ.

ಈ ಕಡೆ ಬಂದು. ಎರಡು ಟೀ, ಸ್ಪೆಷಲ್" ಎಂದ ಗೋಪಾಲ್.

ಮೂರ್ತಿಗೆ ಆಲೋಚನೆಗಿಟ್ಟುಕೊಂಡಿತು. ಈ ಬೇರರೂ, ಇವನೂ ಸೇರಿ ತನ್ನನ್ನೇನಾದರೂ ಮಾಡಿದರೆ! ಆದರೂ ಸುತ್ತಲೂ ಜನ ಇದ್ದಾರೆ, ಪಬ್ಲಿಕ್ಕಾಗಿ ಏನು ಮಾಡಿಯಾರು ಎಂದು ಧೈರ್ಯ ತಂದುಕೊಂಡ.

"ಸಿಗರೇಟ್ ಸೇದುತ್ತೀರಾ ?" ಸೇದಬೇಕೆಂದಿದ್ದರೂ ಬೇಡ ಎಂದ ಮೂರ್ತಿ. ಇವನನ್ನು ನಂಬಿದವರು ಯಾರು, ಆ ಸಿಗರೆಟ್ಟಿನಲ್ಲಿ ಏನಾದರೂ ಮತ್ತು ತರಿಸುವ ಪದಾರ್ಥ ಇಟ್ಟಿದ್ದರೆ ?

ಬೇರರ್ ಟೀ ತಂದು ಇಬ್ಬರ ಮುಂದೆಯೂ ಇಟ್ಟ,

"ಸ್ಪೆಷಲ್ !" ಎಂದ ಗೋಪಾಲ.

ಬೇರರ್ ನಕ್ಕ.

ಕೋಡ್ ಭಾಷೆ ಇದ್ದಂತಿದೆ. ತನ್ನ ಮುಂದಿರುವ ಕಪ್ಪಿನಲ್ಲಿ ಏನೋ ಕಲಸಿರಬಹುದು.

ಗೋಪಾಲ ಬೇರರ್‌ನೊಂದಿಗೆ ಮಾತನಾಡುತ್ತಿರುವ ಸಮಯ ಸಾಧಿಸಿ, ತನ್ನ ಕಪ್ಪನ್ನು ಅವನ ಮುಂದಕ್ಕೆ ಸರಿಸಿ, ತಾನು ಎರಡನೆಯದನ್ನು ತೆಗೆದುಕೊಂಡ.

"ಕುಡಿಯಿರಿ, ಸ್ಪೆಷಲ್ ಟೀ" ಎಂದ ಗೋಪಾಲ, ನಗುತ್ತಾ.

ತಾನು ಟೀ ಬಟ್ಟಲುಗಳನ್ನು ಬದಲಾಯಿಸಿದ್ದನ್ನು ಗಮನಿಸಲಿಲ್ಲ ತಾನೇ ಅವನು !

ಗೋಪಾಲ ತನ್ನ ಮುಂದಿದ್ದ ಬಟ್ಟಲನ್ನು ತೆಗೆದುಕೊಂಡು ಟೀ ಕುಡಿಯತೊಡಗಿದಾಗ, ಮೂರ್ತಿ ಬೆರಗುಗಣ್ಣುಗಳಿಂದ ಅವನ ಕಡೆ ನೋಡುತ್ತಿದ್ದ.

"ಮದುವೆ ಆಗಿದೆಯೇ ?"

"ಹೂಂ. ಒಂದು ಗಂಡು ಮಗು. "ಹೆಂಡತಿ ಮಕ್ಕಳನ್ನು ನೆನಸಿಕೊಳ್ಳುತ್ತಾ ಉತ್ಸಾಹದಿಂದ ಹೇಳಿದ ಮೂರ್ತಿ.

"ಕೆಲಸದಲ್ಲಿದೀರಾ ?"

"ಇಲ್ಲ, ಬಿ. ಎ. ಮುಗಿಸಿ ವ್ಯವಸಾಯ ಮಾಡುತ್ತಿದ್ದೇನೆ."

"ಬಂಗ್ಲೋರಿಗೆ ಕೆಲಸದ ಮೇಲೆ ಹೋಗುತ್ತಿದೀರೇನು ?"

"ಸಂತೆಯಲ್ಲಿ ಎತ್ತುಗಳನ್ನು ಕೊಳ್ಳಲು ಹೋಗುತ್ತಿದೇನೆ". ಎಂದು ಗಂಟಲವರೆಗೂ ಬಂದ ಮಾತನ್ನು ನುಂಗಿ "ಇಲ್ಲ. ನಮ್ಮ ಮಾವನಿಗೆ ಮೈ ಸರಿಯಿಲ್ಲ, ನೋಡಿ ಬರಲು ಹೋಗುತ್ತಿದ್ದೇನೆ" ಎಂದ.

"ನಿಮಗೆ ಮದುವೆಯಾಗಿದೆಯೇ?" ಮೂರ್ತಿ ಮೊದಲ ಸಲ ಗೋಪಾಲನನ್ನು ಪ್ರಶ್ನಿಸಿದ್ದ.

"ಆಗಿದೆ. ಒಬ್ಬ ಲಕ್ಷಾಧಿಕಾರಿಯ ಮಗಳನ್ನು ಪ್ರೀತಿಸಿ ಕರೆತಂದು ರಿಜಿಸ್ಟರ್ ಮದುವೆ ಮಾಡಿಕೊಂಡೆ."

ಮೂರ್ತಿ ಗೋಪಾಲನ ಕಡೆ ತಿರಸ್ಕಾರದ ದೃಷ್ಟಿ ಬೀರಿದ. "ನೀನು ಅಂಥ ಕೆಲಸ ಮಾಡಿದ್ದರೆ ಹೆಚ್ಚಲ್ಲ" ಎಂಬಂತೇ

"ನಾನು ಬ್ಯಾಂಕಿನಲ್ಲಿ ಕೆಲಸ ಮಾಡುತ್ತಿದೀನಿ."

ಆಹಾ, ಎಷ್ಟು ಕಪಟನಾಟಕ ! ಕೇಳದೇನೇ ಹೇಳ್ತಿದಾನೆ. ಬ್ಯಾಂಕಿನಲ್ಲಿ ಕೆಲಸವಂತೆ. ಅಂದರೆ ಇಂತಹ ಸಾವಿರಗಟ್ಟಲೆ ಹಣಾನ ತಾನು ದಿನಾ ನೋಡ್ತಾನೇ ಇರುತ್ತೀನಿ. ನನಗದೊಂದು ಲೆಕ್ಕವೇ ಇಲ್ಲ ಅಂತ ನನ್ನನ್ನ ಇಂಪ್ರೆಸ್ ಮಾಡೋಕೆ ಪ್ರಯತ್ನಿಸ್ತಿದ್ದಾನೆ ಇವನ ಮನೆ ಹಾಳಾಗ. ನಾನಾಗಿದ್ದಕ್ಕೆ ಸರಿಹೋಯಿತು. ಇನ್ಯಾರಾದರೂ ಆಗಿದ್ದರೆ ಇವನ ಬುಟ್ಟೀಲಿ ಬಿದ್ದಿರೋರು.

"ಏನು ಆಲೋಚಿಸುತ್ತಿದೀರಿ ?"

ಮೂರ್ತಿ ಬೆಚ್ಚಿದ. ಅವನ ಕೈಯಲ್ಲಿದ್ದ ಟೀ ಕಪ್ಪು ತುಳುಕಿ ಕೈಮೇಲೆ ಬಿದ್ದು ಚುರಕ್ಕೆನ್ನಿಸಿತು.

"ಬೆವರು ಸುರೀತಿದ್ರೂ ಆ ಕೋಟು ಬಿಚ್ಚುಲ್ಲವಲ್ಲಾ ನೀವು. ನಿಮ್ಮನ್ನು ನೋಡಿದರೆ ಅಯ್ಯೋ ಅನ್ನಿಸುತ್ತೆ ನನಗೆ."

"ಅನ್ನಿಸುತ್ತಪ್ಪಾ. ಅನ್ನಿಸುತ್ತೆ. ಯಾಕನ್ನಿಸೊಲ್ಲ. ನಾನು ಕೋಟು ಬಿಚ್ಚಿದರೆ ಸಾಕು ಅಂತ ನೀನು ಕಾದಿರೋದು ನಂಗೊತ್ತಿಲ್ಲವಾ?" ಎಂದು ಮನಸಿನಲ್ಲಿಯೇ ಅಂದುಕೊಂಡ ಮೂರ್ತಿ.

"ನಿಮಗೆ ಡ್ರಿಂಕ್ಸ್ ಅಭ್ಯಾಸ ಇದೆಯೇ ?"

"ಅರೆ ನಿನ್ನ ಬುದ್ಧಿನೇ ! ಕೊನೆಗೆ ನನಗೆ ಕುಡಿಸಿ ಮೋಸ ಮಾಡೋಣ ಅಂದ್ಕೊಂಡ್ಯಾ. ನಿನ್ನ ಬಲೇಲಿ ಬೀಳೊಲ್ಲ ನಾನು," ಅಂದು ಕೊಂಡ ಮೂರ್ತಿ ತನಗೆ ಕುಡಿಯ ಬೇಕೆನಿಸಿದ್ದರೂ "ಇಲ್ಲರೀ. ನನಗಭ್ಯಾಸವಿಲ್ಲ" ಎಂದ.

"ನನಗೆ ಕೆಟ್ಟ ಅಭ್ಯಾಸಗಳೊಂದೂ ಇಲ್ಲ" ಹೆಮ್ಮೆಯಿಂದ ಹೇಳಿಕೊಂಡ ಮೂರ್ತಿ.

"ನನಗೆ ಎಲ್ಲಾ ಕೆಟ್ಟ ಅಭ್ಯಾಸಗಳೂ ಇವೆ. ಕುಡೀತೀನಿ. ಅವಕಾಶವಿದ್ದ ಕಡೆ ಹೆಂಗಸನ್ನೂ ಬಿಡೋಲ್ಲ. ನನ್ನ ಹೆಂಡತಿಯನ್ನು ಮಾತ್ರ ಇನ್ನೊಬ್ಬರೊಡನೆ ತಿರುಗಾಡಲು ಸುತರಾಂ ಒಪ್ಪಿಕೊಳ್ಳೊಲ್ಲ. ನಿಮ್ಮ ಹಾಗೆ ಬರೀ ಒಳ್ಳೆಯ ಅಭ್ಯಾಸಗಳಿಂದ ಜನ ಹೇಗೆ ಬದುಕುತ್ತಾರೋ ಅರ್ಥವೇ ಆಗೋಲ್ಲ ನಂಗೆ. ಹಿಂದಿನದನ್ನು ನೆನೆಯುವುದಾಗಲೀ, ಮುಂದಿನದನ್ನು ಕುರಿತು ಆಲೋಚಿಸುವುದಾಗಲೀ ಸರಿ ಬರದು ನನಗೆ. ವರ್ತಮಾನದಲ್ಲಿ ಬದುಕುವುದೇ ನನ್ನ ಗುರಿ. ಪ್ರತಿ ಕ್ಷಣವನ್ನೂ ನಾನು ಎಂಜಾಯ್ ಮಾಡ್ತೀನಿ. ಅದು ನನ್ನ ಸ್ವಭಾವ" ವಿಸ್ಕಿ ಗ್ಲಾಸು ಖಾಲಿ ಮಾಡುತ್ತಾ ಹೇಳಿದ ಗೋಪಾಲ.

"ಸಿಕ್ಕಾಪಟ್ಟೆ ಕುಡಿಲಿಕ್ಕೆ ಹತ್ತಿದ್ದಾನಲ್ಲಾ, ಆ ಪಾಪಿ ದುಡ್ಡಿದೆಯೇ ಇವನ ಹತ್ತಿರ ?" ಮೂರ್ತಿ ಆಲೋಚಿಸುತ್ತಾ ಗೋಪಾಲನನ್ನು ಗಮನಿಸುತ್ತಿದ್ದ. ಕಣ್ಣು ವಿಸ್ಕಿಯ ಪ್ರಭಾವಕ್ಕೊಳಗಾಗಿ ಅರೆಮುಚ್ಚಿಕೊಂಡಿದ್ದುವು. ಮುಖ ಕೆಂಪಾಗಿತ್ತು.

ಇದೂ ಒಳ್ಳೇದಕ್ಕೇ, ಇನ್ನೊಂದು ಗ್ಲಾಸು ಕುಡಿದಾ ಅಂದ್ರೆ ಅವನ ಗತಿ ಮುಗೀತೊಂತ್ಲೆ ಲೆಕ್ಕ. ನಮ್ಮ ಜ್ಞಾನದಲ್ಲಿರೊಲ್ಲ. ನನ್ನ ಪಾಡಿಗೆ ನಾನು ಹೊರಟು ಹೋಗಬಹುದು ಎಂದು ಕೊಂಡ ಮೂರ್ತಿ.

ಗೋಪಾಲ ತೊದಲುತ್ತಿದ್ದ "ನನ್ನವಳು... ನನ್ನ ಹೆಂಡತಿ... ತುಂಬಾ ಒಳ್ಳೇವಳು. ನನಗೋಸ್ಕರ ಕುಲ, ಸಂಪತ್ತು... ಎಲ್ಲಾ ಬಿಟ್ಟು ಬಂದ್ಲು. ನಾನು ಏನು ಮಾಡಿದ್ರೂ ಸಹಿಸ್ತಾಳೆ."

ಇವನ ಕೆಲಸ ಮುಕ್ಕಾಲು ಭಾಗ ಮುಗಿದಂತೆಯೇ, ಇನ್ನೊಂದು ಗ್ಲಾಸು ಕುಡಿಸಿದರೆ ಸಾಕು ಎಂದುಕೊಂಡ ಮೂರ್ತಿ" ಇನ್ನೊಂದು ಗ್ಲಾಸು ಕುಡಿತೀರೇನು ? ದುಡ್ಡಿಂದೇನೂ ಯೋಚಿಸಬೇಡಿ. ನನ್ನ ಹತ್ತಿರ ಇದೆ ಕೊಡ್ತೀನಿ" ಎಂದ ಮೂರ್ತಿ ಉತ್ಸಾಹದಿಂದ.

ಗೋಪಾಲ ಕಣ್ಣೆತ್ತಿ ಮೂರ್ತಿಯ ಕಡೆ ನೋಡಿ "ದುಡ್ಡು ನನ್ನ ಹತ್ತಿರಾನೂ ಇದೆ ಮೂರು ಸಾವಿರಕ್ಕೆ ಮೇಲೇ ಇದೆ. ಇಷ್ಟು ಹಣ ಹತ್ತಿರ ಇಟ್ಟುಕೊಂಡು ಇವತ್ತು ಕುಡೀಬಾರದು ಅಂತಲೇ ಇದ್ದೆ. ಆದರೆ ಚಪಲ ತಡೀಲಾಗಲಿಲ್ಲ. ಈ ಅನುಭವ ಎಷ್ಟು ಸುಖ ಕೊಡುತ್ತೆ ಅಂತ ನಿಮ್ಮಂತಹವರಿಗೆ ಹೇಗೆ ಗೊತ್ತಾಗುತ್ತೆ ಬಿಡಿ. ನಿಮ್ಮನ್ನು ನೋಡಿದರೆ ಅಯ್ಯೋ ಪಾಪ ಅನ್ನಿಸುತ್ತೆ. ಕುಡಿಯೋದ್ರಿಂದ ಕೆಲವು ಕಷ್ಟ ನಷ್ಟಗಳೂ ಇಲ್ಲದಿಲ್ಲ. ಆಗಾಗ ವಾಚ್, ಪೆನ್ನು, ದುಡ್ಡು ಕಳೆದುಕೊಳ್ಳೋದೂ ಉಂಟು" ಎಂದ ಗೋಪಾಲ, ಬಲವಂತದಿಂದ ಕಣ್ಣು ಬಿಡಲು ಪ್ರಯತ್ನಿಸುತ್ತಾ.

ಇವನು ಸಾಮಾನ್ಯನಾದ ಕಳ್ಳನಲ್ಲ. ಪಕ್ಕಾ ಕದೀಮ. ನಯವಂಚನೆ ಚೆನ್ನಾಗಿ ಪ್ರಾಕ್ಟೀಸ್ ಮಾಡಿದಾನೆ. ತನ್ನ ಹತ್ತಿರ ಮೂರು ಸಾವಿರ ಇದೇಂತ ನನ್ನನ್ನ ನಂಬಿಸೋಕೆ ಪ್ರಯತ್ನಿಸುತ್ತಾ ಇದ್ದಾನೆ. 'ಲೋ ರಾಸ್ಕಲ್, ನೀನು ಕುಡಿದರೂ ಬುದ್ಧಿ ನಿನ್ನ ಕೈಯಲ್ಲೇ ಇಟ್ಟುಕೊಂಡಿದ್ದಿ. ಆದರೆ...ನಂಗೂ ಒಂದಿಷ್ಟು ಬುದ್ಧಿ ಕೊಟ್ಟಿದ್ದಾನೆ ದೇವರು. ಅಲ್ಲದೆ ನಾನು ಕುಡಿದಿಲ್ಲ ಕೂಡಾ!' ಮನಸ್ಸಿನಲ್ಲಿಯೇ ಹಲ್ಲು ಕಡಿದ ಮೂರ್ತಿ.

ಬೇರರ್ ಬಿಲ್ಲು ತಂದ. ಗೋಪಾಲ ಪರ್ಸು ತೆಗೆದು ನೂರರ ನೋಟೊಂದನ್ನು ಕೊಟ್ಟ.

ಓಹೋ, ಇವನ ಬಳಿ ನೂರರ ನೋಟೂ ಒಂದಿದೆ. ಯಾರ ಕಿಸೆ ಕತ್ತರಿಸಿದ್ನೋ!

ಬೇರರ್‌ಗೆ ಐದು ರೂಪಾಯಿ ಕೊಟ್ಟು ಗೋಪಾಲ ಎದ್ದು ನಿಂತ. ಕಾಲುಗಳು ಅವನ ಸ್ವಾಧೀನದಲ್ಲಿದ್ದಂತಿರಲಿಲ್ಲ. ಬೀಳುವಂತಾಗಿ ಕುರ್ಚಿಯನ್ನು ಆಸರೆಯಾಗಿ ಹಿಡಿದುಕೊಂಡ.

"ಮೂರ್ತಿ, ಈ ಪರ್ಸ ನಿಮ್ಮ ಹತ್ತಿರ ಇಟ್ಕೊಳ್ಳಿ. ಇದರಲ್ಲಿ ತುಂಬಾ ದುಡ್ಡಿದೆ. ನಾನು ಸ್ವಲ್ಪ ಮತ್ತಿನಲ್ಲಿದೀನಿ. ಚೆನ್ನಾಗಿ ನಿದ್ದೆ ಮಾಡಿಬಿಟ್ಟರೆ ಯಾರಾದರೂ ಕದಿಯುವ ಸಂಭವವುಂಟು." ಎಂದು ಪರ್ಸ್ ಮೂರ್ತಿಯ ಕೈಗೆ ಕೊಟ್ಟ.

ಮೂರ್ತಿ ಪರ್ಸ್ ತೆಗೆದುಕೊಂಡ. ಅದು ಭಾರವಾಗಿಯೇ ಇದ್ದಂತಿತ್ತು.

ಒಂದು ಕ್ಷಣ ಮೂರ್ತಿಗೆ ಅವನ ಮಾತಿನಲ್ಲಿ ಪ್ರಾಮಾಣಿಕತೆ ಇದ್ದಂತೆಯೇ ಅನ್ನಿಸಿತು.

ಮರುಕ್ಷಣ ಎಲ್ಲಾ ನಟನೆ. ತಾನು ಪರ್ಸ್ ಎಲ್ಲಿ ಇಟ್ಕೊಳ್ತೀನಿ ಅಂತ ತಿಳಿದು ಕೊಳ್ಳೋಕೆ ಹೂಡಿರೋ ನಾಟಕ. ತನ್ನ ಜೇಬುಗಳ ರಹಸ್ಯ ತಿಳಿಯಲು ಹೂಡಿರುವ ತಂತ್ರ. ಅಷ್ಟು ಮಟ್ಟಿಗೆ ಗ್ರಹಿಸಲಾರದ ಮೂರ್ಖನೇ ತಾನು! ಪರ್ಸ್ ಕೋಟಿನ ಜೇಬಿನಲ್ಲಿಯೇ ಇಟ್ಕೊಂಡರೆ ಸರಿ. ತನಗೆ ಬೇರೆ ಜೇಬೇ ಇಲ್ಲವೆಂದರಾಯಿತು. ಅಷ್ಟೂ ಅಲ್ಲದೆ ಈ ಪರ್ಸ್‌ನಲ್ಲಿ ಬರೀ ಕಾಗದಗಳೂ ಬಿಲ್ಲುಗಳ ಹೊರತು ನಿಜವಾಗಿ ಹಣ ಇರುವುದಂತೂ ಸುಳ್ಳು.

"ಏನು ಆಲೋಚಿಸುತ್ತಿದೀರಾ ನೀವು, ಒಂಗೋಲಿನಲ್ಲಿಳಿದು ಹೋಗುವಾಗ ನನ್ನನ್ನು ಎಬ್ಬಿಸಿ ಪರ್ಸ್ ಕೊಡಲು ಮರೆಯಬೇಡಿ." ಎಂದ ಗೋಪಾಲ.

ಮೂರ್ತಿ ಪರ್ಸ್ ಕೋಟಿನ ಜೇಬಿನಲ್ಲಿಟ್ಟು ಕೊಂಡ.

"ಹುಷಾರು. ಕೋಟಿನ ಜೇಬಿನಲ್ಲಿಟ್ಟು ಕೊಂಡಿದೀರ, ಷರ್ಟಿಗೆ ಜೇಬಿಲ್ಲವೇನು?" ಗೋಪಾಲ ಕೇಳಿದ.

ಸಿಕ್ಕಿದೆ ಕಣೋ ಮಗನೇ, ನನಗೆ ಮೊದಲೇ ಗೊತ್ತು. ನೀನು ಜೇಬುಗಳ ರಹಸ್ಯ ತಿಳಿಯ ಲೆಂದೇ ಪರ್ಸ್ ನನಗೆ ಕೊಟ್ಟಿದೀ ಅಂತ. ಎಂದುಕೊಳ್ಳುತ್ತಾ 'ನನ್ನ ಷರ್ಟಿಗೆ ಜೇಬಿ ಲ್ಲಾರೀ' ಎಂದ.

ಆ ವಿಷಯ ಹೇಳುವ ಅವಕಾಶ ಸಿಕ್ಕಿದ್ದು ಮೂರ್ತಿಗೆ ನಿಶ್ಚಿಂತೆಯನ್ನುಂಟು ಮಾಡಿತು.

ಗೋಪಾಲ ಕಾಲೆಳೆಯುತ್ತಾ ಪ್ಲಾಟ್ ಫಾರಂ ಸೇರಿದ. ಮೂರ್ತಿಯ ಭುಜದ ಮೇಲೆ ಕೈ ಹಾಕಿ ರೈಲು ಹತ್ತಿದ.

ರೈಲು ಹೊರಟಿತು. ಆ ದಿನ ರೈಲಿನಲ್ಲಿ ಗದ್ದಲ ಹೆಚ್ಚಾಗಿರಲಿಲ್ಲ. ಜನ ವಿರಳವಾಗಿ ದ್ದುದರಿಂದ ಬಹಳ ಮಟ್ಟಿಗೆ ಸೀಟುಗಳು ಖಾಲಿಯಾಗಿಯೇ ಇದ್ದುವು. ಗೋಪಾಲ ಇಬ್ಬರು ಕುಳಿತುಕೊಳ್ಳಬಹುದಾದ ಸ್ಥಳದಲ್ಲಿ ಮುದುಡಿಕೊಂಡು ಮಲಗಿದ.

ಮೂರ್ತಿಗೆ ಪರ್ಸಿನಲ್ಲಿ ಎಷ್ಟು ಹಣವಿ ದೆಯೋ ನೋಡಬೇಕೆಂಬ ಕುತೂಹಲವುಂಟಾ ಯಿತು. ತಡೆಯಲಾರದೇ ಬಾತ್ ರೂಮಿಗೆ ಹೋಗಿ ಪರ್ಸ್ ತೆಗೆದು ನೋಡಿದ.

ಅವನ ಆಶ್ಚರ್ಯಕ್ಕೆ ಮೇರೆಯಿರಲಿಲ್ಲ!

ಅದರಲ್ಲಿ ಮೂರು ಸಾವಿರವೂ ಇತ್ತು!!

ಬಾರಿನಲ್ಲಿ ಚಿಲ್ಲರೆ ಮಾಡಿದ ನೂರು ರೂಪಾಯಿನಲ್ಲಿ ಮಿಕ್ಕ ಹಣವೂ ಇತ್ತು.

ಮತ್ತೆ ತನ್ನ ಸೀಟಿನ ಬಳಿಗೆ ಬಂದ ಮೂರ್ತಿ.

ಗೋಪಾಲ ಹಾಯಾಗಿ ಮಲಗಿ ನಿದ್ರಿ ಸುತ್ತಿದ್ದ. ನಿದ್ದೆಯನ್ನು ನಟಿಸುತ್ತಿದ್ದಾ ನೇನೋ ಎಂದು ತದೇಕವಾಗಿ ನೋಡಿದ. ಊಹುಂ. ಹಾಗೇನೂ ಅನ್ನಿಸಲಿಲ್ಲ. ಆ ಮುಖ ದಲ್ಲಿ ಸರಳತೆ ಎದ್ದು ಕಾಣುತ್ತಿತ್ತು.

ಹಸುಗೂಸಿನಂತೆ ನಿಶ್ಚಿಂತೆಯಾಗಿ ನಿದ್ರಿಸುತ್ತಿ ರುವ ಈತ ಕಳ್ಳನೇ?...ಇರಲಾರದು. ತಾನೇ ಅನವಶ್ಯಕವಾಗಿ ಅನುಮಾನಿಸಿದ್ದ.

ಆದರೂ ಮೂರ್ತಿ ರಾತ್ರಿಯೆಲ್ಲಾ ಕುಳಿತೇ ಇದ್ದ. ಬೆಳಗಾಗುತ್ತಿರುವಂತೆ ಒಂಗೋಲು ಸ್ಟೇಷನ್ ಬಂತು.

ಮೂರ್ತಿ ಎದ್ದು ನಿಂತ.

ಬ್ಯಾಗ್ ಕೈಗೆ ತೆಗೆದುಕೊಂಡ.

ಒಂದು ಕ್ಷಣ ಗಾಢವಾದ ನಿದ್ರೆಯಲ್ಲಿ ಮುಳುಗಿದ್ದ ಗೋಪಾಲನನ್ನು ನೋಡಿ, ಕೆಳಗಿಳಿದ.

"ನಿಲ್ಲು"

ಮುಂದಕ್ಕೆ ಹೆಜ್ಜೆಯಿಡುತ್ತಿದ್ದ ಮೂರ್ತಿ ಬೆಚ್ಚಿ ನಿಂತ. ಆದರೆ ತನ್ನನ್ನಲ್ಲ ಕೂಗಿದ್ದು. ಮತ್ತೆ ಮುಂದಕ್ಕೆ ಹೆಜ್ಜೆಯಿಟ್ಟ. ಅರೆ!

ಆತನ ಪರ್ಸ್ ತನ್ನ ಹತ್ತಿರವೇ ಇದ್ದು ಬಿಟ್ಟಿತಲ್ಲಾ! ತನಗೆ ಮರೆತೇ ಹೋಗಿತ್ತು. ರೈಲು ಇನ್ನೂ ನಿಂತೇ ಇತ್ತು. ಹೋಗಿ ಕೊಟ್ಟು ಬಂದರೆ? ತಾನು ಹತ್ತಿದ ತಕ್ಷಣ ರೈಲು ಹೊರಟು ಬಿಟ್ಟರೆ ಏನು ಮಾಡುವುದು? ಹುಂ. ಆ ಮೇಲೆ ಕಳುಹಿಸಿದರಾಯಿತು. ಎಂದು ಮುಂದಕ್ಕೇ ನಡೆದ.

ರೈಲು ಹೊರಟಿತು.

ನೋಡುತ್ತಾ ನಿಂತ ಮೂರ್ತಿ.

ಆತನ ಅಡ್ರೆಸು ತನ್ನಲಿಲ್ಲವಲ್ಲಾ, ಹಣ ಹೇಗೆ ಕಳುಹಿಸಲು ಸಾಧ್ಯ! ಆತ ತನ್ನನ್ನು ಕುರಿತು ಏನೆಂದುಕೊಳ್ಳಬಹುದು? ಕಳ್ಳ ಅಂದುಕೋತಾನೇನೋ! ಅಂದುಕೊಂಡರೆ ಅಂದುಕೊಳ್ಳಲಿ. ತಾನೇನು ಬೇಕೂಂತ ಮಾಡಲಿಲ್ಲವಲ್ಲಾ! ಮರೆತು ಹೋದೆ ಅಷ್ಟೆ. ಕಳುಹಿಸೋಣ ಅಂದರೆ ವಿಳಾಸ ಇಲ್ಲ. ಏನು ಮಾಡಲಿಕ್ಕಾಗುತ್ತೆ!

ತನ್ನನ್ನು ತಾನು ಸಮರ್ಥಿಸಿಕೊಳ್ಳಲು ಪ್ರಯತ್ನಿಸಿದ ಮೂರ್ತಿ. ಆದರೆ ಮನಸಿನ ಮೂಲೆಯಲ್ಲಿ ಅಡಗಿದ್ದ ಅಂತರಾತ್ಮ ಮೇಲೆದ್ದು ಕೂಗಿತು.

"ಸುಳ್ಳು, ನೀನು ಮರೆತು ಹೋಗಲಿಲ್ಲ. ಬೇಕೂಂತಲೇ ಇಳಿದೆ. ನೀನು ಕಳ್ಳ. ಶುದ್ಧ ಕಳ್ಳ."

"ಬಾಯಿ ಮುಚ್ಚು. ನಾನೇನು ಬೇಕೂಂತ ಮಾಡಲಿಲ್ಲ. ನಿಜವಾಗಿ ಮರೆತು ಹೋದೆ. ಇದರಲ್ಲಿ ಕಳ್ಳತನ ಎಲ್ಲಿಂದ ಬಂತು? ಆತನನ್ನು ಕುರಿತು ನಾನೂ ಚಿಂತಿಸುತ್ತಿದ್ದೇನೆ. ಹೀಗಾಯಿತಲ್ಲಾ ಎಂದು ವ್ಯಥೆ ಪಡುತ್ತಿದ್ದೇನೆ."

ಬುಸ್ಸೆಂದು ತಲೆಯೆತ್ತಿದ ಅಂತರಾತ್ಮದ ತಲೆಯ ಮೇಲೊಂದು ಪೆಟ್ಟು ಕೊಟ್ಟು ಮಲಗಿಸಿದ ಮೂರ್ತಿ.

*

ಈಗ ಮತ್ತೆ ಅಂತರಾತ್ಮಕ್ಕೆ ಸದವಕಾಶ ಬಂದಿತ್ತು.

"ಆ ದಿನ ನಾನು ಹೇಳಿದ್ದನ್ನು ಅಲ್ಲ ಅಂತ ಸಾಧಿಸಿದೆಯಲ್ಲಾ, ನಿಜವಾಗಿ ಮರೆತಿದ್ದರೆ ಈಗ ಕೊಟ್ಟು ಬಿಡು" ಎಂದು ಗಟ್ಟಿಯಾಗಿ ಕೂಗಿತು.

"ಹಾಳಾದ್ದು ಇದೊಂದು ಪೀಡೆ. ಮಾತಿಗೆ ಮುಂಚೆ ನಾನಿದೀನಿ ಅಂತ ಸಿದ್ಧವಾಗುತ್ತೆ" ಎಂದುಕೊಳ್ಳುತ್ತಾ, "ಸರಿ, ಸರಿ, ಬಾಯಿ ಮುಚ್ಚು, ಈಗ ನನ್ನಲ್ಲಿ ಅಷ್ಟು ಹಣ ಎಲ್ಲಿಂದ ಬರಬೇಕು" ಎಂದ.

"ಈಗ ಇಲ್ಲದಿದ್ದರೇನಂತೆ? ಅವನನ್ನ ನಿಮ್ಮ ಮನೆಗೆ ಕರೆದುಕೊಂಡು ಹೋಗು. ಒಂದೆರಡು ದಿನದಲ್ಲಿ ದುಡ್ಡು ಸರಿಮಾಡಿ ಕೊಡು."

"ಚೆನ್ನಾಯಿತು, ಮನೆಗೆ ಕರೆದುಕೊಂಡು ಹೋಗಲೇ? ಅವನ ಮುಖ ನೋಡಿದೆಯಾ? ಪಕ್ಕಾ ಕಳ್ಳನಂತೆಯೇ ಇದಾನೆ."

"ನಿನಗಿಂತಲೂನೇ?"

"ನೀನು ಬಾಯಿ ಮುಚ್ಚುತ್ತಿಯೋ ಇಲ್ಲವೋ?"

ಕಿವಿ ಕಿವುಡಾಗುವಂತೆ ನಕ್ಕಿತು ಅಂತರಾತ್ಮ.

"ಏಕೆ ಹಾಗೆ ಹುಚ್ಚು ನಗೆ ನಗುತ್ತೀ?"

"ಕಳ್ಳ ಒಳ್ಳೆಯವನನ್ನು ಕಳ್ಳ ಅನ್ನುತ್ತಿದ್ದರೆ ನಗದೇನು ಮಾಡಲಿ?" ಮತ್ತೆ ನಗು.

"ನಾನು ಕಳ್ಳನೇ? ಅವನು ಒಳ್ಳೆಯವನೇ? ಯಾರಾದರೂ ಕೇಳಿದರೆ ನಕ್ಕಾರು."

"ಹೌದು ಪ್ರಪಂಚದ ದೃಷ್ಟಿಯಲ್ಲಿ ನೀನು ಒಳ್ಳೆಯವನೇ, ನಿನಗೆ ತುಂಬಾ ಒಳ್ಳೆಯ ಹೆಸರಿದೆ. ಪರಸ್ತ್ರೀಯರನ್ನು ಕಣ್ಣೆತ್ತಿ ನೋಡೊಲ್ಲ. (ಕಳ್ಳತನದಿಂದ ಮಾತ್ರವೇ ನೋಡುತ್ತಿ) ಎಲ್ಲರಿಗೂ ತಿಳಿಯುವಂತೆ ಕುಡಿಯೊಲ್ಲ. (ರಹಸ್ಯವಾಗಿ ಕುಡಿಯೋದು ಲೆಕ್ಕಕ್ಕಿಲ್ಲಾನ್ನು) ತುಂಬಾ ಒಳ್ಳೆಯವನು ನೀನು. ಯಾರೂ ನೋಡುತ್ತಿಲ್ಲ ಅಂದಾಗ ಮಾತ್ರವೇ ಕಳ್ಳತನ, ವ್ಯಭಿಚಾರ..."

ನೀನು ಬಾಯಿ ಮುಚ್ಚುತ್ತೀಯೋ ಕತ್ತು ಹಿಸುಕಲೋ?"

"ನನ್ನ ಕಂಠ ಬಿಡು. ಉಸಿರಾಡುತ್ತಿಲ್ಲ. ನಿನಗಿಷ್ಟ ಬಂದಂತೆ ಮಾಡಿಕೋ."

"ಹಾಗೆ ಬಾ ದಾರಿಗೆ, ಮಾತಿಗೆ ಮುಂಚೆ

ನಾನಿದೀನಿ ಅಂತ ಓಡಿ ಬರಬೇಡ" ಮತ್ತೆ ಅಂತರಾತ್ಮದ ಬಾಯಿ ಮುಚ್ಚಿಸಿ ಹಾಯಾಗಿ ಉಸಿರೆಳೆದ ಮೂರ್ತಿ.

"ಯಾಕೋ ಮೂರ್ತಿ, ಏನಾಯಿತು, ಯಾಕೆ ಹಾಗಿದ್ದೀ..." ರಂಗನಾಥ ಕೇಳಿದ.

"ಏನಿಲ್ಲ, ಸ್ವಲ್ಪ ತಲೆ ನೋಯುತ್ತಿದೆ... ಅಷ್ಟೆ" ಎಂದು ಕರ್ಚೀಫ್‌ನಿಂದ ಮುಖ ಒರೆಸಿಕೊಂಡ ಮೂರ್ತಿ.

"ಇವರೇನೆ, ಮದ್ರಾಸಿಗೆ ಹೊರಡುತ್ತಿರುವ ನಿಮ್ಮ ಸ್ನೇಹಿತರು ?" ಗೋಪಾಲ ಹಿಂದಿರುಗಿ ಬಂದಿದ್ದ.

"ಮತ್ತೆ ವಕ್ರಿಸಿದೆಯಾ, ಮಹಾರಾಯಾ" ಎಂದುಕೊಳ್ಳುತ್ತಾ ಮೂರ್ತಿ "ಹೌದು" ಎಂದ.

"ಯಾರೀತ ?" ತಲೆಯಿಂದ ಕಾಲಿನವರೆಗೂ ಶಲ್ಯಪರೀಕ್ಷೆ ಮಾಡುತ್ತಾ ಕೇಳಿದ ರಂಗನಾಥ.

"ನನ್ನ ಹೆಸರು ಗೋಪಾಲಾಂತ. ಹಿಂದೆ ಬ್ಯಾಂಕಿನಲ್ಲಿ ಕೆಲಸ ಮಾಡುತ್ತಿದ್ದೆ..."

"ಮತ್ತೆ ಈಗ?"

"ನನ್ನನ್ನ ನೋಡಿದರೆ ಗೊತ್ತಾಗೊಲ್ಲವೆ ? ನಾನೀಗ ನಿರುದ್ಯೋಗಿ, ನನ್ನ ಕೆಲಸ ಹೋಯಿತು,"

"ಏಕೆ ? ಏನು ಮಾಡಿದೆ ?"

ರಂಗನಾಥನ ಏಕವಚನ ಪ್ರಯೋಗ ಕೇಳಿ ಒಂದು ಕ್ಷಣ ಆಶ್ಚರ್ಯವಾಯಿತು ಗೋಪಾಲನಿಗೆ. ನಂತರ ನಿಧಾನವಾಗಿ ಹೇಳಿದ.

"ಕ್ಯಾಶ್ ಮೂರು ಸಾವಿರ ಕಳೆದುಕೊಂಡೆ, ಇದೇ ಸ್ಟೇಷನ್ನಿನಲ್ಲಿ, ಇದೇ ರೈಲಿನಲ್ಲಿ ಕಾಯುತ್ತಾ ಇದ್ದೆ. ರೈಲಿನಲ್ಲಿ ಹಣ ಹೋಯಿತು. ಅಂದೇ ಇನ್ಸ್‌ಪೆಕ್ಷನ್ ನಡೆಯಿತು. ಬೇರೆ ಹಣ ತಂದು ಕಟ್ಟಲು ಸಮಯವೂ ಇರಲಿಲ್ಲ. ನನ್ನ ಮೇಲಧಿಕಾರಿ ಬಾಯಿಗೆ ಬಂದಂತೆ ಮಾತನಾಡಿದ. ನನಗೂ ಕೋಪ ಬಂದು ಆತನ ಮೇಲೆ ಕೈ ಮಾಡಿದೆ. ಅಷ್ಟೆ! ಇನ್ನೇನಾಗಬೇಕು, ನನ್ನ ಕೆಲಸ ಹೋಯಿತು. ಜೈಲಿಗೂ ಹೋಗಬೇಕಾಯಿತು. ಹಿಂತಿರುಗುವ ವೇಳೆಗೆ ನನ್ನ ಹೆಂಡತಿ ತಾರು ಮನೆಗೆ ಹೊರಟು ಹೋಗಿದ್ದಳು. ಕಳ್ಳನೊಂದಿಗೆ ಸಂಸಾರ ಮಾಡಲಾರೆ ಅಂತ ಡೈವೋರ್ಸ್‌ಗೆ ನೋಟೀಸು ಕೊಟ್ಟಿದ್ದಳು." ಸರಳವಾಗಿ ನಗುನಗುತ್ತಾ ಇಷ್ಟು ಹೇಳಿ ಮೂರ್ತಿಯ ಕಡೆ ನೋಡಿದ ಗೋಪಾಲ.

ಮೂರ್ತಿಯ ಮುಖ ಬಿಳಿಚಿಕೊಂಡಿತ್ತು.

"ನಿಮಗೆ ಮೈ ಹುಷಾರಿದ್ದಂತಿಲ್ಲ. ಸ್ವಲ್ಪ ಹೊತ್ತು ಕುಳಿತುಕೊಳ್ಳಿ." ಎಂದ ಗೋಪಾಲ.

"ಇಲ್ಲ, ನನಗೇನೂ ಆಗಿಲ್ಲ." ತಡವರಿಸುತ್ತಾ ಉತ್ತರಕೊಟ್ಟ ಮೂರ್ತಿ.

"ಸದ್ಯ ಅವನಿಗೆ ನನ್ನ ಗುರ್ತು ಹತ್ತಲಿಲ್ಲ. ಗುರ್ತಿಸಿದ್ದರೆ ಏನೂ ಮಾಡುತ್ತಿದ್ದನೋ ಕಾಣೆ" ಎಂದು ಒಳಗೊಳಗೇ ನಡುಗಿದ ಮೂರ್ತಿ.

ರೈಲು ಬಂತು. ಮೂರ್ತಿಯ ಸ್ನೇಹಿತ ರೈಲು ಹತ್ತಿದ.

ರೈಲು ಹೊರಡುವ ಮುಂಚೆ ಮೂರ್ತಿಯ ಭುಜದ ಮೇಲೆ ಕೈ ಹಾಕಿ "ಬರುತ್ತೀನಿ ಮೂರ್ತಿಯವರೇ" ಎಂದ ನಗುಮುಖದಿಂದ ಗೋಪಾಲ.

ಮೂರ್ತಿ ಬೆಚ್ಚಿಬಿದ್ದು ಗೋಪಾಲನ ಕಡೆ ನೋಡಿದ. ಗೋಪಾಲ ರೈಲು ಹತ್ತಿ ಬಾಗಿಲ ಬಳಿನಿಂತು ನಗುತ್ತು ಕೈ ಬೀಸಿದ,

ರೈಲು ಕದಲಿತು.

ಮೂರ್ತಿ ಅಪ್ರಯತ್ನವಾಗಿಯೇ ಎರಡೂ ಕೈ ಜೋಡಿಸಿ ನಮಸ್ಕರಿಸಿದ... ✡

---

**ವಾದ್ಯಕ್ಕೆ ಬಂಧವಲ್ಲದೆ ನಾದಕ್ಕೆ ಬಂಧವುಂಟೆ ?**
**ಅರಿವಿಂಗೆ ಬಂಧವಲ್ಲದೆ ಅರಿಹಿಸಿ ಕೊಂಬವಂಗುಂಟೆ ಬಂಧ !**
**ಅರಿದೆಹೆನೆಂಬ ಭ್ರಮೆ ಅರಿಹಿಸಿಕೊಂಡೆಹೆನೆಂಬ ಕುರುಹು**
**ಉಭಯವು ನಾಸ್ತಿಯಾಗಿಯಲ್ಲದೆ**
**[illegible]** — ಮಾದಾರ ಧೂಳಯ್ಯ

# ಸೊಳ್ಳೆಗಳ ಕಾಟವನ್ನು ಸಹಿಸುವುದಕ್ಕಾಗುವುದಿಲ್ಲ





ಎಲ್ಲಕ್ಕಿಂತ ಹೆಚ್ಚು ಮಾರಾಟವಾಗುವ, ಸೊಳ್ಳೆನಿರೋಧಕ

## ನಿಮಗೆ ಬೇಕು

# ಒಡೊಮೊಸ್




ಲಕ್ಷೋಪಲಕ್ಷ ಜನರು ನಂಬುವ ಮತ್ತು ಉಪಯೋಗಿಸುವ ತಯಾರಿಕೆ.
ಮಕ್ಕಳಿಗೆ ಕೂಡ ಅತ್ಯಂತ ನಿರಪಾಯವಾದುದು.

**ಬಲ್ಸಾರಾ**
ಸುಖಮಯ ಜೀವನಕ್ಕೆ
ಆಧುನಿಕ ಸಾಧನಗಳು

BALSARA ಬಲ್ಸಾರಾ ಅಂಡ್ ಕಂಪೆನಿ (ಪ್ರೈ.) ಲಿ.
43, ನಾಗಿನ್‌ದಾಸ್ ಮಾಸ್ಟರ್ ರೋಡ್, ಮುಂಬಯಿ 400 023.

CHAITRA BLS 45 KAN

# ರೆಡ್ ಇಂಡಿಯನ್ನರ ಹಾಕಿ ಪಂದ್ಯಾಟ ವೈಖರಿ

ಜಯತೀರ್ಥ ಕೋಟಿ

ಹಾಕಿಯ ಆಟ ಯಾವಾಗ, ಹೇಗೆ ಹಾಗೂ ಎಲ್ಲಿ ಹುಟ್ಟಿಕೊಂಡಿತು ಎಂಬುದಕ್ಕೆ ನಿಖರವಾದ ಸಮಾಧಾನ ಇಂದಿಗೂ ಸಿಕ್ಕಿಲ್ಲ. ಅದರ ಉತ್ಪತ್ತಿಯ ವಿಷಯದಲ್ಲಿ ಪರಸ್ಪರ ವಿರೋಧಿಯಾದ ಹಲವು ಹದಿನೆಂಟು ಮತಗಳು ಮಾತ್ರ ಪ್ರಚಲಿತವಾಗಿವೆ.

ಮೊಟ್ಟ ಮೊದಲು ಹಾಕಿಯನ್ನಾಡಿದವರು ಇರಾಣ ದೇಶದವರು ಎಂಬ ಊಹೆಯೂ ಇದೆ. ಅಲ್ಲಿಯ ಕಾರ್ಮಿಕರು ತಮ್ಮ ಬಿಡುವಿನ ವೇಳೆಯನ್ನು ಕಳೆಯಲು ಕಟ್ಟಿಗೆಯ ಉದ್ದನೆಯ ತುಂಡೊಂದನ್ನು ತೆಗೆದುಕೊಂಡು ಅದರಿಂದ ಕಟ್ಟಿಗೆಯ ಚೆಂಡನ್ನು ಅತ್ತಿಂದಿತ್ತ, ಇತ್ತಿಂದತ್ತ ಓಡಾಡಿಸುತ್ತಾ ಆನಂದಿಸುತ್ತಿದ್ದರಂತೆ! ಈ ತೆರನ ಆಟವು ಹೆಚ್ಚಾಗಿ ಕೆಳ ವರ್ಗದ ಜನರಲ್ಲಿ ಪ್ರಚಲಿತವಾಗಿತ್ತಂತೆ.

ಇರಾಣದಿಂದ ಸಮಸ್ತ ಯುರೋಪ ದೇಶಗಳಿಗೆಲ್ಲ ವ್ಯಾಪಿಸಿಕೊಂಡು, ಬ್ರಿಟಿಶರ ಈಸ್ಟ ಇಂಡಿಯಾ ಕಂಪನಿಯಿಂದಾಗಿ, ಭಾರತಕ್ಕೆ ಪದಾರ್ಪಣ ಮಾಡಿತಂತೆ ಈ ಹಾಕಿ!

ಭಾರತೀಯರು ಕಚ್ಚಾ ಆಟವಾಗಿ ಬಂದಿದ್ದ ಹಾಕಿಯಲ್ಲಿಯ ರೀತಿ-ನೀತಿಗಳನ್ನು ಮಾರ್ಪಡಿಸಿಕೊಂಡು ಅದಕ್ಕೊಂದು ವಿಶೇಷ ಸ್ಥಾನವನ್ನು ಕೊಡಮಾಡಿದರಂತೆ.

ಸುಮಾರು ಎರಡುನೂರು ವ[illegible]ದೆ ಹಾಕಿ ಆಟವು ಅಮೇರಿಕೆಯ ರೆಡ್ ಇಂಡಿಯನ್ ಪಂಗಡದವರ ಜನಪ್ರಿಯ ಆಟವಾಗಿತ್ತೆಂದೂ ಹೇಳುವರು. ಅವರ ಆಟದ ಪರಿಯು ವಿಚಿತ್ರವೂ ಜೊತೆಗೆ ಮನೋರಂಜಕ ಹಾಗೂ ರೋಮಾಂಚಕಾರಿಯೂ ಆಗಿರುತ್ತಿತ್ತು. ಈ ಆಟದಲ್ಲಿ ಶಾರೀರಿಕ ಬಲಕ್ಕೆ ಹೆಚ್ಚಿನ ಪ್ರಾಧಾನ್ಯ ಕೊಡಲಾಗುತ್ತಿತ್ತು.

ಸ್ವಭಾವದಿಂದ ಯುದ್ಧ ಪ್ರಿಯರಾಗಿದ್ದ ರೆಡ್-ಇಂಡಿಯನ್‌ರು ತಮ್ಮ ಶರೀರವನ್ನು ಸಬಲವಾಗಿಟ್ಟುಕೊಳ್ಳುವದಕ್ಕೆ ಹಾಗೂ ತಾವು ಚೈತನ್ಯದಿಂದಿರಲಿಕ್ಕೆ ಹಾಕಿಯಂತಹ ಆಟವನ್ನು ಪ್ರಾರಂಭಿಸಿದರೆಂದೂ ನಂಬಿಕೆ.

ರೆಡ್ ಇಂಡಿಯನ್‌ರು ಆಡುತ್ತಿದ್ದ ಈ ಆಟಕ್ಕೆ ಅವರಲ್ಲಿ ನಿಖರವಾದ ಹೆಸರೇನೂ ಇರಲಿಲ್ಲ. ಬೇರೆ ಬೇರೆ ಗುಂಪಿನವರು ತಮ್ಮ ಪರಂಪರೆ ಅಥವಾ ಮುಖ್ಯಸ್ಥನ ಆದೇಶಗಳಿಗನುಗುಣವಾಗಿ ತಮ್ಮದೇ ಆದ ರೀತಿಯಲ್ಲಿ ಆಟಕ್ಕೊಂದು ಹೆಸರನ್ನಿಡುತ್ತಿದ್ದರು.

ಹೆಸರು ಹಾಗೂ ಆಡುವ ವಿಧದಲ್ಲಿ ಯಾವ ಎರಡು ಪಂಗಡಗಳ ನಡುವೆಯೂ ಸಾಮ್ಯವಿರಲಿಲ್ಲವಾದರೂ, ಈ ಆಟವು ಶಕ್ತಿಯ ಪ್ರತೀಕ ಹಾಗೂ ಶಾರೀರಿಕ ಬಲ ಸಂವರ್ಧನೆಗೆ ಸಹಾಯಕ ಎಂಬುದು ಮಾತ್ರ ಅವರಲ್ಲಿಯ ಏಕಮತವಾಗಿತ್ತು.

ಪ್ರಾಯಶ: ಈ ಕಾರಣದಿಂದಾಗಿಯೇ ಹಾಕಿಯು ಅವರ ದಿನಚರಿಯ ಮಹತ್ವದ ಅಂಗವಾಗಿ ಪರಿಣಮಿಸಿರಬೇಕು.

ಅತ್ಯಂತ ಶಕ್ತಿಶಾಲಿಗಳೆಂದು ಗಣಿಸಲಾಗಿರುವ ರೆಡ್-ಇಂಡಿಯನ್‌ರೂ ಸಹ ತಮ್ಮ ಸುರಕ್ಷಿತತೆಯ ಬಗೆಗೆ ಸಂದೇಹಶೀಲರಾಗಿದ್ದರಿಂದ ಹಾಕಿ ಆಟವನ್ನವರು ಸ್ವ-ರಕ್ಷಣೆಯ ಒಂದು ಸಾಧನವೆಂದೇ ಒಗೆಗು ವ್ಯವಹರಿಸುತ್ತಿದ್ದರು. ಅವರ ಆಟದ ಆಗಿನ ಪರಿಯನ್ನೇನಾದರೂ ಇಂದಿನ ಆಟಗಾರರು ಪಂದ್ಯದಲ್ಲಿ ಅಳವಡಿಸಿಕೊಂಡರೆ ಅಂಪಾಯರ್‌ನಿಂದ ಅವರಿಗೆ ಅತಿ ಶೀಘ್ರದಲ್ಲಿಯೆ ಅರ್ಧಚಂದ್ರ ದೊರಕುವದು.

ರೆಡ್ ಇಂಡಿಯನ್‌ರಿಗೆ ಹಾಕಿಯು ಅನೇಕ ವ್ಯಾಧಿಗಳನ್ನು ಗುಣಪಡಿಸುವ ರಾಮಬಾಣವೂ ಆಗಿತ್ತು. ಅನೇಕ ರೋಗಿಗಳು ಚಿಕಿತ್ಸಕರ ಸಲಹೆಯಂತೆ ಹಾಕಿ ಪಂದ್ಯಗಳಲ್ಲಿ ಭಾಗವಹಿಸಿ, ಪಂದ್ಯ ಮುಗಿದ ನಂತರ ಮರು ಪರೀಕ್ಷೆಗೊಳಗಾದರೆ ಆಶ್ಚರ್ಯಕರವಾಗಿ ರೋಗವೆಲ್ಲಾ ನಾಶವಾಗಿರುತ್ತಿತ್ತು ಎಂದೂ ಹೇಳಲಾಗುತ್ತಿದೆ.

ವರ್ಷವಿಡೀ ಹಾಕಿಯ ಪಂದ್ಯಗಳನ್ನೇರ್ಪಡಿಸುತ್ತಿದ್ದುದು ರೆಡ್ ಇಂಡಿಯನ್‌ರ ಒಂದು ಹವ್ಯಾಸವೇ ಆಗಿತ್ತು. ಭಿನ್ನ ಭಿನ್ನ ಪಂಗಡಗಳ ಶ್ರೇಷ್ಠತೆಯನ್ನರಿತುಕೊಳ್ಳುವದಕ್ಕೆ ಇದು ಸಹಕಾರಿಯಾಗಿತ್ತು.

ಮೈತ್ರಿಪೂರ್ಣ ವಾತಾವರಣವಿದ್ದಾಗ ಒಂದು ಪಂಗಡವು ಮತ್ತೊಂದು ಪಂಗಡವನ್ನು ಪಂದ್ಯಕ್ಕೆ ಆಹ್ವಾನಿಸುತ್ತಿತ್ತು. ಯಾವ ಪಂಗಡವೂ ಆಹ್ವಾನವನ್ನು ಸ್ವೀಕರಿಸದೇ ಇರುತ್ತಿರಲಿಲ್ಲ. ಏಕೆಂದರೆ ಆಹ್ವಾನವನ್ನೆದುರಿಸದಿರುವುದು ಸೋಲಿಗಿಂತಲೂ-ಏಕೆ ಮೃತ್ಯುವಿಗಿಂತಲೂ-ಅಪಮಾನಕರವೆಂದವರು ಬಗೆಯುತ್ತಿದ್ದರು.

ಪ್ರತಿಷ್ಠೆಯನ್ನು ನಿರ್ಣಯಿಸುವ ಈ ಪಂದ್ಯಗಳಿಗಾಗಿ ಅವರು ವಿಶೇಷ ಮುತುವರ್ಜಿಯಿಂದ ತಯಾರಿಗೆ ತೊಡಗುತ್ತಿದ್ದರು.

ರೆಡ್ ಇಂಡಿಯನ್‌ರ ಒಂದು ಖ್ಯಾತನಾಮ ಪಂಗಡವಾದ 'ಚೆರೊಕೀಯ ಸಂಪ್ರದಾಯದ ಪ್ರಕಾರ ಆಟಗಾರರು ಪ್ರಧಾನ ಅರ್ಚಕರಲ್ಲಿಗೆ ಹೋಗಿ ತಮ್ಮ ದೇಹದ ಮೇಲೆ 'ಪವಿತ್ರವಾದ ಗುರುತು'ಗಳನ್ನು ಹಾಕಿಸಿಕೊಳ್ಳುವುದು ಅವಶ್ಯವಾಗಿತ್ತು.

ಪಂದ್ಯವು ಆರಂಭವಾಗುವ ಪೂರ್ವದಲ್ಲಿ-ಅತಿ ವೇಗವಾಗಿ ಓಡುವ ಪ್ರಾಣಿಗಳ ಕೊಬ್ಬಿನಿಂದ ತಯಾರಾದ ವಸ್ತುವೊಂದನ್ನು ಆಟಗಾರರ ಮೈಗೆ ಸವರುವುದೂ ಒಂದು ಅಗತ್ಯ ವಿಧಿಯೇ ಆಗಿತ್ತು. ಮಂತ್ರ ಪೂರಿತ ತೀರ್ಥವನ್ನು ಆಟಗಾರರಿಗೆಲ್ಲರಿಗೂ ಸೇಚನ ಮಾಡಿದ ಮೇಲೆ ಪಂದ್ಯಕ್ಕೊಂದು ರಹದಾರಿ ದೊರಕಿದಂತೆ ಎಂಬ ನಂಬಿಕೆಯಿತ್ತು ಅವರಲ್ಲಿ!

ಹೀಗೆ ಯಂತ್ರವೊಂದರಿಂದ ಪೂಜಾರಿಯು ಪವಿತ್ರವಾದ ಗುರುತು ಮೂಡಿಸುವಾಗ ಆದ ಗಾಯದಿಂದ ರಕ್ತ ಹರಿಯುವುದೂ ಇತ್ತು. ಒಂದು ವೇಳೆ ಆಟಗಾರನು-ನೋವಿನಿಂದ ನರಳಿದನೋ ಅವನು ಆಟದಲ್ಲಿ ಭಾಗವಹಿಸಲು ಅಯೋಗ್ಯನೆಂದು ಪರಿಗಣಿಸಿ ಹೊರಗಟ್ಟುತ್ತಿದ್ದರು.

ಮಂತ್ರಪೂತರಾದ, ರಕ್ತ ಸಿಕ್ತರಾದ ಆಟಗಾರರು ಪವಿತ್ರ ಕುಂಡವೊಂದರಲ್ಲಿ ಮಿಂದು ಬಂದರೆಂದರೆ ಅವರಲ್ಲಿ ಚೇತನ, ಅದ್ಭುತ ಸಹನಾಶಕ್ತಿ ಹಾಗೂ ಪಶುಗಳಂತೆ ವೇಗವಾಗಿ ಓಡುವ ಚಾಪಲ್ಯ ಬಂದೀತೆಂದು ಬಗೆವ ಸಂಪ್ರದಾಯ!

'ಚೆರೋಕೀ' ಪಂಗಡದಲ್ಲಿಯಂತೆ ಉಳಿದ ರೆಡ್ ಇಂಡಿಯನ್‌ರಲ್ಲಿ ಇಷ್ಟು ಕಠಿಣ ನಿಯಮಗಳಿರಲಿಲ್ಲ.

ಪಂದ್ಯವು ಇನ್ನೆರಡು ದಿವಸಗಳಲ್ಲಿ ಪ್ರಾರಂಭವಾಗುತ್ತದೆನ್ನುವಾಗ ಆಟಗಾರರು ಉಪವಾಸವಿದ್ದು, ಸಂಗೀತ-ನೃತ್ಯಗಳಿಂದ ದೇವತೆಗಳನ್ನು ಒಲಿಸಿಕೊಳ್ಳುವದರಲ್ಲಿ ತೊಡಗುತ್ತಿದ್ದರು.

ತಮ್ಮ ತಮ್ಮ ಪರಂಪರೆಗನುಗುಣವಾಗಿ ಸಿದ್ಧರಾದ ಆಟಗಾರರು ಗೊತ್ತಾದ ದಿನ ವಿಶಾಲ ಮೈದಾನವೊಂದರಲ್ಲಿ ಜಮಾಯಿಸುತ್ತಿದ್ದರು.

ಇಂದಿನ ನಿಯಮಗಳ ಪ್ರಕಾರ ಎರಡು ಗೋಲುಗಳ ನಡುವಿನ ದೂರವು ೧೦೦ ಗಜ ವಿದ್ದರೆ, ರೆಡ್ ಇಂಡಿಯನ್‌ರ ರೀತಿಯೇ ಬೇರೆ! ಅವರು ಎಷ್ಟೋ ಮೈಲುಗಳುದ್ದದ ಅಂತರವನ್ನಿಟ್ಟುಕೊಂಡು ಆಟ ಪ್ರಾರಂಭಿಸು ತ್ತಿದ್ದರು!! ಒಂದೊಂದು ಪಂಗಡದಲ್ಲಿಯ ಆಟಗಾರರ ಸಂಖ್ಯೆ ಇಂದು ಹನ್ನೊಂದಿದ್ದರೆ, ಅವರಲ್ಲಿ ಸಾವಿರಕ್ಕೂ ಅಧಿಕ ಆಟಗಾರರಿರು ತ್ತಿದ್ದರು.

ಸೂರ್ಯೋದಯದ ಜೊತೆಗೆ ಪ್ರಾರಂಭಿಸಿದ ಪಂದ್ಯವು ಸೂರ್ಯಾಸ್ತದವರೆಗೂ ಬಿಡುವಿಲ್ಲದೇ ಅವ್ಯಾಹತವಾಗಿ ನಡೆಯುತ್ತಿತ್ತು!

ಆಟಗಾರರಿಗೆ ಯಾವ ನೀತಿ ಸಂಹಿತೆಯೂ ಇರಲಿಲ್ಲ. ಅವರು ಮನಬಂದಂತೆ, ಸ್ವೇಚ್ಛೆ ಯಿಂದ ಆಡಬಹುದಿತ್ತು.

ಮೈತ್ರಿಪೂರ್ಣ ವಾತಾವರಣದಲ್ಲಿ ಆಡ ಬೇಕೆನ್ನುವುದು ಅವರ ಸಂಕಲ್ಪವಾಗಿರು ತ್ತಿದ್ದರೂ, ಸೂರ್ಯನ ತಾಪ ಹೆಚ್ಚಿದಂತೆ ಆಟವೂ ಉಗ್ರರೂಪ ತಾಳುತ್ತಿತ್ತು. ಮಧ್ಯಾಹ್ನವಾಗುತ್ತಿದ್ದಂತೆ ಒಂದು ಸಣ್ಣ ಯುದ್ಧವೇ ನಡೆದಿದೆಯೆನ್ನುವಂತಹ ವಾತಾ-ವರಣವು ಸೃಷ್ಟಿಯಾಗುತ್ತಿತ್ತು.

ಭಾರೀ ಭಾರೀ ಹಾಕಿ ದಂಡಗಳನ್ನು ಹಿಡಿದು ಗೋಲುಗಳತ್ತ ಹೊರಟ ಆಟಗಾರರು ಎದುರು ಪಕ್ಷದ ಆಟಗಾರರ ಅಡೆ-ತಡೆ ಯನ್ನು ಸಹಿಸದೇ ಭಯಾಸ್ಪದವಾದ ರೀತಿ ಯಲ್ಲಿ ಮುನ್ನಡೆಯುತ್ತಿದ್ದರು. ಅವರಿಗೆ ತಮ್ಮೆದುರಿನ ಗುರಿ ಮುಟ್ಟುವ ತವಕದಲ್ಲಿ ಯಾವುದು ಸರಿ, ಯಾವುದು ತಪ್ಪೆನ್ನುವುದು ಹೊಳೆಯುದೇ, ಚೆಂಡಿಗೆ ಏಟಿಕ್ಕುವದರ ಬದಲಿಗೆ ಎದುರು ಗುಂಪಿನ ಆಟಗಾರನ ಕಾಲನ್ನೋ, ಸೊಂಟವನ್ನೋ ಮುರಿದು ಹಾಕುತ್ತಿದ್ದರು.

ಹೀಗೆಯೇ ಮುಂದೆ ಸಾಗಿ ಆಟಗಾರರು ಚೆಂಡಿನ ಇರವನ್ನೇ ಮರೆತು ಪರಸ್ಪರ ಯುದ್ಧಕ್ಕೆ ತೊಡಗುತ್ತಿದ್ದುದರಿಂದ ಪಂದ್ಯವು ಯುದ್ಧದಲ್ಲಿ ಪರಿಸಮಾಪ್ತಿಯಾಗುತ್ತಿತ್ತು! ಮೊದ ಮೊದಲು ಉತ್ಸಾಹದಿಂದ ಆಟದಲ್ಲಿ ಭಾಗವಹಿಸಿದ ಆಟಗಾರರ ಶವಗಳು, ಗಾಯ ಗೊಂಡ ದೇಹಗಳು ಸಾಯಂಕಾಲ ಪಂದ್ಯ ಮುಗಿದ ಮೇಲೆ (ರಣ) ರಂಗದಲ್ಲಿ ನೋಡ ಸಿಗುತ್ತಿದ್ದವು.

ಎರಡೂ ಪಕ್ಷಗಳ ನೇತಾರರೋ, ಅಥವಾ ಪ್ರಿಯ ಜನರೋ ಆಟ ಸಾಕೆಂದಾಗ ಯುದ್ಧವು ನಿಂತು ವಿರಾಮವು ನೆಲೆಗೊಳ್ಳುತ್ತಿತ್ತು.

ರಾತ್ರಿಯ ಗಾಢವಾದ ಅಂಧಕಾರದಲ್ಲಿ ಆಟಗಾರರ ದೇಹಗಳನ್ನು ಆಯಾ ಪಂಗಡ ದವರು ಹೆಕ್ಕಿಕೊಂಡು ಒಯ್ಯುತ್ತಿದ್ದರು. ಹೆಪ್ಪುಗಟ್ಟಿದ ರಕ್ತದಿಂದಾಗಿ ಭೂಮಿಯು ಎಷ್ಟೋ ದಿನಗಳ ವರೆಗೆ ಆ ಪಂದ್ಯದ ನೆನ-ಪನ್ನು ತಂದುಕೊಡುತ್ತಿತ್ತು.

ಭಯಂಕರ ರಕ್ತಪಾತವಾದರೂ ರೆಡ್ ಇಂಡಿಯನ್‌ರು ಮಾತ್ರ ಹಾಕಿಯು ತಮ್ಮ 'ಮಾದರಿ ಆಟ'ವೆಂದೇ ಗಣಿಸುತ್ತಿದ್ದರು.

ಕ್ರಮೇಣ ರೆಡ್ ಇಂಡಿಯನ್‌ರ ಹಲವು-ಹನ್ನೆರಡು ಪಂಗಡಗಳು ಮುರಿದು ಹೋದ ನಂತರ ಅವರ ಈ ಆಟವೂ ನಶಿಸುತ್ತಾ ಹೋಯ್ತು.

ಇಂದೇನಾದರೂ ಅಗಿನ ರೆಡ್ ಇಂಡಿ-ಯನ್‌ರು ಈಗಿನ ಹಾಕಿ ಆಟವನ್ನೇನಾದರೂ ನೋಡಿದ್ದರೆ ಇದು ಪೌರುಷವುಳ್ಳವರು ಆಡುವ ಆಟವೇ ಅಲ್ಲ ಎಂದೆನ್ನುತ್ತಿದ್ದರೇನೋ!

ನಿಜ,...ರಕ್ತಪಾತಕ್ಕವಕಾಶ ಕೊಡದ ಹಾಕಿ ಆಟವೊಂದು ಆಟವೇ? ✿



ನೋಡಿ ಹೇಗೆ ಮಳೆ ಬೀಳುತ್ತಿದೆ! ನಿಸರ್ಗವೇ ಮಾಳಿಗೆಯ ಮೇಲೆ ಟ್ಯಾಪ್ ಮಾಡುತ್ತಿರುವ ಹಾಗೆ ಕಾಣಿಸುತ್ತದೆ.

– ಮೇರಿ ಐಲ್‌ಫ್ರೆಡ್

# ಅವರಿವರ ದೃಷ್ಟಿಯಲ್ಲಿ ಮಹಿಳೆ

"ಚಂಚಲಚಿತ್ತರಾದ ಸ್ತ್ರೀಯರೇ ಪ್ರತಿಯೊಂದು ಅನರ್ಥಗಳಿಗೂ ಕಾರಣರು."

–ಭರ್ತೃಹರಿ

"ಪುರುಷರು ಸ್ತ್ರೀಯರ ಎದುರು ಮಾತ್ರ ಶೀಲ ಸಂಕೋಚಗಳ ಮೂರ್ತಿಗಳಾಗುತ್ತಾರೆ." -ಪ್ರೇಮಚಂದ್ರ

"ಹೆಣ್ಣನ್ನು ಯಾವ ಪುರುಷನೂ ಪ್ರಸನ್ನಗೊಳಿಸಲಾರ." –ಶುಕ್ರವ್ಯ

"ಗುಂಡಿನೇಟಿಗೆ ಗುರಿಯಾದ ಮಿಗದ ರಕ್ತದ ಜಾಡನ್ನು ಬೆನ್ನಟ್ಟಿ ಸಾಯುವುದನ್ನು ನೋಡಬಯಸುವ ಬೇಟೆಗಾರನಂತೆ ಹೆಂಗಸರು." -ತ. ರಾ. ಸು.

"ಸ್ತ್ರೀ ಚಿತ್ತವನ್ನು ಅರಿಯುವುದು ಪ್ರೌಢ ಗಣಿತದ ವ್ಯಾಸಂಗದಂತೆ; ಬಹುತೇಕ ಜನರಿಗೆ ಅತಿ ಕಠಿಣ, ಅಸಾಧ್ಯ. ಕೆಲವರಿಗೆ ಮಾತ್ರ ಅತಿ ಸುಲಭ-ಬೇಕಾದ ಭಾತಿಯನು ಪಡೆದಿರುವ ಪುಣ್ಯವಂತರಿಗೆ." –ಎಸ್. ವಿ. ರಂಗಣ್ಣ

"ಹೆಣ್ಣು ಗಂಡಿಗೆ ಬಡಿದ ಸಾಡೇಸಾತಿ." –ರಾ. ಶಿ.

"ಓ ಚಂಚಲತೇ, ನಿನ್ನ ಹೆಸರೇ ಸ್ತ್ರೀಯಂತೆ." - ಕುವೆಂಪು

"ಹೆಣ್ಣು ಹೇಗೆಯೇ ಇರಲಿ, ಒಂದಿಲ್ಲೊಂದು ಭಂಗಿಯಲ್ಲಾದರೂ ಗಂಡಿನ ಕಣ್ಣಿಗೆ ಚೆಲುವಾಗಿ ಕಾಣುವುದು ಸೃಷ್ಟಿಯ ನಿಯಮ." ...ಬೀಚಿ

"ಹೆಣ್ಣು ಸಮಸ್ಯೆಯ ನೆಗೆಟಿವ್." — ಸಿದ್ದಲಿಂಗ ಪಟ್ಟಣಶೆಟ್ಟಿ

"ಹೆಣ್ಣು ಮನುಕುಲದೊಂದು ಪುಣ್ಯದಾ ಬನದಲ್ಲಿ ಕಕ್ಕುಲಾತಿ ಅರಳಿಸಿದ ಮಧುರ ಹೂವು." — ಚೆನ್ನವೀರ ಕಣವಿ

"ಹೆಣ್ಣು ಮಕ್ಕಳು ಒಳ್ಳೇ ರೀತಿಯಿಂದ ಬಾಳೋದು ಕಷ್ಟ- ಎಂದು ತೋರಿಸುವುದೇ ನಮ್ಮ ದೇಶದ ಚರಿತ್ರೆಯಾಗಿದೆ." —ದ. ರಾ. ಬೇಂದ್ರೆ

"ಮದುವೆ ಆಗುವುದಕ್ಕಿಂತ ಮೊದಲು ಗಂಡಸಿಗೆ ಹೆಂಗಸು ಒಂದು ರಹಸ್ಯ, ಮದುವೆ ಆದ ಮೇಲೆ ಒಂದು ಸಮಸ್ಯೆ." — ತ್ರಿವೇಣಿ

"ಗಂಡಸಿನ ಕೆಲಸದಾಗ ಕೈ ಬಾಯಿ ಹಾಕಲಿಲ್ಲ ಅಂದರ ಅದಕ್ಕ ಮತ್ತ ಹೆಂಗಸು ಅಂತ ಹೆಂಗ ಅನಬೇಕರಿ ?" — ಶ್ರೀರಂಗ

ಸಂಗ್ರಹ: ಎಂ. ಟಿ. ಪುಟ್ಟರಾಜ

# ಕೋಟೆ ನುಡಿದ ಸಾಕ್ಷಿ

ಮಾಧವರಾಯ

ಮಂಗಳೂರಲ್ಲಿ ಉತ್ತರದೆಡೆಗಿದೆ ಅಶೋಕ ನಗರ (ಬೋಳೂರು). ಈ ಸ್ಥಳದಲ್ಲಿ ಪಶ್ಚಿಮ ಬದಿಗೆ ನದಿಯೊಂದು. ಇದರ ದಡದಲ್ಲೇ ಚಿಕ್ಕದೊಂದು ಕೋಟೆ "ಸುಲ್ತಾನ ಬತ್ತೇರಿ." ಕೋಟೆಯ ಮುಂದಿನ ಸೋಪಾನಗಳನ್ನೇರುತ್ತಿದ್ದಂತೆ ಕೋಟೆಯ ನೆತ್ತಿಗೆ ಕಾಲಿಡಬಹುದು. ಅಲ್ಲಿ ಉರುಟಾದ ಹಾಸುಗಲ್ಲನ್ನು ಹಾಸಿರುವ ನೆಲವೇ ಈ ಕೋಟೆಯ ಮೇಲ್ಛಾವಣಿ. ಇಲ್ಲಿ ಕಲ್ಮಂಚಗಳೂ ಹತ್ತಾರು ವರ್ಷಗಳ ಹಿಂದೆ ಹುಟ್ಟಿರಬೇಕು. ಕುಳಿತು ಹವೆಯುಣ್ಣಲು ಆರಾಮ, ಮೇಲೆ ನೀಲಾಕಾಶದ ಚಪ್ಪರ.

ಇಲ್ಲಿ ಕುಳಿತಾಗ ದಿಗಂತ ಕಾಯ ಅತಿ ಸಮೀಪ. ನಿರ್ಮಲ ಮನಸ್ಸೂ ದಿಗಂತ ವ್ಯಾಪಿಯಾದೀತು. ಬುಡದಲ್ಲೆ ವಿಸ್ತೀರ್ಣ ಸಮುದ್ರರಾಜ. ಸ್ವರ ಪ್ರಸ್ತಾರದಲ್ಲಿ ತೆರೆ ನೊರೆಗಳ ಆರ್ಭಟ ಗಗನ ಸದೃಶ್ಯ. ಈ ಮಧ್ಯೆ ಮರಳು ಕಣ್ಣಿಗೆ ರಮೆಯೂಟ. ಆ ಮರಳಲ್ಲೇ




ಚಿತ್ರ ೧, ೧೭೯೯ರಲ್ಲಿ

ಕಲ್ಪತರುಗಳ ಸಿರಿ ಸೊಬಗು ಗರಿಕೆದರಿದೆ. ಬಾನಿಗೇ ಚಾಮರ ಸೇವೆ ಸಲ್ಲಿಸುತ್ತಿದೆ.

ಈ ಕೋಟೆಯ ಬುಡಕ್ಕೆ ತಾಗಿಯೇ ಮಂದಗಮನೆಯಾದ ವಿಶಾಲ ಗುರುಪುರ ನದಿ. ಮುಂದಿನ ರಮಣೀಯ ದೃಶ್ಯ ದೃಷ್ಟಿಗೆ ಬೀಳುವುದಲ್ಲದೆ ಸಾಗರದ ಮೇಲಿಂದ ಬೀಸಿದ ಮಂದಮಾರುತ ತನುಮನಗಳಿಗೆ ಅವರ್ಣನೀಯ ಸುಖಾನುಭವವನ್ನು ಕೊಡುವುದು. ತಂಗಾಳಿ ಹಾಯಾಗಿ ಹಾಡು ಮೈಮನವನ್ನು ತಣಿಸುವುದು. ಇಲ್ಲಿ ಸಂಜೆಯ ದಿಗಂತ ರಂಜನೀಯ. ರವಿ ತೇಲಿದ ನದಿ, ಜಲಧಿಯ ಜಲಲಾವಣ್ಯ ಮನರಂಜನೀಯ. ಮನೋಹರಮಯ ಕಲ್ಪನೆಗಳು ಅವರ್ಣನೀಯ.

ಸಾಮಾನ್ಯನ ನೋಟದಲ್ಲಿ ಇಲ್ಲಿ ಉಂಟಾದ ಭೌಗೋಲಿಕ ವ್ಯತ್ಯಾಸದ ಇಲ್ಲವೇ ಮಾರ್ಪಾಟಿನ ಚಿತ್ರ ಸುಳಿಯಲಿಕ್ಕಿಲ್ಲ. ಆದರೆ ಇಲ್ಲಿನ ಕೋಟೆಯೇ ಇಲ್ಲಿ ಬದಲಾದ ಪರಿಸರಕ್ಕೆ ಮೂಕ ಸಾಕ್ಷಿ ನೀಡಬಹುದೇನೋ...

ಈ ಸುಲ್ತಾನ ಬತ್ತೇರಿ ಕ್ರಿ. ಶ. ೧೭೮೪ ರಲ್ಲಿ ನಿರ್ಮಾಣಗೊಂಡಿತೆಂಬ ದಾಖಲೆಗಳಿವೆ. ಕಗ್ಗಲ್ಲಿನ ಸದೃಢ ಕೋಟೆ. ಜಡಿ ಮಳೆಗಳನ್ನೇ ಕಂಡಂತಹದು. ನದಿಯ ಪ್ರವಾಹವನ್ನೇ ಮೀರಿದಂಥಹುದು. ನೂರಾರು ಬಿರುಗಾಳಿಗಳನ್ನು ತಬ್ಬಿ ದಬ್ಬಿದರೂ ನಿರ್ಭೀತವಾಗಿ ಉಪ್ಪಿನ ಹವೆಗೂ ಬಿರುಕಿಲ್ಲದೆ ಅಚ್ಚಳಿಯದೆ ಉಳಿದಿದೆ.

ಕಡಿದ ಶಿಲೆಗಲ್ಲುಗಳನ್ನು ಅಚ್ಚುಕಟ್ಟಾಗಿ ಸುಮಾರಾಗಿ ವೃತ್ತಾಕಾರದಲ್ಲಿ ಕಟ್ಟಲಾಗಿದೆ. ಕೋಟೆಯಲ್ಲಿ ಮೇಲಂತರದಲ್ಲಿ ಎದುರಿನ ನದಿಯಂಚಿನ ಭಾಗದ ಕೋಟೆಯಲ್ಲಿ ಅಲ್ಲಲ್ಲಿ ಚಿಕ್ಕ ಬಿಡು ಕಿಂಡಿಗಳಿವೆ. ಮೇಲ್ತುದಿಯಲ್ಲಿ ತೆರವು ಕಿಂಡಿಗಳು ಇವೆ. ಈ ಕೋಟೆಯನ್ನು ಟೀಪುವು ಸಮುದ್ರದಿಂದ ನುಗ್ಗಿ ಬರುತ್ತಿದ್ದ ವೈರಿಗಳ ವಿರುದ್ಧ ಕಾರ್ಯಾಚರಣೆಗಾಗಿ ಬಳಸಿಕೊಂಡವೆಂಬುದರಲ್ಲಿ ಸಂದೇಹವಿಲ್ಲ. ಕೆಳಗಡೆ ನೆಲಕ್ಕೆ ಸಮನಾಗಿ ಉತ್ತರದ ಪಾರ್ಶ್ವದಲ್ಲಿ ಗುಪ್ತ-ದ್ವಾರವೂ ಇದೆ. ಟೀಪುವಿನ ಈ ಕೋಟೆಯಿಂದಾಗಿ ಈ ಸ್ಥಳವನ್ನೇ ಬತ್ತೇರಿ ಎಂತ ಕರೆಯುವುದು ವಾಡಿಕೆ.

ಈ ಕೋಟೆಯ ಮುಂದುಗಡೆ ನದಿದಾಟಲು ಸೌಲಭ್ಯವಿದೆ. ದೋಣಿಗಳೂ ಸಾಕಷ್ಟಿವೆ. ನದಿ ದಾಟಿ ಸಮುದ್ರ ತೀರದ ಮರಳಿಗೆ ಕಾಲಿರಿಸಿದರೆ ಅಳಿವೆ ಎಂಬ ಊರು ಎದಿರಾಗುತ್ತದೆ. ನಿಜದಲ್ಲಿ ಅಳಿವೆ ಎಂದರೆ ನದಿ ಸಮುದ್ರವನ್ನು ಸಂಧಿಸುವ ಭಾಗ. ಈ ಮರಳ ರಾಶಿಯನ್ನು ದಾಟಿದರೆ ಭೋರ್ಗರೆಯುವ ಜಲಧಿ.




ಚಿತ್ರ ೨. ೧೯೭೬ ರಲ್ಲಿ

ಇಂದಿಗೆ ಈ ಕೋಟೆಯು ಹಿನ್ನೆಲೆಯಲ್ಲೇ ೧೭೫ ವರ್ಷ ಹಿಂದಿನ ಅಂದಿನ ಭೌಗೋಲಿಕ ಪರಿಸರಕ್ಕೂ ಇಂದಿನ ಇಲ್ಲಿನ ಸ್ಥಿತ್ಯಂತರಗಳಿಗೂ ಹೋಲಿಕೆಯಿಲ್ಲ. ಇಲ್ಲಿ ಬದಲಾದುದೇನೆಂಬುದನ್ನು ಊಹಿಸಲು ಕೋಟೆಯೇ ಮೂಕ ಸಾಕ್ಷಿ. ಅಲ್ಲದೆ ಬಳಿಯಲ್ಲೇ ಹರಿಯುವ ನದಿಯೂ ಪುರಾವೆ ಪುಷ್ಟೀಕರಿಸೀತು.

ಅಂದು ಕೋಟೆಯ ಉತ್ತರ ಪಾರ್ಶ್ವದಲ್ಲಿ ಗುರುಪುರ ನದಿಯೂ ದಕ್ಷಿಣ ಪಾರ್ಶ್ವದಲ್ಲಿ ದಕ್ಷಿಣದಿಂದ ಉತ್ತರಕ್ಕೆ ಹರಿದು ಬರುತ್ತಿದ್ದ ನೇತ್ರಾವತಿ ನದಿ. ಈ ಎರಡೂ ನದಿಗಳು ಕೋಟೆಗೆ ಎದುರಾಗಿಯೇ ಸಮುದ್ರವನ್ನು ಸಂಧಿಸುತ್ತಿದ್ದವು. ಈ ಅಳಿವೆಯಲ್ಲೇ ಕಾರ್ಯಾಚರಣೆಗಾಗಿ ಟೀಪುವಿನ ಕೋಟೆ ಹುಟ್ಟಿತ್ತು...

ಇಂದು ಈ ಪರಿಸ್ಥಿತಿ ಸಂಪೂರ್ಣ ಬದಲಾಗಿದೆ...ಆದರೆ ಕೋಟೆ ಮಾತ್ರ ಹಾಗೆಯೇ ಉಳಿದಿದೆ. ಕೋಟೆಯ ಉತ್ತರ ಪಾರ್ಶ್ವದಲ್ಲಿ ಇಂದಿಗೂ ವಿಶಾಲ ಗುರುಪುರ ನದಿ ಮಂದ-ಗಮನೆಯಾಗಿದ್ದಾಳೆ. ಕೋಟೆ ದಕ್ಷಿಣದಂಚಿ-ನಲ್ಲಿದ್ದ ನೇತ್ರಾವತಿ ಮಂಗಮಾಯ! ಬದಲಾಗಿ ಗುರುಪುರ ನದಿಯೇ ಮಂದಸ್ಮಿತಳಾಗಿ ದಕ್ಷಿಣಕ್ಕೆ ಮುಂದುವರಿದಿದ್ದಾಳೆ. ಕೋಟೆಯ ಮುಂದೆ ತೋರುತ್ತಿದ್ದ ಅಳಿವೆಯ ಭಾಗವೀಗ ಹೊಯಿಗೆಯ ಊರು "ಅಳಿವೆ" ಎಂಬ ನಾಮದಿಂದ ಉಳಿದಿದೆ. ಇಲ್ಲಿ ಹಲವು ಸಂಸಾರಗಳು ಗುಡಿಕಟ್ಟಿ ನೆಲಸಿ ಮತ್ಸ್ಯಮಾರುತದೊಂದಿಗೆ ಮೈಯೊಡ್ಡಿ ಬೆರೆತಿವೆ.

ನೇತ್ರಾವತಿ ಮಂಗಳೂರಿನಲ್ಲಿ ದಕ್ಷಿಣದಲ್ಲಿ ನೇರವಾಗಿ ಸಮುದ್ರವನ್ನು ಆಲಿಂಗಿಸುತ್ತಾಳೆ. ಗುರುಪುರ ನದಿ ದಕ್ಷಿಣಕ್ಕೆ ಇಲ್ಲಿನ ವರೆಗೂ ಮುಂದುವರಿದು ಕಡಲಿಗೆ ಸೇರುವಲ್ಲಿ ನೇತ್ರಾವತಿಯನ್ನು ಸಂಧಿಸುತ್ತಾಳೆ. ಆಗ ಕೋಟೆ ಮುಂದಿದ್ದ ಅಳಿವೆ ಈಗ ಸಮುದ್ರ ದಂಡೆಯಲ್ಲಿ ಎರಡು ಮೈಲಿಗಳಿಗಿಂತಲೂ ಹೆಚ್ಚು ದಕ್ಷಿಣಕ್ಕೇ ಸರಿದಿದೆ.

ಈ ರೀತಿಯಲ್ಲಿ ಪಾತ್ರ ಬದಲಾಗಲು ವಾಸ್ತವಾಂಶವೂ ಇಲ್ಲದಿಲ್ಲ. ಇದನ್ನು ತಿಳಿದವರೂ ವಿರಳ...? ನೇತ್ರಾವತಿ ಮಂಗಳೂರಿನ ದಕ್ಷಿಣದಂಚಿನಲ್ಲಿ ಮೊದಲು ಉನ್ನತ ಮಟ್ಟದಿಂದ ಹರಿದು ನುಗ್ಗಿ ಬರುವುದರಿಂದ ವಾಸ್ತವವಾಗಿ ಹೆಚ್ಚು ರಭಸದಿಂದ ಹರಿಯುವುದು, ಜೊತೆಗೆ ಹೇರಳ ಮರಳ ಹೊರೆಯನ್ನೂ ಹೊತ್ತು ತರುವುದು.

ಇದೇ ವೇಳೆಗೆ ಗುರುಪುರ ನದಿ ಹೆಚ್ಚು ಕಮ್ಮಿ ಉದ್ದಕ್ಕೂ ಸಮ ಮಟ್ಟದಲ್ಲೇ ಹರಿಯುವುದರಿಂದ ಸಾಮಾನ್ಯ ವೇಗ. ನೇತ್ರಾವತಿಯ ಒತ್ತಡ ಹೆಚ್ಚಾಗಿ ಹೆಚ್ಚು ಮರಳನ್ನು ಗುರುಪುರ ನದೀ ದಡದತ್ತ ಉತ್ತರ ಪಾರ್ಶ್ವಕ್ಕೆ ನೂಕುತ್ತ ಕಾಲಗರ್ಭದಲ್ಲಿ ಅಳಿವೆ ದಕ್ಷಿಣಕ್ಕೆ ಸರಿಯುವಂತಾಗಿದೆ. ಶತಮಾನದ ಈ ಕಾರ್ಯಾಚರಣೆಯಿಂದಾಗಿ ನೇತ್ರಾವತಿ ನದೀ ಮರಳು ನದೀ ಮುಖವನ್ನು ದಕ್ಷಿಣದತ್ತ ತಳ್ಳುತ್ತ ಬಂದಿದೆ. ಕ್ರಮೇಣ ನೇತ್ರಾವತಿಯ ನೇರ ಸೆಳೆತದಿಂದಾಗಿ ಅಳಿವೆಯು ನೇತ್ರಾವತಿ ನದಿಯ ನೇರಕ್ಕೇ ರೂಪುಗೊಂಡಿತು. ಸೌಮ್ಯ ಸಂಪನ್ನೆಯಾದ ಗುರುಪುರ ನದಿ ಬಳಿಕ ನೇತ್ರಾವತಿ ತೆರವು ಮಾಡಿದ ನದಿ ಪಾತ್ರಕ್ಕೆ ಹರಿದು ದಕ್ಷಿಣಕ್ಕೆ ಮುಂದುವರಿದು ನೇತ್ರಾವತಿ ನದೀ ಮುಖವನ್ನೇ ಸೇರುವಂತಾಗಿದೆ ಅಷ್ಟೆ.

ಟೀಪುವಿನ "ಸುಲ್ತಾನ ಬತ್ತೇರಿ" ಎಂದು ಸ್ಥಳೀಯರಿಂದ ಕರೆಯಲ್ಪಡುವ ಈ ಕೋಟೆ ಇಲ್ಲಿನ ಭೌಗೋಲಿಕ ಸ್ಥಿತ್ಯಂತರಗಳನ್ನು ಕಣ್ಣಿಗೆ ಕಟ್ಟಿ ವರ್ಣಿಸಲು ಸಾಕ್ಷಿಯಾಗಿ ತಲೆಯೆತ್ತಿ ನಿಂತಿದೆ ಇಲ್ಲ...ಎಂಬ ನನ್ನ ಊಹೆಗೆ ಸಮ-ರ್ಥನೆ ದೊರಕುತ್ತದೆ.

✡



ರುಚಿಕರ ಪುಷ್ಟಿಕರ
ಬ್ರಿಟಾನಿಯಾ ಗ್ಲುಕೋ ಬಿಸ್ಕಿಟ್

B R I T A N N I A

ಬೆಳೆಯುವ
ಮಕ್ಕಳಿಗೆ ಸ್ವಾದಿಷ್ಟ
ಸಂಗಾತಿ



ಬಿಸ್ಕಿಟ್ ಬಲು ಶ್ರೇಷ್ಠ

237-13



ನಾನು ಸೋಮಾರಿಯೆಂದು ಪ್ರಸಿದ್ಧನಾಗಿದ್ದೇನೆ. ಈ ಬಿರುದನ್ನು ನಾನು ಯಾವ ಪ್ರತಿಭಟನೆಯೂ ಇಲ್ಲದೆ ಒಪ್ಪಿಕೊಂಡು ಬಿಡುತ್ತೇನೆ. ಏಕೆಂದರೆ, ನನಗೇ ಹಲವಾರು ಬಾರಿ ಹಾಗೆನ್ನಿಸಿಬಿಟ್ಟಿದೆ. ಆದರೇನು ಮಾಡಲಿ? ನನ್ನ ಕೊಠಡಿಯ ಬಾಗಿಲು ತೆರೆದು, ಪಶ್ಚಿಮ ದಿಕ್ಕಿನ ದಿಗಂತ ನೋಡುತ್ತಾ ಕೂತುಬಿಟ್ಟರೆ, ನನಗೇನೂ ಬೇರೆ ಬೇಡವೆನಿಸಿಬಿಡುತ್ತದೆ. ನಾನೆಂದೂ ಈ ರೀತಿ ಮೈಮರೆಯುತ್ತಿದ್ದ ನೆನಪಿಲ್ಲ. ಎಲ್ಲಾ ಈ ನಡುವೆಯೇ ಈ ಮಳೆಗಾಲ ಆರಂಭವಾದ ಮೇಲೇ...

ನಾನೆಂದೂ ಮಳೆಗಾಲ ನೋಡೇ ಇಲ್ಲವೆಂದಲ್ಲ. ನನಗೆ ಇನ್ನೇನು, ಇಪ್ಪತ್ತನಾಲ್ಕು ತುಂಬಲಿದೆ. ಅಂದರೆ ಇದು ನನ್ನ ಇಪ್ಪತ್ತನಾಲ್ಕನೇ ಮಳೆಗಾಲ. ಹುಡುಗನಿದ್ದಾಗ ಮಳೆಯಲ್ಲೇ ಬೀದಿ ಕಾಲುವೆಗಳಿಗೆ ಅಡ್ಡಗಟ್ಟೆಗಳನ್ನು ಕಟ್ಟುವಲ್ಲಿ ಪ್ರವೀಣನಾಗ ಹೊರಟು ಅಪ್ಪನ ಕೈಲಿ ಅಂಡಿನ ಮೇಲೆ ಒದೆಸಿಕೊಂಡಿದ್ದೇನೆ. ಇನ್ನೊಮ್ಮೆ ಮಳೆಯಲ್ಲಿ ನೆನೆದು, ವಿಷಮ ಶೀತ ಜ್ವರವಾಗಿ ಮೂರು ತಿಂಗಳು ಮಲಗಿದ್ದು ನೆನಪಿದೆ. ಏಕೆ, ಹೋದ ವರ್ಷ ಬೆಂಗಳೂರಿನಲ್ಲಿದ್ದಾಗ, ಕಾಲೇಜಿನ ವರಾಂಡದಲ್ಲಿ ಮಳೆ ನಿಲ್ಲಲಿ ಎಂದು ಕಾದು ಕಾದು, ಮಳೆ ನಿಲ್ಲದೆ ಕತ್ತಲಾಗಿ, ಕೊನೆಗೆ ಮಳೆಯಲ್ಲೇ ಓಡಲು ಹೋಗಿ ಜಾರಿ ಬಿದ್ದದ್ದು ನೆನಪಿದೆ, ನನ್ನ ಮೊದಲ ತಿಂಗಳ ಸಂಬಳದಲ್ಲಿ ಹೊಲಿಸಿದ ನನ್ನ ಅಚ್ಚುಮೆಚ್ಚಿನ ಪ್ಯಾಂಟೇ ಕೊಚ್ಚೆಯಾಗಿರಲಿಲ್ಲವೇ? ಆದರೆ... ಆದರೆ... ನಿನಗನ್ನಿಸಿತ್ತು ಆ ಹೋದ ಮಳೆಗಾಲದಲ್ಲಿಯೇ ಏನೋ ವಿಶೇಷತೆ ಇದೆ ಎಂದು ಮಳೆ ನಿಲ್ಲಲಿ ನಿಲ್ಲಲಿ ಎಂದು ಆ ಬೃಹತ್ ಕಂಭದ ಮರೆಯಲ್ಲಿ ನಿಂತಿದ್ದಾಗ ಮಳೆಯ ಇರಿಚಲು, ಮುಚ್ಚಿಲ್ಲದ ನನ್ನ ಮುಂಗೈಗಳಿಗೆ ಹಾಗೂ ಪಾದಗಳಿಗೆ ಬಡಿಯುತ್ತಿದ್ದಾಗ ತಣ್ಣನೆಯ ಗಾಳಿ ನನ್ನ ತಲೆಯ ಉದ್ದಾನೆ ಕೂದಲನ್ನು ಗಾಳಿಯಲ್ಲಿ ತೂಗುತ್ತಿದ್ದಾಗ, ಅಲ್ಲಿ– ಆ ಎದುರಿನ ಮರದಲ್ಲಿ ಮೈಮುದುರಿ ಕುಳಿತಿದ್ದ ಹದ್ದು, ಐದೈದು ನಿಮಿಷಕ್ಕೊಮ್ಮೆ ಪಟಪಟನೆ ರೆಕ್ಕೆ ಬಡಿಯುತ್ತಿದ್ದಾಗ ನನ್ನ ಹೃದಯ ಯಾವುದೋ ಯಾವುದೋ ಶಬ್ದಗಳಲ್ಲಿಡಲಾಗದ, ಮಿದುಳಿನಲ್ಲಿ ವಿಶ್ಲೇಷಿಸಲಾಗದ ಏನನ್ನೋ ಮಿಡಿಯುತ್ತಿತ್ತು... ಏನದು?

ಕಾವ್ಯವೇ? ಭಯವೇ? ಏನು, ಏನದು?

'ನೆನಪೇ, ಥೂ... ನೀನು ನಿಷ್ಕರುಣೆ...'

ಅಂದು ನೇರವಾಗಿ ಬಸ್ ಹತ್ತಿ ಮನೆಗೆ



ಡಿ. ಎಸ್. ನಾಗಭೂಷಣ

ಬಂದು ಬೆಚ್ಚಗೆ ಮಲಗಿಬಿಟ್ಟೆ. ಚೆನ್ನಾಗೇನೋ ನಿದ್ದೆ ಬಂತು ಎನಿಸಿತ್ತು. ಆದರೆ ಬೆಳಗಿನ ಜಾವ ಚಳಿಗೆ ಧಿಗ್ಗನೆ ಎದ್ದು ಕೂತಾಗ, ಥಟ್ಟನೆ, ಆಗ ತಾನೆ ಬಿದ್ದಿದ್ದ ಕನಸು ನೆನಪಿಗೆ ಬಂತು. ಎಂಥಾ ಕನಸದು ? ನಾನು ಯಾವುದೋ ಮ್ಯಾಥಮ್ಯಾಟಿಕ್ಸ್ ಪುಸ್ತಕ ಓದುತ್ತಿದ್ದೆ. ಅಂತೂ ಬಹಳ ಸೀರಿಯಸ್ಸಾಗಿ ಓದುತ್ತಿದ್ದೆ! ಎಲ್ಲಿ ಕೂತಿದ್ದೆ, ಏನು ಎಂಬುದೊಂದೂ ಗೊತ್ತಿಲ್ಲ. ಆದರೆ ಎದುರಿಗೊಂದು ಶುಭ್ರ ಗ್ರೌಂಡ್ ಗ್ಲಾಸಿನ ಕಿಟಕಿಯೊಂದು ಮಾತ್ರ ಕಾಣುತ್ತಿತ್ತು. ಅದು ಮುಚ್ಚಿತ್ತು. ಇದ್ದಕ್ಕಿದ್ದಂತೆ ಯಾರೋ ಹಿಂದಿನಿಂದ ನನ್ನ ಹೆಗಲ ಮೇಲೆ ಕೈ ಇಟ್ಟಂತಾಯಿತು. ಚಕ್ಕನೆ ಹಿಂದಿರುಗಿ ನೋಡಿದೆ. ಯಾರೂ ಇರಲಿಲ್ಲ. ಆಶ್ಚರ್ಯದಿಂದ ಎದ್ದು ನಿಂತೆ. ಎದುರಿನ ಗ್ರೌಂಡ್ ಗ್ಲಾಸಿನ ಹಿಂದೆ ಮೋಡಗಳು ತೇಲಿ ಹೋಗುತ್ತಿದ್ದಂತೆ, ಅವುಗಳ ನೆರಳುಗಳು ತೆಳುವಾಗಿ ಕಪ್ಪಗೆ ನಿಧಾನವಾಗಿ ಚಲಿಸುತ್ತಿದ್ದವು. ನಾನು ನನ್ನ ಬೆನ್ನ ಹಿಂದಿನ ದಿಕ್ಕಿನತ್ತ ಮೆಲ್ಲನೆ ನಡೆದೆ. ಖಾಲಿ ಕೋಣೆ ! ನಾನೊಮ್ಮೆ ಕೂಗಿದರೆ, ಇಡೀ ಭವನವೇ ಪ್ರತಿಧ್ವನಿಸುವಷ್ಟು ವಿಶಾಲವಾದ ಕೋಣೆ ! ಯಾರೋ ಇಳಿದು ಹೋದ ಶಬ್ದ... ನಾನು ಹಿಂಬಾಲಿಸಿದೆ. ಕೆಳಗಿನ ಕೊಠಡಿಗೆ ಇಳಿದ ಶಬ್ದ... ನಾನು ಮೆಟ್ಟಿಲುಗಳ ಮೇಲೆ ಪಟಪಟನೆ ಇಳಿದೆ. ಮತ್ತೂ ಕೆಳಗಿನ ಕೊಠಡಿಗೆ ಇಳಿದ ಶಬ್ದ. ನಾನೂ ಇಳಿದೆ. ಯಾರೂ ಇರಲಿಲ್ಲ. ವಿಶಾಲವಾದ ಕೋಣೆಗಳು. ಸುತ್ತ ಬೆಳ್ಳನೆ ಭಣಗುಡುವ ಗೋಡೆಗಳು. ಇನ್ನೂ ಒಂದು ಮಹಡಿ ಇಳಿದೆ. ಮತ್ತೆ ಅದೇ ಶಬ್ದ...ಸುರುಳಿ ಸುರುಳಿಯಾಗಿ ಪಾತಾಳಕ್ಕಿಳಿದಂತೆ ಒಂದು ಕೊಠಡಿಯಿಂದ ಮತ್ತೊಂದಕ್ಕೆ ಇಳಿದು ಹೋಗಿದ್ದ ಮೆಟ್ಟಿಲುಗಳನ್ನು ಮುಗಿಸಿ ಕಟ್ಟಡದ ಹೊರಕ್ಕೆ ಬಂದಿದ್ದೆ. ಯಾರೂ ಇಲ್ಲ. ನಾನೊಬ್ಬನೇ ಆ ಭೂತಾಕಾರದ ಕಟ್ಟಡದೊಳಗೆಲ್ಲಾ ನಾನೊ-ಬ್ಬನೇ... ನಿಶ್ಶಬ್ದ... ಎಲ್ಲವೂ ಸ್ತಬ್ಧ... ಎದುರಿಗಿನ ಪೊದೆಗಟ್ಟಿದ ಅದೆಂಥದೋ ಮರದಲ್ಲಿ ಯಾವುದೋ ಪಕ್ಷಿ ರೆಕ್ಕೆಯನ್ನು ಪಟಪಟನೆ ಬಡಿದ ಶಬ್ದ... ಆ ಧ್ವನಿ ಬಿಳಿಯ ಭಣಗುಟ್ಟುವ ಭೂತಾಕಾರದ ಕಟ್ಟಡದ ತುಂಬಾ ಪ್ರತಿಧ್ವನಿಸುವಂತೆ ಅಥವಾ ನನ್ನ ಹೃದಯದಲ್ಲೇ ಪ್ರತಿಧ್ವನಿಸಿದಂತೆ... ?

ಅಷ್ಟೇ ಕನಸು– ಅಥವಾ ನೆನಪಿರುವುದು ಅಷ್ಟೇ. ಏನಿದರ ಅರ್ಥ ?.

ಇದು ನಡೆದು ಒಂದು ವರ್ಷವಾಗಿದೆ. ಮತ್ತೊಂದು ಮಳೆಗಾಲ ಬಂದಿದೆ. ಅಪ್ಪ, ಅಮ್ಮ, ಅಣ್ಣ, ಅತ್ತಿಗೆ, ತಂಗಿಯರು, ಪಾಪಚ್ಚಿ ಇವರೆನ್ನೆಲ್ಲಾ ಬಿಟ್ಟು ಸಾವಿರಾರು ಮೈಲಿ ದೂರ ಬಂದಿದ್ದೇನೆ. ('ಅಡ್ವೆಂಚರಸ್ ಲೈಫ್ ಬೇಕೂಂತಿದ್ದೆಯಲ್ಲಾ ಹೋಗು. ಇಪ್ಪತ್ತುಮೂರುವರ್ಷ ಆಗಿದೆ. ಬದುಕನ್ನು ಒಂಟಿಯಾಗಿ ಎದುರಿಸೋ ಧೈರ್ಯ ಈಗ ಬರಬೇಕು; ಅದರ ಅನುಭವ ಈಗಾಗಬೇಕು! ಎಂದಿದ್ದ ನಮ್ಮ ರಾಜ) ನೀರು ಗಡ್ಡೆಯಾಗುವ ಚಳಿಯನ್ನು ಕಂಡಿ

ದ್ದೇನೆ. ಮೈಯಿಂದ ಬಿರಬಿರನೆ ಬೆವರು ಬಸಿಯುವ ಬೇಸಿಗೆಯಲ್ಲಿ ಬೆಂದಿದ್ದೇನೆ; ಪಾಪಚ್ಚಿಯ ಹಲ್ಲಿಲ್ಲದ ಬಾಯಿಂದ ಉದುರುತ್ತಿದ್ದ ಮುದ್ದುಮಾತುಗಳ ನೆನಪನ್ನು ತುಂಬಿಕೊಂಡು ಬಂದ ವಿಷಣ್ಣ ದಿನಗಳನ್ನು ಕೊಂದಿದ್ದೇನೆ (ಅವನು 'ಚಿಕ್ಕಪ್ಪಾ' ಎನ್ನಲಾಗದೆ, ತನ್ನ ಕೆಳದನಿಯಲ್ಲಿ 'ಪೀಪಪ್ಪಾ' ಎಂದು ಚನ್ನಾಗಿ ರಾಗ ಎಳೆಯುತ್ತಾನೆ!) ಆದರೆ ಈವರೆಗೆ ಎಂದೂ ಕಾಡದ ಪ್ರಶ್ನೆ— ಎಂದೂ ನೆನಪಿಗೆ ಬರದ ಈ ಕನಸು, ಇಂದು– ಕೊಠಡಿಯೊಳಗೆ ಕುಳಿತು ಬಾಗಿಲಾಚೆ ಕಾಣುವ ಮೋಡಗಳ ಸಂತೆಯನ್ನು ದಿಟ್ಟಿಸುತ್ತಿದ್ದಾಗಲೇ ಏಕೆ ನೆನಪಿಗೆ ಬರಬೇಕು? ಏಕೆ ನೆನಪಿಗೆ ಬರಬೇಕು?

ಇದು ಮಳೆಗಾಲದ ಕೊನೆ ದಿಲ್ಲಿಯಲ್ಲಿ ಇಷ್ಟು ಮಳೆ ಬಿದ್ದಿದ್ದೇ ಕಂಡಿಲ್ಲ ಎಂದು ಹೇಳುತ್ತಾರೆ. ಆದರೆ ನಾನು ಹೇಳುತ್ತೇನೆ: ಮಳೆಗಾಲ ಎಂದರೆ ಇದೇ. ಹಿಂದೆ ಒಂದು ಹೋದವುಗಳಲ್ಲ. ಏಕೆಂದರೆ ನಾನು ಹಿಂದಿನ ಹಲವಾರು ಮಳೆಗಾಲಗಳಲ್ಲಿ ಹಗಲಿಗೆ ಚೀಲವೇರಿಸಿಕೊಂಡು ಮೊಣಕಾಲವರೆಗಿನ ನೀರಿನಲ್ಲಿ 'ಚುಕುಬುಕು' ರೈಲಿ ಬಿಟ್ಟುಕೊಂಡು ಶಾಲೆಗೆ ಓಡಿದ್ದೇನೆ. ಮನೆ ಮುಂದೆ ಸೂರಿನಿಂದ ಸುರಿಯುತ್ತಿದ್ದ ಮಳೆನೀರಿನ ಕೆಳಗೆ ಕೂತು, ಧುಮುಕಿ ಬಂದ ಗಂಗೆಯನ್ನು ತಡೆದ ಈಶ್ವರನ ಅಭಿನಯ ಮಾಡಿದ್ದೇನೆ (ನಾಲ್ಕನೇ ಕ್ಲಾಸಿನ ಪುಸ್ತಕದಲ್ಲಿನ ಗಂಗಾವತರಣ ಅಥವಾ ಭಗೀರಥ ಪ್ರಯತ್ನದ ಚಿತ್ರ ಬಹಳ ಮೆಚ್ಚುಗೆಯಾಗಿತ್ತು!) ಮನೆಯವರ ಕಣ್ಣು ತಪ್ಪಿಸಿ, ಗೋಣಿಯ ಗೊರಗು ಹಾಕಿಕೊಂಡು, ಸ್ನೇಹಿತರೊಂದಿಗೆ ಮಾವಿನ ತೋಪಿಗೆ ನುಗ್ಗಿ, ಮಳೆಗೆ ಬೀಳುವ ಮಾವಿನಕಾಯಿಗಳನ್ನು ಆಯ್ದುಕೊಳ್ಳಲು ಕಚಪಿಚ ಕೆಸರಿನಲ್ಲಿ ಒರಳಾಡಿದ್ದೇನೆ. ಆದರೆ... ಆದರೆ... ಆ ನೆನಪುಗಳು... ಹಗುರಾದ ಆವಿಯ ಹಾಗೆ... ಅಲ್ಲಿ ಕಾಣಿಸುತ್ತಿರುವ ಆಕಾಶದಲ್ಲಿ ನಿರ್ಲಿಪ್ತವಾಗಿ ತೇಲಿ ಹೋಗುತ್ತಿರುವ ಅರಳೆಯಂತಹ ಮೋಡಗಳ ಹಾಗೆ... ಆದರೆ ಈ ಮಳೆಗಾಲ ನನ್ನ ಹೃದಯದ ರಹಸ್ಯಾತಿರಹಸ್ಯ ಮೂಲೆಯಲ್ಲಿನ ಯಾವುದೋ ಒಂದು ತಂತಿಯನ್ನು ವಿಲಂಬಿತಲಯದಲ್ಲಿ ಮೀಟಿದಂತೆನಿಸುತ್ತಿದೆ.

ಇಂದು ಬರಬಹುದಾದ ಮಳೆಯೇ ಈ ಋತುವಿನ ಕೊನೆಯ ಮಳೆಯಾಗಬಹುದು. ಸುರಿದು ಸುರಿದು ದಿಲ್ಲಿಯ ಜನರನ್ನು ಕಂಗಡಿಸಿಬಿಟ್ಟಿದ್ದ ಮಳೆ ಇದ್ದಕ್ಕಿದ್ದಂತೆ ನಿಂತು ಹೋಗಿತ್ತು. ಮಳೆ ಅಷ್ಟೆ ಅಂದರು; 'ಸಧ್ಯ' ಎಂದು ನಿಟ್ಟುಸಿರು ಬಿಟ್ಟರು. ಆಮೇಲೆ ಎರಡು ಮೂರು ದಿನಕ್ಕೊಮ್ಮೆ ಒಂದೈದು ನಿಮಿಷ ತುಂತುರು ಉದುರುತ್ತಿತ್ತು. ಅಷ್ಟೆ. ಆದರೆ ಇವತ್ತು ಬೆಳಿಗ್ಗೆ ಎದ್ದಾಗಲೇ ಮೋಡ ಮುಚ್ಚಿತ್ತು. ಆಫೀಸಿನಲ್ಲಿ ಯಾರೋ 'ಇವತ್ತು ಜೋರಾಗಿ ಮಳೆ ಬರುತ್ತೆ. ಪ್ರಾಯಶಃ ಈ ಸೀಜನ್ನಿನ ಕೊನೆ ಮಳೆ ಆಗಬಹುದು' ಅಂದರು, ಆತ ಹುಚ್ಚನಿರಬೇಕು! ಇಲ್ಲದಿದ್ದರೆ ಹೀಗೆ ಮಳೆಗಾಲಕ್ಕೊ ನಿರ್ದಿಷ್ಟವಾಗಿ ಲಕ್ಷ್ಮಣರೇಖೆ ಎಳೆಯುತ್ತಿದ್ದನೇ?

ಮಧ್ಯಾಹ್ನ ಆಫೀಸು ಮುಗಿಸಿ ಕೊಠಡಿಗೆ ಬಂದೆ. ಮೂರನೇ ಮಹಡಿ: ಕಡಿದಾದ ಕಿತ್ತು ಹೋದ ಮೆಟ್ಟಲುಗಳು. (ಇದನ್ನು ಕಟ್ಟಿಸಿದವನನ್ನು ಎದುರಿಗೆ ನಿಲ್ಲಿಸಿ ಒಂದೇ ಗುರಿಗೆ ಗುಂಡು ಹಾಕಬೇಕು). ಕೊಠಡಿಯ ಬೀಗ ತೆಗೆದು ಒಳಹೊಕ್ಕೊಡನೆ ಥಗೇ ಎಂದು ಹಿಂದಿನ ಬಾಗಿಲು ತೆರೆದೆ. ಚೌಕಟ್ಟಿನ ಹೊರಗೆ ಮೋಡಗಳ ಸೈನ್ಯ...ನೆನಪುಗಳ ದಾಳಿ...ಎಷ್ಟೊಂದು ನೆನಪುಗಳು! ಅವು ಹೇಗೆ ಒತ್ತರಿಸಿಕೊಂಡು ಬಂದು ಗೊಂದಲವುಂಟುಮಾಡಿದುವೆಂದರೆ, ಈಗ ನನಗೆ ಏನೂ ನೆನಪಿಲ್ಲ—ಆ ಒತ್ತಡ ಹುಟ್ಟಿಸಿದ ಅವ್ಯಕ್ತ ವೇದನೆಗಳನ್ನುಳಿದು.

ಈ ನಡುವೆ, ಆಕಾಶದಲ್ಲಿ ಚಲಿಸುವ ಮೋಡಗಳನ್ನು ನೋಡುತ್ತಾ ಕೂಡುವುದೆಂದರೆ ನನಗೆ ಇಷ್ಟ. ಇದನ್ನು ನನ್ನ ಗೆಳೆಯರೂ ಗುರುತಿಸಿದ್ದಾರೆ. ಒಂದೆರಡು ಬಾರಿ 'ಅದು ಒಳ್ಳೆಯದಲ್ಲ ಎಂದು ಸಹ ಹೇಳಿದ್ದಾರೆ. ಅದೇಕೊ? ಆದರೆ, ಚಲಿಸುವ ಮೋಡಗಳನ್ನು ನೋಡುವುದರಲ್ಲಿ ಏನು ಮಜಾ ಇದೆ ಎಂಬುದು ಅವರಿಗೇನು ಗೊತ್ತು ?

ನಿನ್ನೆ ರಾತ್ರಿ ಕೂಡ ಹಾಗೇ. ಆದರೆ ಅಷ್ಟೊಂದು ಮೋಡಗಳಿರಲಿಲ್ಲ. ಎರಡು ಮೂರು ದಿನಗಳ ಹಿಂದೆ ತಾನೇ ಹುಣ್ಣಿಮೆಯಾಗಿತ್ತು. ನಾನು ಕೊಠಡಿಯ ಹಿಂಭಾಗಕ್ಕೆ ಸೇರಿದಂತಿದ್ದ ತೆರೆದ ವರಾಂಡದಲ್ಲಿ ಮಲಗಿದ್ದೆ. ಮೇಲೆ ಬೆಳದಿಂಗಳು ತುಂಬಿದ್ದ ಆಕಾಶ. ಸ್ವಲ್ಪ ಮೇಲಕ್ಕೆ ನೆಗೆದರೆ ಸಾಕು. ಕೈಗೆ ಸಿಕ್ಕಿಬಿಡುವುದೇನೋ ಎನ್ನುವಷ್ಟು ತಗ್ಗಿನಲ್ಲಿ, ಬೆಳದಿಂಗಳಿನಲ್ಲಿ ಹೊಳೆಯುತ್ತ ಮೋಡಗಳ ಹಿಂಡು ಹೊರಟಿತ್ತು. ನೋಡುತ್ತಾ ನೋಡುತ್ತಾ ಹೇಗೆ ಆನಂದಪಟ್ಟೆ! ಆದರೆ ಆ ಆನಂದ ಮುಕ್ತ ಪ್ರವಾಹವಲ್ಲ ಆ ಆನಂದದ ಹರಿವನ್ನು ಎಲ್ಲೋ ಏನೋ ಅಡ್ಡಹಾಕುತ್ತಿತ್ತು. ಅದು ಮಾತ್ರ ಸಹಿಸಲಾಗದ ನೋವು. ಮೋಡಗಳೇ ನೀವೇಕೆ ನನ್ನನ್ನು ಹೀಗೆ ಹಿಂಸಿಸುತ್ತೀರಿ ಎಂದು ಕೂಗುವಷ್ಟು ವೇದನೆ. ಆನಂದದ ವೇದನೆ. ಇವುಗಳಲ್ಲಿ ಯಾವುದು ಸತ್ಯ? ಅವೆರಡರ ನಡುವಣ ಗೆರೆ ಯಾವುದು? ಎಲ್ಲಿದೆ ಅದು?

ಆದರೆ ಈಗ ನಿನ್ನೆ ರಾತ್ರಿಯಂತಿಲ್ಲದೆ ಆಕಾಶದ ತುಂಬಾ ಮೋಡಗಳು ದಟ್ಟವಾಗಿ ತುಂಬಿದ್ದವು. ಥಣ್ಣನೆ ಗಾಳಿ ಬೇರೆ ಹಿತವಾಗಿ ಬೀಸತೊಡಗಿತು. ಮಳೆ ಬಂದೇ ಬರುತ್ತದೆಂದು ಸಾರುತ್ತಾ ಎರಡು ಪದರದ ಮೋಡಗಳು; ಮೇಲೆ ದಟ್ಟನೆಯ ಬಿಳಿ ಮೋಡದ ಕೊಡೆ; ಅದರ ಕೆಳಗೆ ಈ ಪುಟ್ಟ ಪುಟ್ಟ, ಅರಳೆಯಂತಹ—ಆದರೆ—ಕಪ್ಪಾದ ಮೋಡಗಳ ದಂಡು! ಈ ಮೋಡಗಳ ಮೆರವಣಿಗೆಯನ್ನು ಸೀಳಿಕೊಂಡೆಂಬಂತೆ ಸೂರ್ಯ ತನ್ನ ಪ್ರಖರವಾದ ಕಿರಣಗಳನ್ನು ತೂರಿದ್ದ.

ದಿಲ್ಲಿಯಲ್ಲಿ ಪಾರಿವಾಳಗಳು ಬಹಳ. ಸುಲ್ತಾನರ ಕಾಲದಿಂದಲೂ ದಿಲ್ಲಿ ಅವಕ್ಕೆ ಆವಾಸ ಸ್ಥಾನ. ಸುಲ್ತಾನರು ತಿಂದು ತೇಗಿ ಮಜಾ ಮಾಡಿ ಮಣ್ಣಲ್ಲಿ ಮಣ್ಣಾಗಿ ಹೋಗಿದ್ದಾರೆ. ಅವರ ಮೇಲೆ ಇತಿಹಾಸದ ಗೋರಿಗಳೆದ್ದಿವೆ- ಪಕೆ, ಎರಡು ತಿಂಗಳುಗಳ ಹಿಂದೆ ಆಗ್ರಾಕ್ಕೆ ಹೋಗಿದ್ದಾಗ ತಾಜ್‌ಮಹಲ್ ಮೇಲೆ ಕೂತ ಕಾಗೆಯನ್ನು ಕಂಡು ತತ್‌ಕ್ಷಣವೇ ಕ್ಯಾಮರಾವನ್ನು 'ಕ್ಲಿಕ್' ಅನ್ನಿಸಲಿಲ್ಲವೊ? ಅರಮನೆಗಳ ಅಂತಃಪುರಗಳ ಸ್ತ್ರೀಯರ ಕೋಮಲ ಕೈಗಳಿಂದ ಮೈ ಸವರಿಸಿಕೊಳ್ಳುತ್ತಿದ್ದ ಪಾರಿವಾಳಗಳ ಸಂತತಿ ಇಂದು ದಿಲ್ಲಿಯ ಆಗಸದ ತುಂಬಾ ಅನಾಥವಾಗಿ ಹಾರಾಡುತ್ತಿವೆ. ಆ ಸುಲ್ತಾನರ ಸಂತತಿ? ಚಾಂದಿನಿ ಚೌಕದಲ್ಲೋ ಹಳೆಯ ಸಬ್ಜಿ ಮಂಡಿಯಲ್ಲೋ ಕೈಗಾಡಿ ಎಳೆಯುತ್ತಿರಬಹುದು ಓ ಕಾಲವೇ, ನೀನೆಷ್ಟು ನಿಷ್ಕರುಣಿ..

ದೀಪಾವಳಿಗೆ ಊರಿಗೆ ಹೋಗಬೇಕು. 'ಬಾ ಬಾ' ಎಂದು ಎಲ್ಲರೂ ಬರೆದಿದ್ದಾರೆ. ಅಮ್ಮನಿಗೆ ಒಂದು ಬೆಚ್ಚಗಿನ ಸ್ವೆಟರ್ ತೆಗೆದುಕೊಂಡು ಹೋಗಿ ಕೊಡಬೇಕು. ಸಾಧ್ಯವಾದರೆ ಅಪ್ಪನಿಗೆ ಒಂದು ಉಣ್ಣೆಯ ಶಾಲು ಕೂಡಾ. ಅಷ್ಟು ಹೊತ್ತಿಗೆ ಪಾಪಚ್ಚಿಯ ತಲೆಗೂದಲು ದಟ್ಟಗೆ ಬೆಳೆದಿರುತ್ತದೆ. ಎಲ್ಲ ಹಲ್ಲುಗಳೂ ಮೂಡಿರುತ್ತವೆ. ನಕ್ಕರೆ ಹೇಗಿರಬಹುದು? ಮೊನ್ನೆ ಊರಿಂದ ಕಾಗದ ಬಂದಿತ್ತು. ತುಂಬಾ ಹಠ ಕಲಿತಿದ್ದಾನಂತೆ. ಮಾತು ಬಹಳವಾಗಿದೆಯಂತೆ. 'ಕತ್ತೆ ಮುಂಡೆ', 'ಅಯೋಗ್ಯ' ಮುಂತಾದ ಅಮೂಲ್ಯ ಶಬ್ದಗಳನ್ನು ಚೆನ್ನಾಗಿ ಜ್ಞಾಪಕದಲ್ಲಿಟ್ಟುಕೊಂಡಿದ್ದಾನಂತೆ. ಸಾರ್ವಜನಿಕ ಸಂಪರ್ಕವೂ ಜೋರಾಗಿದೆಯಂತೆ. ಗೇಟಲ್ಲಿ ನಿಂತು ಬೀದಿಯಲ್ಲಿ ಹೋಗುವವರಿಗೆಲ್ಲಾ ಕಲ್ಲು ಎಸೆಯುವನಂತೆ..

ಎದುರು ಬರ್ಸಾತಿಯ ಚೋಟೂ (ಅವನ ಹೆಸರು ಕೃಷ್ಣನ್; ಮುದ್ದಿಗೆ ಚೋಟೂ) ಒಮ್ಮೆ ಭಯಂಕರ ಶಿಳ್ಳು ಹೊಡೆದ. ಗುಂಪುಗೂಡಿ ಕೂತಿದ್ದ ಪಾರಿವಾಳಗಳ ಹಿಂಡು ಗಾಬರಿಯಿಂದ ಗುಂವ್ವನೆ ಆಕಾಶದಲ್ಲಿ ಚಿತ್ರ ಬಿಡಿಸಿದಂತೆ ಚೆಲ್ಲಾಪಿಲ್ಲಿಯಾದವು. ಆದರೆ ಒಂದೇ ಒಂದು ಪಾರಿವಾಳ ಮಾತ್ರ— ಆ ವೆಂಟಿಲೇಟರ್‌ನ ಗೂಡಿನೊಳಗೆ ಏನೂ ಆಗದಂತೆ ಕೂತೇ ಇತ್ತು. ಎದುರು ಕಟ್ಟಡದ ಎರಡನೇ ಅಂತಸ್ತಿನಲ್ಲಿದ್ದ ಅಜ್ಜಿ ಹೂಬತ್ತಿ ಹೊಸೆಯುತ್ತಾ ಆ ಒಂಟಿ ಪಾರಿವಾಳವನ್ನೇ ದಿಟ್ಟಿಸುತ್ತಿತ್ತು.

ಮೋಡಗಳ ಮೆರವಣಿಗೆ ನಡೆದೇ ಇತ್ತು.

ಗಾಳಿ ತಣ್ಣಗೆ ಬೀಸುತ್ತಲೇ ಇತ್ತು. ಮಳೆ ಬರುವ ಸೂಚನೆ ಮುಂದುವರೆದಿತ್ತು. ಒಟ್ಟಾರೆ ವಾತಾವರಣ ಬಹಳ ಹಿತವಾಗಿತ್ತು; ಒಂದು ಥರ ಅಮಲು ಎಂದೇ ಹೇಳಬೇಕು. ನಾನು ಕೆಳಗಿಣುಕಿ ನೋಡಿದೆ. ನನ್ನ ಕೊಠಡಿಯ ಕೆಳಗಿನ ಅಂತಸ್ತಿನ ಮನೆಯಲ್ಲಿನ ಹೆಂಗಸಿನ ಸೊಂಟದಲ್ಲಿದ್ದ ಒಂದು ವರ್ಷದ ಮಗು ನನ್ನನ್ನು ನೋಡಿ ಕಿಲಕಿಲನೆ ನಕ್ಕಿತು. ನಾನು ಮರು ನಕ್ಕೆ.

ಎದುರಿನ ವೆಂಟಿಲೇಟರಿನಲ್ಲಿ ಕೂತಿದ್ದ ಪಾರಿವಾಳ ಮೆಲ್ಲಗೆ ಹಾರಿ ಬಂದು ನಾನು ಕೂತಿದ್ದ ನಮ್ಮ ಚಾಚುಮರಾಂಡದ ಮೋಟು ಗೋಡೆಯ ಮೇಲೆ ಕೂತಿತು. ಅದರ ಕುತ್ತಿಗೆಯ ಮೇಲಿನ ಗರಿ ದಟ್ಟವಾಗಿ ಬೆಳೆದು, ಅದು ಅತ್ತಿಂದಿತ್ತ ಕತ್ತು ತಿರುಗಿಸಿದಾಗ ಅಸಹ್ಯವಾಗಿ ಸೆಟೆದು ನಿಲ್ಲುತ್ತಿತ್ತು. 'ಥುತ್' ಎಂದು ಅದನ್ನು ಅಲ್ಲಿಂದ ಅಟ್ಟಿದೆ.

ಎದುರು ಮನೆಯ ಟೆಲಿವಿಷನ್ ಅಂಟೆನಾದ ಮೇಲೆ ಕಾಗೆಯೊಂದು ಕೂತು ಒಂದೇ ಸಮನೆ ಅರಚುತ್ತಿತ್ತು. ಒಮ್ಮೆ ಜೋರಾಗಿ ಗಾಳಿ ಬೀಸಿತು. ಸ್ವಲ್ಪ ಚಳಿ ಕೂಡ ಅನಿಸಿತು. ಇನ್ನೇನು ಮಳೆ ಬಂದೇ ಬಂತು ಅನ್ನಿಸಿತು. ಟಿ. ವಿ. ಅಂಟೆನಾ ಗಾಳಿಯ ರಭಸಕ್ಕೆ ಅತ್ತಿಂದಿತ್ತ ತೂಗಿತು. ಅದರ ಮೇಲೆ ಕೂತಿದ್ದ ಕಾಗೆ ಗಾಬರಿಯಿಂದ ರೆಕ್ಕೆ ಬಡಿದು ಹಾರಿ ಹೋಯಿತು.

ಆಕಾಶದತ್ತ ನೋಡಿದೆ. ಮೋಡಗಳು ಮೆಲ್ಲನೆ ಅಡಿಯಿಟ್ಟು ಸಾಗುತ್ತಲೇ ಇದ್ದವು. ಸೂರ್ಯನ ಪ್ರಕಾಶಕ್ಕೆ ಮಿಂಚುತ್ತಾ ನಡೆದಿದ್ದವು. ಅವನ್ನು ಮುಟ್ಟಲೋ ಎಂಬಂತೆ ಅಲ್ಲೊಂದು ಇಲ್ಲೊಂದು ಪಕ್ಷಿಗಳ ಹಿಂಡು ಆಗಸದಲ್ಲಿ ಸುತ್ತುತ್ತಿದ್ದವು. ಈಗ ಮಳೆ ಬಂದುಬಿಟ್ಟರೆ ?

ಪಾಪ. ರಘುನಾಥನಿಗೆ ಹೀಗಾಗಬಾರದಿತ್ತು. ಆತ ಹೋದ ವರ್ಷ ತಾನೆ ಮದುವೆಯಾಗಿದ್ದ. ಆಕೆಯನ್ನು ಮದುವೆಯಾಗಲು ಅಪ್ಪ ಅಮ್ಮ ಎಲ್ಲರನ್ನೂ ತ್ಯಜಿಸಿ ಬಂದುಬಿಟ್ಟ. ಹೆಂಡತಿ ಈಗ ಗರ್ಭಿಣಿ. ಆದರೆ ಆಕೆಗೆ ತೀವ್ರ ಅಲ್ಸರ್ ಅಂತೆ. ಹೊಟ್ಟೆ ಆಪರೇಷನ್ ಆಗಬೇಕಂತೆ ! ಏನಿದು ದುರಂತ ? ರಘುನಾಥ ಬಹಳ ಭೋಲಾ ಭಾಲಾ ಮನುಷ್ಯ. ಅಪ್ಪ ಅಮ್ಮನಿಗೆ ಕಾಗದ ಬರೆದರೆ, 'ನೀನಿನ್ನೂ ಬದುಕಿದ್ದೀಯಾ?' ಎಂದು ಉತ್ತರ ಬರೆದರಂತೆ. ಇಂತಹ ಅಪ್ಪ ಅಮ್ಮಂದಿರೂ ಇರುತ್ತಾರಾ ! ಮೊನ್ನೆ ನನ್ನ ಬಳಿ ವಿಷಯ ಹೇಳಿಕೊಂಡು, 'ಈ ದಿಲ್ಲಿಯಲ್ಲಿ ನಾನೊಬ್ಬನೇ! ನನಗ್ಯಾರು ದಿಕ್ಕು !' ಎಂದು ಅತ್ತುಬಿಟ್ಟ. 'ಒಂದಿಷ್ಟು ಕೈಗಡ ಕೊಡಿ' ಎಂದು ಕೇಳಿದ. ಕೊಟ್ಟೆ. ಹಿಂತಿರುಗಿಸಿದ. ಮತ್ತೊಮ್ಮೆ ಕೇಳಿದ. ಕೊಟ್ಟೆ. ಮಗದೊಮ್ಮೆ ಕೇಳಿದರೂ ಕೊಡೋಣ. ಆದರೆ, ಏಕೆ, ಮುಖದ ತುಂಬಾ ಆ ವಿಷಣ್ಣತೆ ! ಏಕೆ ಆರಡಿಯ ದೇಹವನ್ನು ಗೇಣುದ್ದ ಮಾಡಿ ಬೇಡುವ ಆ ಕರಳು ಹಿಂಡುವ ದೈನ್ಯ ? ಛೆ! ಮಾನವೀಯತೆಯನ್ನೇ ತುಳಿದ ನಿಂತ ಅಸಹ್ಯ ದೈನ್ಯ! ಅದಕ್ಕೇ ಈ ನಡುವೆ ಆತನನ್ನು ನೋಡಿದರೆ ಬೇಸರ; ಅನಿಷ್ಟವೇ ಎದುರು ಒಂದು ನಿಂತ ಅನುಭವ. ಆತನ ಮುಖ ನೋಡಲೂ ಏನೋ ಒಂದು ಅಂಜಿಕೆ.

ನಾನು ಮತ್ತೆ ಆಕಾಶದ ಕಡೆ ನೋಡಿದೆ. ಏನು, ಈ ಮೋಡಗಳ ತುಂಡುಗಳಿಗೆ ಕೊನೆಯೇ ಇಲ್ಲವೇ ? ಸುಮ್ಮನೆ ನಿಶ್ಶಬ್ದವಾಗಿ ಸಾಗುವುದಷ್ಟೇ ಇವುಗಳ ಕೆಲಸವೋ, ಅಥವಾ... ಇಲ್ಲ ಅನಿಸಿತು; ಈ ಮೋಡಗಳು ನಿಶ್ಶಬ್ದವಾಗಿ ಸಾಗುತ್ತಿಲ್ಲ ಅನಿಸಿತು...

ಮಳೆ ಬಂದರೆ ! ಮಳೆ ಬರಬೇಕು... ಆಕಾಶದ ತುಂಬಾ ಮೋಡಗಳಿದ್ದರೆ ಮಳೆ ಬರಲೇಬೇಕು.

ಪಕ್ಕದ ಬಸರ್ಾತಿಯ ಪಂಜಾಬೀ– ಅಗರ್ ವಾಲ್– ತೆರೆದ ವರಾಂಡಾದ ಡೈನಿಂಗ್ ಟೇಬಲ್ಲಿನ ಮೇಲೆ ಚಿರೋಟಿಗಳನ್ನು ಪೇರಿಸಿಕೊಂಡು ಹಾಲುಯುದ್ದಿಕೊಂಡು ಒಂದಾದ ಮೇಲೊಂದನ್ನು ಭಕ್ಷಿಸುತ್ತಿದ್ದ. ಮುಂದೆ ಬಂದು ತೂಗುತ್ತಿರುವ ಅವನ ಹೊಟ್ಟೆಯೊಳಗೆ ಒಂದು ಡೈನಾಮೈಟ್ ಹಚ್ಚಿಬಿಡುವಂತಿದ್ದರೆ! ಅವನ ಮುಖ ನೋಡಿ: ಎಷ್ಟು

ಮನೆ ಹಾಳು ಮಾಡಿದ ರಾಕ್ಷಸನೋ!

ತಂಗಾಳಿಯ ಬೀಸು ಕಡಿಮೆಯಾದಂತೆನಿಸಿತು. ನಿರೀಕ್ಷಿಸಲಾದ ಕೊನೆಯ ಮಳೆ ಬರಲಾರದೆ? ಮೋಡಗಳೇನೋ ನಡೆದೇ ಇದ್ದವು....

ಕೆಳಗಿನ ರಸ್ತೆಯಲ್ಲಿ ಭಿಕ್ಷುಕಿ ಮಲಗಿದ್ದಳು. ಅವಳನ್ನು ನಾನು ದಿನಾಲೂ ನೋಡುತ್ತೇನೆ. ಅವಳು ಬದುಕಿದ್ದಾಳೋ ಸತ್ತಿದ್ದಾಳೋ ಅನುಮಾನ. ಏಕೆಂದರೆ, ನಾನು ಅವಳನ್ನು ನೋಡಿದಾಗಲೆಲ್ಲಾ ಮುಖದ ಮೇಲೆ ಮುಸುಕು ಹಾಕಿ, ನೊಣ ಮುತ್ತುವ ಗಾಯಗಳಿಂದ ತುಂಬಿ ಹೋಗಿರುವ ತಮ್ಮ ಪಾದಗಳನ್ನು ರಸ್ತೆಯಂಚಿಗೆ ದೂಡಿ ಬಿದ್ದುಕೊಂಡಿರುತ್ತಾಳೆ. ಒಮ್ಮೆ ಹತ್ತಿರ ಹೋಗಿ ಪರೀಕ್ಷಿಸಬೇಕು— ದೇಹ ಉಸಿರಾಡುತ್ತಿರುವುದೋ ಇಲ್ಲವೋ ಎಂದು. ಆದರೆ ಅವಳ ಬತ್ತಿದ ಎದೆಯ ಮೇಲೆ, ಪ್ರಪಂಚದ ಸಮಸ್ತ ರೋಗಗಳ ಆವಾಸಸ್ಥಾನದಂತಿರುವ ಒಂದು ಮಗು ಯಾವಾಗಲೂ ಒದ್ದಾಡುತ್ತಲೇ ಇರುತ್ತದೆ. ಅಂದರೆ, ಅವಳಿನ್ನೂ ಉಸಿರಾಡುತ್ತಲೇ ಇರಬೇಕು. ಆ ಭಿಕ್ಷುಕಿ ಎಂದರೆ ನನಗೆ ನೆನಪಾಗುವುದು ಎರಡೇ: ಒಂದು, ಅವಳ ಪಕ್ಕದಲ್ಲಿ ಯಾವಾಗಲೂ ಖಾಲಿ ಇರುವ ತಟ್ಟೆ, ಇನ್ನೊಂದು, ಹೊರಕ್ಕೆ ಕಾಣುವ, ಅವಳ ದೇಹದ ಏಕೈಕ ಭಾಗವಾದ ಪಾದಗಳು. ಆ ಪಾದಗಳನ್ನು ನೀವೊಮ್ಮೆ ನೋಡಬೇಕು! ಅದರಲ್ಲಿ ಮೂಡಿರುವ ಅಸಂಖ್ಯಾತ ಬಿರುಕುಗಳು, ಸಿಡಿದು ಹೋಗುವಂತೆ ಉಬ್ಬಿರುವ ನರಗಳ ಜಾಲ, ಈ ಪ್ರಪಂಚದ ಒಂದು ಅತ್ಯುನ್ನತ ದಾರುಣ ಕಥೆಯನ್ನು ಹೇಳುತ್ತವೇನೋ...

ಆದರೆ ಈ ತರದ ದೃಶ್ಯಗಳನ್ನು ನಾನೀ-




"'ಆತ ಪೂರ್ವಜರನ್ನು ಓಡಿಸುತ್ತಾನೆ' ಅಂತ ನೀವು ಹೇಳಿದಾಗ ನಾನು ತಿಳಿದುಕೊಂಡದ್ದೇ ಬೇರೆ."

ವರೆಗೆ ಕಂಡೇ ಇಲ್ಲವೇ? ಈ ಇಪ್ಪತ್ತಮೂರು ವರ್ಷಗಳಲ್ಲಿ ನಾನು ಕಂಡೇ ಇಲ್ಲವೆಂದಲ್ಲ. ಆದರೆ ಈ ವಿವರಗಳೆಲ್ಲಾ ಈಗ ಮಾತ್ರ— ಗಾಳಿ ಬೀಸಿ ಮೋಡಗಳು ದಟ್ಟವಾಗಿ ಹರಡುತ್ತಾ ಸಾಗುವಂತೆ ಚಲಿಸುವುದನ್ನು ನೋಡುತ್ತಾ ಕೂತ ವೇಳೆಯಲ್ಲಿ-ಮಳೆ ಬರ ಬಹುದೆಂದು ನಿರೀಕ್ಷಿಸುತ್ತಿರುವ ವೇಳೆಯಲ್ಲಿ ಮಾತ್ರ- ಏಕೆ ಬಿಚ್ಚಿಕೊಳ್ಳಬೇಕು? ಅದಕ್ಕೇ ನಾನು ತಿಳಿದದ್ದು ಎಲ್ಲಾ ಮಳೆಗಾಲಗಳಂತಹ ಮಳೆಗಾಲವಲ್ಲ ಇದು ಎಂದು.

ಎದುರು ಮನೆಯ ಮುಂದುಕಪ್ಪ ತುಂಡು ಪಂಚೆಯುಟ್ಟು ಪಾತ್ರೆಯೊಂದರಲ್ಲಿ ನೀರ-ನ್ನಿಟ್ಟು ಹಣೆಗೆ ವಿಭೂತಿ ಬಳಿದುಕೊಳ್ಳುತ್ತಿದ್ದ. ಬಹುಶಃ ಸಂಧ್ಯಾವಂದನೆಗಾಗಿ ಸಿದ್ಧತೆ. ಇರಬೇಕು.

ವೇಳೆ ಎಷ್ಟೆಂದು ನೋಡಲು ಹಿಂದಿರುಗಿದೆ. ಗಡಿಯಾರ ನಿಂತು ಹೋಗಿತ್ತು. ವೇಳೆ ಅನ್ನುವುದು ಬದುಕಿಗೆ ಒಂದು ಕೋ—ಆರ್ಡಿನೇಟ್ ಇದ್ದಂತೆ. ಅದೇ ನಿಂತರೆ...

ವೇಳೆ ಅಂದಾಜು ಮಾಡಲು ಆಕಾಶ ನೋಡಿದೆ. ಆಶ್ಚರ್ಯ! ಮೋಡಗಳ ಹಿಂಡು ಮಾಯವಾಗಿದ್ದವು. ಒಂದೋ ಎರಡೋ ತುಂಡು ಮೋಡಗಳು ಮಂದೆಯಲ್ಲಿ ಹಿಂದೆ ಬಿದ್ದ ಕುರಿಗಳಂತೆ ನಿರ್ಲಿಪ್ತವಾಗಿ ಚಲಿಸುತ್ತಿದ್ದವು ನಿರ್ಲಿಪ್ತವಾಗಿ?

ಇನ್ನೇನು, ಅವೂ ದೂರವಾಗಿ ಆಕಾಶ ಬರಿದಾಗುತ್ತದೆ; ಬಿಕೋ ಎನ್ನಿಸುತ್ತದೆ ಎಂದು ಬೇಸರವಾಯಿತು. ಯಾವುದೋ ಮೂಲೆಯಲ್ಲಿ ಭಯ ಕೂಡ ಮೊಳಕೆಯೊಡೆಯುತ್ತಿತ್ತು. ಯಾಕೀ ಭಯ? ಯಾಕೀ ನೋವು? ತೆಳುವಾದ ಮೋಡಗಳು ಚಲಿಸುವುದನ್ನು ಇನ್ನು ಕಾಣಲಾರೆನೆಂದೇ? ಅವಿಲ್ಲದೆ ನಾನು ಒಂಟಿಯಾಗಿ ಹೋಗುತ್ತೇನಲ್ಲಾ ಎಂದೇ? ಮಳೆ ಬರಲಾರದೆ ಇನ್ನು?

ಅದೋ, ಆಕಾಶ ಬರಿದಾಯಿತು. ಬೆತ್ತಲೆಯಾಯಿತು. ಖಾಲಿ ಆಕಾಶವೇ, ನೀನು ಶೂನ್ಯ ಎಂದು ಇನ್ನೇನು ನನ್ನ ಮನಸ್ಸು ಉದ್ಗರಿಸಬೇಕು- ಅಷ್ಟರಲ್ಲಿ ಆಕಾಶದ ಗುಪ್ತಗೂಡೊಂದರಿಂದ ಇಳಿದು ಬಂದಂತೆ ಹದ್ದೊಂದು ಬಂತು! ಎಲ್ಲಿತ್ತು ಈ ಪಕ್ಷಿ?

ನೇರವಾಗಿ ಹಾರಿ ಬಂದು ನನ್ನ ವರಾಂಡದ ಗೋಡೆಯ ಅಡ್ಡ ಕಂಬಿಯ ಮೇಲೆ ಕುಳಿತಿತು. ತನ್ನ ಮೊಂಡ ಕೊಕ್ಕನ್ನು ಗಾಳಿಯಲ್ಲಿ ಅತ್ತಿಂದಿತ್ತ ಮಸೆಯಿತು. ಹೌದು! ಆಗಲೇ— ಆ ಕ್ಷಣದಲೇ ನನ್ನ ಆ ಹಳೆಯ ಕನಸು— ನನ್ನಲ್ಲಿ ಅಷ್ಟೊಂದು ದಿಗಿಲು ಹುಟ್ಟಿಸಿದ್ದ ಕನಸು— ಈ ವರೆಗೆ ನೆನಪಿಗೇ ಬಾರದಿದ್ದ ಕನಸು, ಧಡಕ್ಕನೆ ನೆನಪಿಗೆ ಬಂದದ್ದು.

ಯಾರೋ ಹೊರಗೆ ಬಾಗಿಲು ತಟ್ಟಿದ ಸದ್ದು...

ಕಂಬಿಯ ಮೇಲೆ ಕೂತಿದ್ದ ಹದ್ದಿಗೆ ಕಾಗದ ಉಂಡೆ ಮಾಡಿ ಎಸೆದೆ. ಹದ್ದು ಅಲ್ಲಿಂದ ಕದಲಿತು. ಆಕಾಶಕ್ಕೆ ಏರಿತು. ಬತ್ತಲ ಬಾನಲ್ಲಿ ಮರೆಯಾಯಿತು. ಅದು ದಿಗಂತದಾಚೆ ಇರಬಹುದಾದ ಒಂಟಿ ಮರದ ಮೇಲೆ ಆರಾಮವಾಗಿ ಕೂತು ಪಟಪಟನೆ ರೆಕ್ಕೆ ಬಡಿದಿರಬಹುದೇ?

ಬಾಗಿಲು ತಟ್ಟಿದವ ಅನಿಷ್ಟ ಮುಖದ ರಘುನಾಥ ಇರಬೇಕೆಂದು ಧನಗುಟ್ಟುವ ಹೃದಯದೊಂದಿಗೆ ಬಾಗಿಲತ್ತ ಮೆಲ್ಲಗೆ ನಡೆದೆ.

*

ಇದು ಮಳೆಗಾಲದ ಕೊನೆ. ದಿಲ್ಲಿಯಲ್ಲಿ ಇಷ್ಟು ಮಳೆ ಬಿದ್ದಿದ್ದೇ ಕಂಡಿಲ್ಲ ಎಂದು ಹೇಳುತ್ತಾರೆ. ಆದರೆ ನಾನು ಹೇಳುತ್ತೇನೆ: ಮಳೆಗಾಲ ಎಂದರೆ ಇದೇ; ಹಿಂದೆ ಬಂದು ಹೋದವುಗಳಲ್ಲ... ✡



# ಒಂದು ಊರಿನ ಕತೆ

**ಇದೊಂದು ಗ್ರಾಮ್ಯ ಜೀವನದ ಸುತ್ತ ಹೆಣೆದ ಕತೆ. ಪುರಾಣ ಪಠಣ, ಜ್ಯೋತಿಷ್ಯ ಮುಂತಾದ ಜನತೆಯ ನಂಬಿಕೆಯ ಬೇರುಗಳಿಗೆ ನೀರು ಹಾಕಿ ಪ್ರತಿಷ್ಠೆ ಗಳಿಸಿದ ಜೋಯಿಸ, ಅವನಿಗೆ ಸಮಾಜದಲ್ಲಿ ಮನ್ನಣೆ ದೊರೆತದ್ದನ್ನು ನೋಡಿ ಅದನ್ನು ತಾನೂ ಗಿಟ್ಟಿಸಿಕೊಳ್ಳಲು ಹವಣಿಸುವ ಬಸವಯ್ಯ, ಊರಿನ ಧಣಿ ಎಂದೇ ಹೆಸರಾಗಿದ್ದ ಪಟೇಲ, ತಾನೇ ಹರಿಜನರ ಲೀಡರ್ ಆಗಬೇಕೆನ್ನುವ ಭೈರಪ್ಪ, ಹಳೆಯದೆಲ್ಲಾ ಹೊನ್ನೆಂದು ಭಾವಿಸಿಕೊಂಡಿರುವ ಮಾರಜ್ಜ ಹೀಗೆಯೇ ಈ ನೀಳ್ಗತೆಯ ಉದ್ದಕ್ಕೂ ಬರುವ ಅನೇಕ ಪಾತ್ರಗಳು ನಿಜ ಪ್ರಪಂಚದಲ್ಲಿಯೂ ಕಂಡುಬರುವುದು ಅಸಹಜವೇನಲ್ಲ. ಹೊಸಗಾಲದ ಗಾಳಿ ಬೀಸುತ್ತಿರುವ ಸಂದರ್ಭದಲ್ಲಿ ಪರಂಪರಾಗತವಾಗಿ ಬಂದ ಅನೇಕ ಮೌಲ್ಯಗಳ ಕೊಂಡಿ ಕಳಚಿ ಹೋಗಿ ಹೊಸ ಸಾಮಾಜಿಕ ವ್ಯವಸ್ಥೆ, ಸಾಮಾಜಿಕ ಪ್ರಜ್ಞೆ ರೂಪುಗೊಳ್ಳುವಾಗ ಸಮಾಜವನ್ನು ನಿಯಂತ್ರಿಸುವ ಶಕ್ತಿ ಸೂತ್ರಗಳು ಹೇಗೆ ಬದಲಾಗುತ್ತದೆಂಬುದನ್ನು ಬರಗೂರು ರಾಮಚಂದ್ರಪ್ಪನವರು ಇಲ್ಲಿ ಬಹು ಮನೋಹರವಾಗಿ ಚಿತ್ರಿಸಿದ್ದಾರೆ. ಶಕ್ತಿ ಸೂತ್ರಗಳನ್ನು ನಿಯಂತ್ರಿಸುವ ವ್ಯಕ್ತಿಗಳು ಬದಲಾದರೂ ಅವುಗಳ ಮನೋಭಾವ ಮಾತ್ರ ಕೆಲ ಮಟ್ಟಿಗೆ ಇನ್ನು ಹಳೆಯ ಜಾಡನ್ನೇ ಹಿಡಿದಿರುತ್ತದೆಂಬುದು ನಮ್ಮ ಕಾಲದ ಒಂದು ದುರಂತ ವಿಶೇಷ.**

ಪಾಳುಬಿದ್ದ ಕೋಟೆಯೊಳಗಿನ ಈ ಊರಲ್ಲಿ— ಯಾವ ಊರಲ್ಲಿ, ಹೆಸರೇನು ಅನ್ನೋದು ಅಪಕೃತ, ಒಂದು ಊರು ಅಂತ ಇಟ್ಕೊಂಡರೆ ಸಾಕು— ಯಾರಾದ್ರೂ ಕೆಮ್ಮಿದರೂ ಒಂದು ಅರ್ಥ ಕಟ್ಟಬಹುದು. ಹಾಗಿದೆ ಪರಿಸ್ಥಿತಿ. ಬೀಸೊ ಬಿರುಗಾಳಿ, ಮೇಲಕ್ಕೆ ಏಳೊ ಧೂಳು, ಅಡ್ಡಾದಿಡ್ಡಿಯಾಗಿ ಹಾರೊ ಮರದ ಎಲೆ–ಬ್ರಾಹ್ಮಣರ ಕೇರಿ ಪಕ್ಕದಲ್ಲಿ ಬಿದ್ದ ಊಟದೆಲೆ, ಆಗಾಗ್ಗೆ ಒಂದೇ ಕಡೆ ಸುತ್ತಿ ಮೇಲೆ ಏಳೊ ಸುಂಟರಗಾಳಿ–ಯಾವುದೇ ತಗೊಳ್ಳಿ ಊರಿನಲ್ಲಿರೊ ಪ್ರಸ್ತುತಕ್ಕೂ ಅದಕ್ಕೂ ಸಂಬಂಧ ಕಲ್ಪಿಸಬಹುದು; ಅದು ಸರಿ ಅದ್ಯಾಕೆ ಅಂಥ ಸ್ಥಿತಿ ಬಂತು? ಅದೇನಂಥ ಘಟನೆ ನಡೀತು?– ಹೀಗೆ ಪ್ರಶ್ನೆ ಹಾಕ್ತಾ ಹೋದರೆ ಕೊನೆ ಮೊದಲಿಲ್ಲ; ಪ್ರಶ್ನೆಗಳಿಗೆ ಹೆಚ್ಚು ಹೊತ್ತು ಅವಕಾಶ ಕೊಡೊ ಇಷ್ಟವೂ ಇಲ್ಲ. ಸೀದಾ ನೇರವಾಗಿ ವಿಷಯಕ್ಕೆ. ಬರ-

ಬೇಕೂಂತ ಇದ್ದರೂ ಆ ಹಳ್ಳಿ ಹೆಣ್ಣು ಮಕ್ಕಳು ಬಿಟ್ಟರೆ ಕೇಳಿ. ಹೆಣ್ಣುಮಕ್ಕಳು ಅಂದ್ರೆ ಮೈನೆರೆದವರೇ ಸರಿ ಅಂತ ತಟಕ್ಕನೆ ತೀರ್ಮಾನಕ್ಕೆ ಬಂದ್ರೆ ತಪ್ಪು. ಈಗ ಪ್ರಸ್ತಾಪ ಮಾಡಿದ ಹೆಣ್ಣುಮಕ್ಕಳಲ್ಲಿ ಐದು ವರ್ಷದಿಂದ ಹಿಡಿದು ಐವತ್ತು ಮೀರಿಹೋಗಿರೊರೂ ಇದಾರೆ. ಆದರೆ ಅವರವರದೇ ನಡವಳಿಕೇಲಿ ಇದಾರೆ; ಮೈನೆರೆದು ಮದುವೆ ಕಾಯ್ತಿರೋರು, ತಮ್ಮ ಗೆಳತಿ ಗೌರಿಗೆ ಏನಾಗಿತ್ತಪ್ಪ ಅಂಥ ಕೆಟ್ಟಾಪತ್ತು ಅಂತ ಗುಸು ಗುಸು ಅಂದರೆ. ಮದುವೆಯಾಗಿ ಮಕ್ಕಳನ್ನೂ ಹಡೆದಿರೋರು ತಮ್ಮದೇ ಒಂದು ಗುಂಪು ಮಾಡ್ಕೊಂಡು 'ಎಂಥ ಕಾಲ ಬಂದ್ಬಿಟ್ತು! ನಾವೆಲ್ಲ ಮೈನೆರೆದ್ರೆ ಸಾಕು ಮನೆ ಬಿಟ್ಟು ಬಂದ್ರೆ ಪಂಗ್ದಬ್ತಿದ್ರು; ಈಗ ಯಾವ್ದು ಲೆಕ್ಕವಿಲ್ಲ; ಹಳ್ಳೀನೆ ಕೆಟ್ಹೋಯ್ತು?' ಇತ್ಯಾದಿ

ಸುಮ್ನಿರ್ತಾರ? ಕಿರಿಯರಿಗೆ ಬುದ್ಧಿವಾದ ಹೇಳ್ದೆ ಬಿಟ್ಟಾರ? 'ಕಾಲ ಕೆಟ್ಟದ್ದು; ಹೆಂಗ್ ಹೋಗಿ ಹೆಂಗ್ ಬರ್ತೈತೊ ಹೇಳಾಕಾಗಲ್ಲ; ಕೂಲಿನಾಲಿ ಹೋಗಿದ್ದಾಗ ಹೆಂಗೊ ಹಂಗೆ ಮನ್ನಾಗ್ ಬರ್ಬೇಕು' ಮುಂತಾಗಿ ಹೇಳ್ತಾ ಇದ್ದರು. ಕೆಲವರು ವಯಸ್ಸಿಗೆ ಬಂದ ಹುಡು ಗೇರಿಗೆ, ಸದ್ಯ ತಂತಮ್ಮ ಗುಟ್ಟುಗಳು ಹೊರ ಬರದಿದ್ದರೆ ಸಾಕು ಅನ್ನೋ ಆತಂಕ ಇದು ಹೆಚ್ಚು ಕಾಲ ಇರೋದಲ್ಲ ಅಂತ ಅವರಿಗೆ ಆಗ ಅರ್ಥವಾಗೋದು ಹೇಗೆ? ಗಂಡಸರೂ ಅವರವರ ವಯಸ್ಸಿಗೆ ತಕ್ಕಂತೆ ಹೆಚ್ಚೂ ಕಮ್ಮಿ ಹೀಗೇ ಇದ್ದರು.

ಅಂತೂ ಎಲ್ಲರಿಗೂ ರಾತ್ರಿ ನ್ಯಾಯ ಪಂಚಾ ಯತೀಲಿ ಏನಾಗಬಹುದು ಅನ್ನೋ ಕುತೂಹಲ. ಕೆಲವರಿಗಂತೂ 'ಇನ್ನೇನಾ- ಗುತ್ತೆ; ಆ ಮಾದಿಗರ ರಾಮ ಓದಿರಬಹುದು ಒಂದಷ್ಟು; ಆದ್ರೆ ಅವ್ರಪ್ಪನಿಗೇನಿದೆಯಪ್ಪ ಹೇಳ್ಕೊಳ್ಳೊ ಅಂತೋದು? ಇನ್ನೂ ಆ ಭೈರಪ್ಪ ಏದಾಸ್ ನೋಡು, ಅವ್ರ ಹಟ್ಟೀಗೆ ಭದ್ರವಾದ ಕುಳ. ಹಂಗಿದ್ರೂ ಏನ್ ನಡ್ಯಂಗೈತೆ ಇವ್ರದೆಲ್ಲ ನಮ್ಮೂರಾಗೆ. ಹೇಪ ರ್‍ನಾಗೆ ನಡಿಸ್ಕಬೇಕು ಅಷ್ಟೇ? ಎನ್ನಿಸಿದರೆ ಇನ್ನು ಕೆಲವರು ಇದನ್ನೂ ಒಪ್ಪಿಕೊಂಡು 'ಗೌರೀ ಅಪ್ಪ ಕೃಷ್ಣಪ್ಪ ನಾಯ್ಕರ ಜಾತೀ- ನಾಗೆ ದೊಡ್ಡ ಕುಳ. ಸಮ್ಕೆ ಬಿಟ್ಟಾನ? ಮಾದಿಗರ ರಾಮನ್ನ ಚಿಂದಿ ಮಾಡಿಸ್ಬಿಡ್ತಾನೆ' ಎನ್ನುತ್ತಾರೆ, ಇನ್ನು ಕೆಲವರಿಗಂತೂ ಇದು ಊರ ಪ್ರತಿಷ್ಠೆಯ ಪ್ರಶ್ನೆ. ಹರಿಜನರ ಹಟ್ಟಿ ಯವರೇ ಹೀಗೆ ಮಾಡೋಕೆ ಶುರು ಮಾಡಿದರೆ ಮುಂದೇನು ಗತಿ? ಎಂಥ ಕಾಲ ಬಂತಪ್ಪ ಪರಮಾತ್ಮ— ಅನ್ನೋ ಚಿಂತೆ ಜೊತೆಗೆ- ಹಿಂಗೆ ಬಿಡಕೂಡ್ದು ಈ ಬಡ್ಡಿ ಮಕ್ಕಳನ್ನ ಅನ್ನೊ ಆಗ್ರಹ. ಹೀಗೆ ಒಬ್ಬೊಬ್ಬರ ರೀತಿ ಒಂದೊಂದು ಆಗಿರೋದಿಕ್ಕೆ ಸಾಕಷ್ಟು ಕಾಲಾ ವಕಾಶವೂ ಸಿಕ್ಕಿತ್ತು. ಯಾಕೆಂದರೆ ಊರಿನ ಚೇರ್ಮನ್, ಹಳೇ ಪಟೇಲರು- ಚಂದ್ರೆ ತಿಮ್ಮೇಗೌಡರು- ಬೆಂಗಳೂರಿಗೆ ಹೋದವರು ಇನ್ನೂ ಬಂದಿರಲಿಲ್ಲ. ಅವರು ಬರದೆ ಇನ್ನಿಬ್ಬರು 'ನ್ಯಾಯಮೂರ್ತಿಗಳು' (ಬಸಯ್ಯನವರು ಮತ್ತು ಜೋಯಿಸರು) ಏನೂ ಮಾಡೋ ಹಾಗಿರಲಿಲ್ಲ. ಜೋಯಿಸರು ಮೌನವಾಗಿದ್ದರೂ ಬಸಯ್ಯನವರು ಪಟೇಲ ರಿಲ್ಲದಿದ್ದರೂ ನ್ಯಾಯಮಾಡುವ ಆತುರ ತೋರಿದ್ದರು. ಈಗ ಇದಕ್ಕೂ ಕಾರಣ ಇದೆ.

ಜೋಯಿಸರು ಆ ಊರಲ್ಲಿ ಹೇಳಿದ್ದೇ ವೇದವಾಕ್ಯವಾಗಿದ್ದ ಒಂದು ಕಾಲವಿತ್ತು. ಈಗಿರೋ ಪಟೇಲರ ಅಪ್ಪನ ಕಾಲದಿಂದ ಇವರೇ ಊರಿನ ಜ್ಞಾನ ಕೇಂದ್ರ. ಅಷ್ಟೇಕೆ ಅವರೇ ಒಪ್ಪಿಕೊಳ್ಳೊ ಹಾಗೆ ಊರಿನಲ್ಲಿ ಅವರ ಅಪ್ಪ, ತಾತ, ಮುತ್ತಾತ ಹೀಗೇ ಇಂತಹ ಒಂದು ಪರಂಪರೆಯೇ ಇದೆ. ಆದರೆ ಯಾವಾಗ್ಲೂ ಹಾಗೇ ಇರೋಲ್ಲ; ಇದ್ದರೂ ಅಷ್ಟು ಪ್ರಮಾಣದಲ್ಲಿ ಇರೋಲ್ಲ ಅನ್ನೋದಕ್ಕೆ ಈ ಊರಿನ ವಿದ್ಯಮಾನವೇ ಸಾಕ್ಷಿ.

ಪುರಾಣ ಪಠಣ, ಜ್ಯೋತಿಷ್ಯ ಮುಂತಾದ ಜನತೆಯ ನಂಬಿಕೆಯ ಬೇರುಗಳಿಗೆ ಗೊಬ್ಬರ, ನೀರೂ ಹಾಕೋವಷ್ಟು ಶಕ್ತಿ ಇದ್ದವರು ಜೋಯಿಸರು. ಊರಿನ ಧಣಿ ಅಂತ ಹೆಸರು ಪಡೆದ ಪಟೇಲ ಮನೆತನದವರೂ ಇದೊಂದು ವಿಷಯದಲ್ಲಿ ಯಾವಾಗ್ಲೂ ಜೋಯಿಸರ ವಿಧೇಯರೇ ಎಂದ ಮೇಲೆ ಇನ್ನೇನು? ಜೋಯಿಸರ ಪ್ರಸಿದ್ಧಿ ಎಷ್ಟಿತ್ತೆಂದರೆ ತಮ್ಮ ಭವಿಷ್ಯ ತಿಳಿಯೋದಕ್ಕೆ, ಖಾಯಿಲೆ ಗೀಯಲೇಗೆ ಔಷಧಿ- ಅದು ಹಳೇಕಾಲದ ಕಟುನಿಟ್ಟು ಪಥ್ಯದ ಔಷಧಿ— ಪಡೆಯೋದಿಕ್ಕೆ ತಾಲೂಕಿನ ಬೇರೆ ಬೇರೆ ಭಾಗಗಳಿಂದ ಬರುತ್ತಿದ್ದರು. ಊರವರು, ಹೊರಗಿನಿಂದ ಬಂದವರು, ಕಾಲಿಗೆ ಬಿದ್ದದ್ದೆಷ್ಟೋ ಕಾಣಿಕೆ ಸಲ್ಲಿಸಿದ್ದೆಷ್ಟೋ. ಇವರು ಹೇಳಿದಂತೆ ಆದರೆ ಪ್ರಶಂಸೆಯೆಲ್ಲ ಇವರಿಗೆ ಆಗದಿದ್ದರೆ ಅದು ವಿಧಿವಿಲಾಸ. ಬಸಯ್ಯನವರೂ ಈ ಊರಿನಲ್ಲಿ ಬುದ್ಧಿವಂತರು ಅಂತಲೇ ಹೇಳಬೇಕು. ಶಾಸ್ತ್ರ ಪುರಾಣ ಅಂತ ಓದಿದಾರೆ, ಭವಿಷ್ಯ ಹೇಳೋದು ಮಾತ್ರ ಗೊತ್ತಿರಲಿಲ್ಲ; ಆದರೂ ಜೋಯಿಸರನ್ನು ಕಂಡ ಮೇಲೆ ಗೊತ್ತಿಲ್ಲ ಅಂತ ಸುಮ್ನಿರೊ

ಮನಸ್ಸೂ ಆಗಲಿಲ್ಲ. ಅದೂ ಇದೂ ಪುಸ್ತಕ ತಂದರು; ಓದಿದರು. ಬೇರೆ ಬೇರೆ ಜ್ಯೋತಿಷಿಗಳನ್ನು ಭೇಟಿ ಮಾಡಿದರು. ಹೀಗೇ ಅಂತೂ ಒಂದು ದಿನ ಇದ್ದಕಿದ್ದಂತೆ ತಾವೂ ಶುರು ಮಾಡಿದರು. ಜೋಯಿಸರಷ್ಟು ಮಡಿ ಮೈಲಿಗೆ ತೋರಿಸದೆ ಯಾರಾದ್ರೂ ಸರಿ ಹಜಾರದಲ್ಲಿ ಕೂರಿಸಿ ಕೈ ಹಿಡಿದು ನೋಡಿದರು; ಹರಿಜನರೂ ಹಜಾರ ಹತ್ತಿದರು. ಅವರ ಕೈಯ್ಯನ್ನೂ ಇವರು ಹಿಡಿದರು. ಅದೂ ಇದೂ ಪುರಾಣವನ್ನೂ ಹೇಳ್ತಿದ್ದರು ಸಮಯ ಸಿಕ್ಕಾಗ. ಅಂತ ಬಸವಯ್ಯನವರು ಒಂದು ರೀತಿ ಸುಧಾರಣಶೀಲರಾದರೆಂದೇ ಹೇಳಬೇಕು. ಹೀಗೆ ಇದ್ದಕ್ಕಿದ್ದಂತೆ ಆಗೋ ದಕ್ಕೆ ಜೋಯಿಸರ ಅತಿ ಕಟ್ಟುನಿಟ್ಟು ಕಾರ-ಣವೊ, ತಾವೂ ಬುದ್ಧಿವಂತರಾಗಿದ್ದು ಅವರ ಬಾಲ ಹಿಡಿಯೋದು ಏನು ಅಂತಲೊ, ಅಥವಾ ಜೋಯಿಸರ ಬೇರು ಸಡಿಲಿಸೊ ತೀರ್ಮಾನವೊ ಯಾವುದನ್ನೂ ಇದಮಿತ್ಥಂ ಅಂತ ಹೇಳ ಲಾಗದು. ಅಂತೂ ಊರಲ್ಲಿ ಒಂದು ಹೊಸ ಗಾಳಿ ಬೀಸಿತು ಅಂತ ಹೇಳಬಹುದು. ಈ ಗಾಳಿಯ ರಭಸದಲ್ಲಿ ಜೋಯಿಸರ ಬಲ ಕುಗ್ಗಿತು; ಬಸವಯ್ಯನವರ ಬೇರು ಭದ್ರವಾಗ್ತ ಬಂತು. ಏಷ್ಟಾದರೂ ಜೋಯಿಸರಿಗಿಂತ ಸಡಿಲ ತಾನೆ? ಮೊದಮೊದಲು ಪ್ರಾಮಾಣಿಕತೆಯೇ ಮೈ-ವೆತ್ತಂತಿದ್ದ ಬಸವಯ್ಯನವರು ಬರಬರುತ್ತ ಜೋಯಿಸರಿಗಿಂತ ತೀರಾ ಭಿನ್ನವೇನೂ ಆಗ ಲಿಲ್ಲ ಎಂಬುದು ಆ ಊರಿನ ಸಂದರ್ಭದಲ್ಲಿ ನಿಂತು ನೋಡುವವರಿಗೆ ಅರಿವಾಗುವ ಐತಿ ಹಾಸಿಕ ಸತ್ಯ. ಅದಿರಲಿ, ಈ ಜೋಯಿಸರಿಗೆ ಬಸವಯ್ಯನವರ ಮಾತನ್ನು ವಿರೋಧಿಸುವದು ಅಗತ್ಯವಾಗಿತ್ತು ಅನ್ನೋದಿಕ್ಕೆ ಇಷ್ಟೆಲ್ಲ ಹೇಳ ಬೇಕಾಯಿತು.

ಇನ್ನು ಬಸವಯ್ಯನವರಾದರೂ ಪಟೇಲ ರಿಲ್ಲದೆ ಇದ್ದಾಗಲೇ ಪಂಚಾಯಿತಿ ಮಾಡಲು ಅತ್ಯಾತುರ ತೋರಿದ್ದಕ್ಕೆ ಗಂಭೀರವಾದ ಕಾರ ಣವೇ ಉಂಟು. ಪಟೇಲ್ ತಿಮ್ಮೇಗೌಡರು ಯಾವುದೋ ಸಂದರ್ಭದಲ್ಲಿ ಬಸವಯ್ಯನವ-ದುರು ರೇಗಿ "ನಮ್ಮ ಜನದ ಮನೆ ಎಷ್ಟವೆ ಗೊತ್ತ? ಹಿಂದ್ನಿಂದ ಪಟೇಲ್ರ ಮನೆತನ ನಮ್ಮದು, ಗೊತ್ತ" ಅಂದಿದ್ದರಂತೆ. ಅದೇ ಮನಸ್ನಲ್ಲಿ ಬೇರೂರಿ ಬಸವಯ್ಯನವರು "ನಮ್ಮ ಜನದ ಮನೆ ಎಷ್ಟವೆ ಗೊತ್ತ? ನನ್ನ ಶಕ್ತಿ ಎಷ್ಟು ಗೊತ್ತ" ಅಂತ ತೋರಿಸೋದಿಕ್ಕೆ ಇದೊಂದು ಒಳ್ಳೇ ಸಂದರ್ಭ ಎಂದುಕೊಂಡು ಇವತ್ತಾದರೂ ತಮ್ಮ ಪ್ರತಿಷ್ಠೆಯ ಪ್ರತಿಷ್ಠಾಪನೆ ಮಾಡ್ಬೇಕು ಅಂತ ತೀವ್ರತೆಯಿಂದಿದ್ದಾಗಲೇ–ಈ ಜೋಯಿ ಸರು ಅಡ್ಡಮಾತು ಆಡ್ಬೇಕೆ? ಅಂದಮೇಲೆ ಬಸವಯ್ಯನವರಿಗೆ ಅದೆಷ್ಟು ಸಿಟ್ಟುಬಂದಿರ ಬೇಡ? "ಬೆಣ್ಣೇಲಿ ಕೂದಲು ತೆಗಿತಾನೇ ಈ ಹಾರುವ" ಅಂತ ಬಯ್ದು ಶಿವಪೂಜೇಗೆ ಹೋಗೋಕ್ ಮುಂಚೆ ಕೃಷ್ಣಪ್ಪನ ಕಿವೀಲಿ "ನೋಡು, ವಿಷಯ ಹೇಗೆ ಹೇಗೆ ಆಗುತ್ತೆ ಅಂತ ಹೇಳಾಕಾಗೋಲ್ಲ, ಆ ಜೋಯಿಸ ಹೆಂಗಾದ್ರೂ ಸರಿ ನಂಬಾಕಾಗೊಲ್ಲ; ನಾಯ್ಕರ ಜಾತೇಲಿ ನೀನೇ ದೊಡ್ಡ ಕುಳ. ಇದು ನಿನ್ನ ಗೌರವದ ಪ್ರಶ್ನೆ, ಆ ರಾಮ ಇದಾನಲ್ಲ ಬಿ. ಎ. ಮೂರು ಸಾರಿ ಪಲ್ಟಿ ಹೊಡುದ್ರೂ ದೌಲತ್ ಬಿಟ್ಟಿಲ್ಲ. ಅವತ್ತು ನೋಡ್ದಲ್ಲ ಜೋಯಿಸ್ರ ಹತ್ರ ಜಗಳ ಕಾದಿದ್ದು–ನೀವೇ ನಮ್ಮನ್ನ ಹಿಂಗೆ ಊರ್ ಹೊರಗಿಟ್ಟಿದ್ದು? ನಿಮ್ಮ ಮನೆ ತನವೇ ಇದಕ್ಕೆ ಕಾರಣ. ಯಾರೋ ನಿಮ್ಮ ಮುತ್ತಾತ ಹಿಂಗ್ ಮಾಡ್ಬಿಟ್ಟ. ಕಳ್ ನನ್ನ ಮಕ್ಕಳು ಎಲ್ರೂ ಹಾಗೆ ಹೀಗೇಂತ ಬಯ್ದಿದ್ದು," ಎಂದು ಮತ್ತೇನೋ ಹೇಳು ತ್ತಿರುವಾಗಲೇ ಕೃಷ್ಣಪ್ಪ ಲಕ್ಕನೆ, "ನೀವೂ ಅವತ್ತು ಮತ್ತೆ ರಾಮ ಅಂದಿದ್ದು ಸರಿ ಅಂದ್ರಲ್ಲ ಅಯ್ನೋರೆ" ಎಂದು ಬಿಟ್ಟಾಗ ಬಸವಯ್ಯನವರೇನೂ ಅಧೀರರಾಗಲಿಲ್ಲ. "ಅವತ್ತಿಗೆ ಅದು ಸರಿ; ಇವತ್ತಿಗೆ ಹಾಗಲ್ಲ. ಆ ಭೈರಪ್ಪ ಇದಾನಲ್ಲ ಆ ಹರಿಜನರ ಲೀಡರ್ ಆಗ್ಬೇಕು ಅಂತ ಆಸೆ ಅವ್ನಿಗೆ. ಅವ್ನೇನಾರ ಮಾಡಿದ್ರೆ ಕಷ್ಟ ನೋಡಪ್ಪ. ಅದ್ಕೇ ಒಂದು ಮಾತು. ನಿಮ್ಮ ಕಡೆಯಿಂದ ಒಬ್ಬರು ನ್ಯಾಯಸ್ಥರಿರಬೇಕು ಅಂತ ಹಟ ಹಿಡೀ ಬೇಕು..." ಹೀಗೇ ಉಪದೇಶ ನೀಡಿ,

'ನಾನೂ ಒಂದ್ ಕೈ ನೋಡ್ತೀನಿ; ಇದೇ ಸಮಯ' ಅಂದ್ಕೊಂಡು ರಾಮ ತಪ್ಪಿಸಿಕೊಂಡರೆ ಕಷ್ಟ ಅಂತ ತಮ್ಮ ಬಾವಿ ಪತ್ತಿರ ಇದ್ದ ಕರೆಂಟು ರೂಮಿನಲ್ಲಿ ಕೂಡಿ ಹಾಕಿಸಿದ್ದರು.

ಕರೆಂಟು ರೂಮಿನಲ್ಲಿ ಕೂಡಿ ಹಾಕೋ ಕೆಲಸ ಏನು ಮಾಡಿದ್ದ ಅಂತ ಬೇರೆ ಹೇಳಬೇಕೆ? ಒಂದು ಗಂಡು–ಒಂದು ಹೆಣ್ಣಿನ ವಿಷಯ ಅಂದರೆ ಏನಾಗಿರಬಹುದು ಅಂತ ಯಾರಿಗೆ ಗೊತ್ತಾಗೊಲ್ಲ? ಇತ್ತೀಚೆಗೆ ಊರಲ್ಲಿ ಓಡಾಡೋಕೆ ಅಡ್ಡಿ ಇರಲಿಲ್ಲವಾದ್ದರಿಂದ ರಾಮು ಧಾರಾಳವಾಗಿ ಅವರಿವರ ಮನೆ ಹತ್ರ ಹೋಗ್ತಿದ್ದ. ಇವನ ಗಡಸುತನದ ಎದುರು ಯಾರು ಮಾತಾಡೋದಿಕ್ಕೂ ಸ್ವಲ್ಪ ಹಿಂಜರೀತಾ ಇದ್ರು. ಮನೆ ಒಳಗೇ ನುಗ್ತೀನಿ ಏನ್ರೀ ಮಾಡ್ತೀರ?' ಅಂದಾಗ ಅವರ ಪಾಡು ಕೇಳಬೇಕೇ? ಇಂಥ ಧೈರ್ಯ, ದಿಟ್ಟತನ ಅಗತ್ಯ; ಆದರೆ ಅದೇ ಸರ್ವಸ್ವವಾಗಿ ಸ್ವಾರ್ಥವೂ ಸೇರಿ ಸವಾರಿ ಮಾಡಿದ್ರೆ ಕಷ್ಟ. ರಾಮು ಇಂಥ ಪಟ್ಟಿಗೆ ಸೇರೋ ವ್ಯಕ್ತಿ ಅನ್ನಬಹುದು; ಇರಲಿ ಆ ವಿಷಯ. ಅಂತೂ ರಾಮು ಕೃಷ್ಣಪ್ಪನ ಮನೇ ಹತ್ರ ಬರ್‍ತಾ ಹೋಗ್ತಾ ಇದ್ದ, ಗೌರೀನ ನೋಡಿದ, ಅವಳೂ ನೋಡಿದಳು. ಸರಿ, ಕಣ್ಣು ಮಾತಾಡಿದವು. ಒಂದು ದಿನ. ಜೋಳದ ಹೊಲದ ನಡುವೆ ಇಬ್ಬರೂ ಇದ್ದರು. ಇದ್ದರು ಅಂದ್ರೆ ಅರ್ಥವಾಗುತ್ತಿಲ್ಲ? ಹೊಲ ಮುಲಗುಟ್ಟಿತು. ಯಾರೋ ನೋಡಿದವರು ಸುಮ್ಮನಿರಲಿಲ್ಲ; ಗುಲ್ಲೆಬ್ಬಿಸಿದರು. ಇಂಥ ಘಟನೆ ಇಲ್ಲಿ ಹೊಸದೇನೂ ಅಲ್ಲ. ದೊಡ್ಡ ದೊಡ್ಡೋರು ಹೆಚ್ಚು ಹೆಂಗಸ್ರನ್ನ ಇಟ್ಕೊಳ್ಳೋದೆ ಪ್ರತಿಷ್ಠೆ ಅಂದ್ಕೊಂಡಿದ್ರಂತೆ ಒಂದು ಕಾಲದಲ್ಲಿ. ಈಗಲೂ ಅಲ್ಪ ಸ್ವಲ್ಪ ಅದು ಉಳಿದಿದೆ. ಆದರೆ ಈಗ ಹೊಲದಲ್ಲಿ ಇದ್ದೋನು ಮಾದಿಗರ ರಾಮ ತಾನೇ? ಆದಕ್ಕೆ ಈ ಪುಣ್ಯದೂರಿನ ಜನ ಸಹಿಸೋದು ಅಂದ್ರೇನು! ರಾಮು ಬೇರೆ ಮೆರೀತಾ ಇದ್ದ ಅಂತ ಊರೇ ಕೂಗ್ತಿತ್ತು. ಇದೇ ಸರ್‍ಯಾದ ಸಂದರ್ಭ ಅಂತ ಐದಾರು ಜನ ಬಂದರು; ಹಿಡಿದರು. ಆದರೆ ಕೃಷ್ಣಪ್ಪನಿಗೆ ಸಿಟ್ಟಿನ ಜೊತೆ ಪೀಕಲಾಟ. ಅವಮಾನ ಒಂದ್ಕಡೆಯಾದರೆ ಮುಂದೆ ಮಗಳ ಮದುವೆ ಗತಿ ಹೇಗೆ ಅನ್ನೋ ಚಿಂತೆ. ಆದರೂ ಈಗ ವಿಷಯ ಮುಚ್ಚಿಡೋ ಹಾಗಿಲ್ಲ; ಜನ ನೋಡಿದ್ದಾರೆ.

ಬಸವಯ್ಯನವರು ಬೇರೆ ಇದು ಪ್ರತಿಷ್ಠೆ ವಿಷಯ ಅಂತ ಬೋಧನೆ ಮಾಡಿದಾರೆ. ಅವರು ಹೇಳಿದಂತೆ ಕೇಳೋದೇ ಸರಿ ಅಂದ್ಕೊಂಡ; ಬಲವಾಗಿ.

ಈಗ ಕೃಷ್ಣಪ್ಪನ ಮುಂದಿರೋ ಸಮಸ್ಯೆ–ತಮ್ಮ ಜಾತಿ ಪರವಾಗಿ ಯಾರು ನ್ಯಾಯಸ್ಥರಾಗಿರಲಿ ಅನ್ನೋದು. ಜಾತಿಯವರನ್ನೆಲ್ಲ ಕೇಳೋದೆ? ತಾನೇ ಅವ್ರಲ್ಲೆಲ್ಲ ದೊಡ್ಡ ಆಸಾಮಿ ಆದ್ಮೇಲೆ ಅವೆಲ್ಲ ಯಾಕೆ, ತನ್ನ ಮಾತಿಗೆ ಅವರು ಬೆಲೆ ಕೊಡೋಲ್ಲ ಅಂದ್ರೇನು ಅಂತ ನಿರ್ಧರಿಸಿ ಹನುಮಯ್ಯನನ್ನು ಹುಡುಕಿಕೊಂಡು ಬಸ್ ಸ್ಟ್ಯಾಂಡ್ ಹೋಟೇಲ್ ಬಳಿ ಬಂದ. ಹೋಟೆಲ್ ಒಳಗಿಂದ ತನ್ನ ಅಳಿಯ–ಹೌದು, ತನ್ನ ತಂಗಿಯ ಮಗ–ಹನುಮಯ್ಯನ ಕೀರಲು ಕಂಠಶ್ರೀ ಕೇಳಿಬಂತು. ಈತ ಒಳಗೆ ಹೋದ ಕೂಡಲೇ ಇಡೀ ಹೋಟೆಲ್ ಒಂದು ರೀತಿ 'ವಿನೋಬಾ ಮೌನ ವ್ರತ' ತಾಳಿದೆಯೇನೋ ಅನ್ನಿಸೋ ಹಾಗಾಯ್ತು. ಯಾಕೆ ಹೀಗಾಯ್ತು ಅಂತ ಕೃಷ್ಣಪ್ಪನಿಗೆ ಗೊತ್ತಾದ್ರೂ, 'ಇಲ್ಲಿ ಊರ್‍ಗೇ ತೋರುಸ್ತೀನಿ ನನ್ನ ಪೌರುಷಾನ' ಅಂದುಕೊಂಡು 'ಬರ್‍ತೀಯೇನಪ್ಪ ಸ್ವಲ್ಪ' ಅಂದ ಹನುಮಯ್ಯನ ಕಡೆ ತಿರುಗಿ. ಆತ 'ಏನ್ ಸಮಾಚಾರ?' ಅನ್ನುತ್ತಲೇ ಮೇಲೆದ್ದು, ಲುಂಗಿ ಮೇಲಕ್ಕೆ ಕಟ್ತಾ' ಮಪ್ಲರ್ ಸರಿ ಮಾಡಿಕೊಳ್ತಾ, ಮತ್ತೆ ಲುಂಗಿಯನ್ನು ಕೆಳಕ್ಕೆ ಬಿಡ್ತಾ, ಚಪ್ಪಲೀನ ಥರ ಪರಾಂತ ಎಳೀತಾ ಹೊರಗಡೆ ಬಂದ. ಕೃಷ್ಣಪ್ಪ ಅಲ್ಲೇನೂ ಮಾತಾಡ್ದೆ ಸೀದಾ ಮನೆ ಹತ್ತಿರ ಕರೆತಂದ. ಹನುಮಯ್ಯನಿಗೆ ನಿಜಕ್ಕೂ ಒಗಟಾಗಿತ್ತು. ಹಿಂದೆಂದೋ ಒಂದ್ಸಾರಿ, ತಾನು ಗೌರೀನ ಮದ್ವೆ ಮಾಡ್ಕೋತೀನಿ ಅಂತ ಯಾರ್‍ಯಾರ ಮೂಲಕವೋ ಕೇಳಿಸಿದಾಗ ಈ ಕೃಷ್ಣಪ್ಪ ಏನಂದಿದ್ದ ಗೊತ್ತೆ? 'ಅವ್ನ ಯಾವ

ಮಾರೆ ಗಂಡೂಂತ ಕೊಡ್ಲಿ? ಏನು ಒಂದಷ್ಟು ಪೊಲ ಐತಾ? ದುಡ್ಡೈತಾ? ಏನೋ ಒಂಧಿಷ್ಟು ವಿದ್ಯಾಬುದ್ಧಿ ಐತೆ ನಮ್ ಜಾತಿ ನಾಗ" ಅಂದಿದ್ದ. ಆದರೆ ಇವತ್ತು ಯಾಕೆ ಇಷ್ಟು ಆದರ? ಅದೂ ಮನೆಗೆ ಬಂದಾಗ ಸುಮ್ನೆ ಇದ್ನಾ? ಕಾಫೀ ಮಾಡಿಸ್ದ. ಉಪಚಾರ ಮಾಡ್ದ; ನಿನ್ನಂಥೋನು ಇನ್ನಿಲ್ಲ ಅನ್ನೋವರೆಗೂ ಹೊಗಳ್ದ. ಯಾಕೆ ಇದೆಲ್ಲ? ಗೌರೀನ ಮದ್ವೆಯಾಗೂಂತ ಕೇಳಬಹುದೆ? ಅಂದುಕೊಂಡ. ಆದರೆ ಹಾಗಾಗಲಿಲ್ಲ. "ನೀನು ನಮ್ಮ ಪರ ನ್ಯಾಯಸ್ಥ ಆಗ್ಬೇಕು. ಆಗೋ ಹಾಗೆ ನಾವೆಲ್ಲ ಮಾಡ್ಬೇಕು. ಬಸವಯ್ನೋರು ಹೇಳವ್ರೆ. ಈಗಿನ್ನೇನೂ ಇಲ್ಲ ಈ ಕೆಲ್ಸ ಕಂಡೋರ್ನೆಲ್ಲ ಸರ್ನ ಕಂಡ ಬೀಡ್ತೀನಿ. ಆ ರಾಮನೇ ಗೌರೀನ ಹಿಡ್ಕಳ್ಳಾಕ್ ಬಂದಿದ್ದ: ಇವ್ಳು ಎದ್ದೆನೋ ಬಿದ್ದೆನೋ ಅಂಬ್ತ ಓಡಿ ಹೊಲ್ದಾಗ್ ಬಿದ್ದಾಗ ಜನಾ ಕಂಡ್ಕಂಡ್ ಓಡಿ ಬಂದ್ರು ಅನ್ನಿದ್ರಾಯ್ತು. ಹಿಂಗೆಲ್ಲ ಮಾಡಾಕೆ ನಮ್ಮೋರೆ ಒಬ್ಬರು ಇರ್ಬೇಕು ಅಂಬ್ತಾರಪ್ಪ ಬಸವಯ್ನೋರು" ಎಂದು ಕೃಷ್ಣಪ್ಪ ಎಲ್ಲ ವಿವರಿಸಿದ. ಈ ವಿಷಯ ಜೋಯಿಸರಿಗೆ ಗೊತ್ತಿಲ್ಲ; ಈಗ್ಲೇ ಹೇಳಬಾರದು ಅಂತಲೂ ಹೇಳಿದ. ಗುಟ್ಟಾಗಿದ್ದು ಪಟೇಲರು ಬಂದಾಗ ಪಟ್ಟು ಹಿಡೀಬೇಕೊಂತಲೂ ಸೂಚಿಸಿದ. ಆಮೇಲೆ, ಮುಖ ಮುಚ್ಕೊಂಡು ಒಳಗೆ ಕೂತಿದ್ದ ತನ್ನ ಮಗಳು ಗೌರಿ ಕಡೆ ತಿರುಗಿ. "ನೋಡಲೆ ಬೋಸಂಡಿ, ಹನುಮಯ್ಯ ಹೆಂಗೆ ಹೇಳಿದ್ರೆ ಹಂಗ್ ಕೇಳ್ಬೇಕು. ನ್ಯಾಯಸ್ಥರ ಮುಂದೆ ಆ ರಾಮನೇ ಹಿಡ್ಕಣಾಕ್ ಬಂದ ಅಂಬ್ತ ಹೇಳ್ಬೇಕು. ಆಮ್ಯಾಕೆ, ನೀನೇನು ಈಗಿನ ಕಾಲದ ಹುಡ್ಗೀರು, ಪರಿಸೆ ಗಿರಿಸೇಗೆ ಸಿನಿಮಾ ಪನವಾ ನೋಡ್ತೀರಿ' ದುಡ್ಡಿದ್ರೆ ಸಾಕು ತಿಂಗಳಿಗೊಂದ್ಸಾರಿ ಪ್ಯಾಟೀಗ್ ಹೋಗ್ತೀರಿ ಸಿನಿಮಾಕ್ಕೆ ಅಲ್ಲಿ ಎಲ್ಲಾ ಕಲ್ತು ಬಂದು, ನಾನು-ಅವ್ನು ಒಪ್ಪಿಬಿಟ್ವಿ ಅಂದ್ರೂ ಅಂಬೋ ಅಂತೆ ಪೆಂಗಸ್ರು, ತಿಳೀತೇನೆ ನಾನ್ ಅಂದಿದ್ದು" ಎಂದು ಗದರಿಸಿ ಹನುಮಯ್ಯನ ಕಡೆ ತಿರುಗಿ "ನೀನೇ ಏನೇ ಹೇಳಪ್ಪ ಹನುಮಯ್ಯ. ಈ ಬಸ್ಸುಗಿಸ್ಸು ಬಂದು, ಆಸ್ಪತ್ರೆಗೀಸ್ಪತ್ರೆ ಶುರು ಮಾದ್ಮೇಲೆ ಹೊಸ ಜನ ಬರಾಕ್ ಸುರುಮಾಡಿ ನಮ್ಮೂರ್ ಬಣ್ಣವೇ ಹೋಗ್ತಾ ಐತೆ. ಈ ಕಣ್ಣಾಗೆ ಇನ್ನೂ ಎಂತೆಂಥದು ನೋಡ್ಬೇಕೊ" ಅಂದ.

ನಿಜ, ಈ ಊರು ಒಂದು ರೀತಿ ಯಾವುದಕ್ಕೂ ಸಿಗದೆ, ತನ್ನಲ್ಲಿದ್ದದ್ದಷ್ಟೇ ಶ್ರೇಷ್ಠ, ಅದೇ ಪವಿತ್ರ, ಅದೇ ಸರ್ವಸ್ವ ಅಂತ ಭಾವಿಸಿಕೊಂಡು ಬದುಕ್ತಾ ಇದ್ದದ್ದು. ಬುದ್ಧಿ ಹೇಳೋರು ಒಬ್ಬರು, ಆಳೋರು ಒಬ್ಬರು, ದುಡಿಯೋರು ಒಬ್ಬರು, ವ್ಯಾಪಾರ ಸಾಪಾರ ಅಂತ ಅಂಗಡಿ ಇಟ್ಕೋರು ಒಬ್ಬರು— ಹೀಗೆ ಅವರವರ ಮನೆತನದ ಕಸುಬು ಬಿಡದೆ, ಅದೇ ಅಶ್ವತ್ಥ ವೃಕ್ಷದ ಸುತ್ತ ಕೈಮುಗಿತಾ ಇದ್ದಾಗ, ಈ ಪಟೇಲರು ಬಂದು ಸ್ಕೂಲು ತರಿಸಿದ್ರು; ಬಸವಯ್ಯನೋರು ಸ್ವಲ್ಪ ಹೊಸ ರುಚಿ ತೋರಿಸಿದರು; ಆದರೆ ಅವರವರ ಕಾಯಕ ಅವರವರದೇ ಅನ್ನೋದೇನೂ ಅಷ್ಟು ಬದಲಾಗಲಿಲ್ಲ. ಇತ್ತೀಚೆಗೆ ಆಸ್ಪತ್ರೆ ಬಂತು. ಬಸ್ಸೂ ಬರೋಕೆ ಶುರುವಾದವು; ನೌಕರರ ಹೆಂಡಂದಿರು ಅಲ್ಲಿ ಇಲ್ಲಿ ಇದ್ದು ಬಂದು ಫ್ಯಾಷನ್ ಕಲಿತಿದ್ದರಿಂದ ಅದೆಲ್ಲ ಈ ಊರಿನ ಹೊಸ ಹುಡುಗಿಯರಿಗೆ ಆಕರ್ಷಣೀಯ-ವಾಯ್ತು; ಅನುಕರಿಸಬೇಕುಂತ ಅನ್ನಿಸ್ತು, ಮಾತಾಡೋದು, ಮನೆಗೆ ಹೋಗೋದು ಪ್ರಾರಂಭ ಆದ್ಮೇಲೆ ಹೊರಗಡೆಯಿಂದ ಬಂದವರ ನಡವಳಿಕೇನೂ ಅಭ್ಯಾಸವಾಗೋಕೆ ಆರಂಭವಾಗಿತ್ತು. ಬಸ್ಸಿನಲ್ಲಿ ಬರೋ ನಾನಾತರದ ಜನ, ಅಲ್ಲಲ್ಲಿ ಕಾಣಿಸಿಕೊಂಡ ರೇಡಿಯೋ, ಸ್ಕೂಲು, ಗ್ರಾಮಪಂಚಾಯತಿ, ಆಸ್ಪತ್ರೆಗಳಿಗೆ ಬರ್ತಿದ್ದ ಪತ್ರಿಕೆಗಳು—ಇವೆಲ್ಲ ಸದ್ದಿಲ್ಲದ ಹಾಗೆ ಈ ಊರನ್ನ ಏನೋ ಸ್ವಲ್ಪ ಬದಲಾಯಿಸಿದ್ದವು. ಈಗ ಪತ್ರಿಕೆಗಳನ್ನು ಬೇರೆ-ಯವರೂ ತರಿಸೋವಷ್ಟು ಮುಂದುವರಿದಿದ್ದರು. ಜೋಯಿಸರು, ಬಸವಯ್ಯ, ಪಟೇಲ್ ತಿಮ್ಮೆಗೌಡರು, ಕೃಷ್ಣಪ್ಪ, ಭೈರಪ್ಪ, ಹೀಗೆ ಅನೇಕರಲ್ಲಿ ರೇಡಿಯೊ, ಅಥವಾ ಟ್ರಾನ್ಸಿಸ್ಟರ್ ಇವೆ...

ಅಂತೂ ಕೃಷ್ಣಪ್ಪನ ಮಾತ್ನಲ್ಲಿ ಸುಳ್ಳೇನೂ ಇಲ್ಲ; ಆದ್ರೆ ಅದನ್ನು ಅವ್ನು ನೋಡೊ ದೃಷ್ಟಿ ಬೇರೆ. ಇರಲಿ, ಈಗ ಹನುಮಯ್ಯನ ಮನಸ್ಸಿಗೆ ಏನನ್ನಿಸಿರಬೇಕು ? ಒಪ್ಪಿಬಿಡಲೆ ? ನ್ಯಾಯಸ್ಥನಾಗೋದು ಅಂದ್ರೆ ದೊಡ್ಡ ಗೌರವ್ವ. ಅಲ್ಲವೆ ? ಅಥವಾ ಹೀಗೆ ಮಾಡಿ ಆಮೇಲೆ ಗೌರಿ ಕೊರಳಿಗೆ ತಾಳಿ ಕಟ್ಟಿಸೊ ಮಸಲತ್ತಿರಬಹುದೆ ? ಇಲ್ದಿದ್ರೆ ಹಿಂದೆಲ್ಲ ಬಯ್ಕೊಂಡು ಓಡಾಡ್ತಿದ್ದವನು ಈಗ ಯಾಕಿಷ್ಟು ಹತ್ರ ಬಂದ ?—ಎಲ್ಲ ಪ್ರಶ್ನೆಗಳೂ ಎದ್ದವು. ಕಡೆಗೆ ನ್ಯಾಯಸ್ಥನಾಗೊ ಆಸೆಯೇ ಗೆದ್ದದ್ದು. ಆಗ ಕೃಷ್ಣಪ್ಪನಿಗೂ ಆನಂದ ಯಾಕೇಂದ್ರೆ ಹನುಮಯ್ಯನ ಲಾಪಾಯಿಂಟು ಅಂದ್ರೆ ಎಂಥದು ಅಂತ ಅವ್ನಿಗೂ ಗೊತ್ತಿತ್ತು, ಊರ್ನಲ್ಲಿ ಅವ್ನನ್ನ 'ಪೂಟ್‌ಲಾಯಿರಿ' ಅಂತ ಕರೆಯೋ ರೂಢಿಯೂ ಇತ್ತೆಂದಮೇಲೆ ವಿವರಣೆ ಯಾಕೆ ?

*

ಆಶ್ಚರ್ಯ ಅಂದರೆ ಮಾರಜ್ಜನಿಗೆ ತನ್ನ ಮಗ ರಾಮುವಿಗೆ ಏನಾಗುತ್ತೊ ಅನ್ನೊ ಆತಂಕವಿತ್ತೊ ಇಲ್ಲವೊ ಗುರುತಿಸೋದೆ ಕಷ್ಟ ಅನ್ನೊ ಹಾಗೆ ತನ್ನಾರಕ್ಕೆ ತಾನು ಯಾವುದೋ ಹಳೇ ಮೆಟ್ಟು ರಿಪೇರಿಮಾಡ್ತಾ ಇದ್ದ. ತನ್ನ ಮೇಲೆ ಹರಿದ ಬನಿಯನ್ ಇದೆ; ಮಾನ ಮುಚ್ಕೋಕೆ ಒಂದು ದಟ್ಟಿ ಕಟ್ಟಿದಾನೆ. ಮುಖದಲ್ಲಿ ಸಮೃದ್ಧವಾಗಿ ಬೆಳೆದಿದೆ—ಅಲ್ಲಲ್ಲೆ ಕರೀಕೂದಲಲ್ಲಿರೊ ಬಿಳೀ ಗಡ್ಡ ಮೀಸೆ. ಅಷ್ಟೆಲ್ಲ ಯಾಕೆ ಹರಕು ಮುರುಕು ಗುಡಿಸಲಲ್ಲಿ ಇದ್ದ ಅಂದರೆ ಮಿಕ್ಕದ್ದೆಲ್ಲ ಅರ್ಥವಾಗಬಹುದು. ಬಿಸಿಲು ಗುಡಿಸಲು ಗರಿಗಳ ಸಂದೀಲಿ ತೂರಿ ಮುಖದ ಮೇಲೆ ಬೀಳ್ತಾ ಇದ್ದರೂ, ಅದೆಲ್ಲ ಮಾಮೂಲು ಅನ್ನೊ ಹಾಗೆ ಕೆಲಸದಲ್ಲಿ ಮಗ್ನವಾಗಿದ್ದ ಮಾರಜ್ಜ.

ಹಾದಿ ಜಬ್ಬದಾರಿ, ಗ್ರಾಮ ಪಂಚಾಯ್ತಿ ಮೆಂಬರು, ಹಟ್ಟಿಯ ಭೈರಪ್ಪ ಬಂದಾಗ ಮಾರಜ್ಜ—ಮನಸ್ಸಿತ್ತೊ ಇಲ್ಲವೋ— ಅಂತೂ ಎದ್ದು ಮೇಲೆ ಸಿಕ್ಕಿಸಿದ್ದ ದುಪಟಿ ತೆಗೆದು ಮಡಚಿ ಹಾಸಿದ; ಭೈರಪ್ಪ ಕೂತುಕೊಂಡ. ಭೈರಪ್ಪ ಹಟ್ಟೀಲಿ ಯಾವ ಮನೆಗೆ ಹೋದರೂ ಗೌರವ ಇದ್ದೇ ಇತ್ತು. ಹಟ್ಟೀಲಿರೊ ಹೆಂಚಿನ ಮನೆ ಅಂದ್ರೆ ಇವನೊಬ್ಬನದೇ. ಅದೂ ಹಜಾರ ಬೇರೆ ಇದೆ; ಹಟ್ಟಿಯವರು ಊರೊಳಗಿನ ಜನರ ಹೊಲದಲ್ಲಿ ಮಾತ್ರ ದುಡೀತಿಲ್ಲ, ಇವ್ನ ಹೊಲಕ್ಕೂ ಹೋಗ್ತಾರೆ; ಕೂಲಿ ಮಾಡ್ತಾರೆ. ಅಂದಮೇಲೆ ಕೇಳ್ಬೇಕೆ?

ಭೈರಪ್ಪ ಕೂತು ತನ್ನ ಜುಬ್ಬದ ಜೇಬಿನಿಂದ ಪ್ಯಾಕಿಂಗ್ ಶೋ ಸಿಗರೇಟು ತೆಗೆದು, ಬೆಂಕೀ ಕಡಿಯಿಂದ ಹಚ್ಚಿಕೊಂಡ. ಮಾರಜ್ಜ ತನ್ನ ಕೆಲಸ ನಿಲ್ಲಿಸಿ ಇವನನ್ನೇ ನೋಡ್ತಾ ಇದ್ದರೂ ಸ್ವಲ್ಪ ಹೊತ್ತು ಏನು ಮಾತಾಡಲಿಲ್ಲ. ಮಾರಜ್ಜನಿಗೆ ಸ್ವಲ್ಪ ಆತುರವೂ ಇತ್ತು. ಜೋಯಿ

ಸರು ಅರ್ಜೆಂಟು ಬೇಕೂಂತ ಮೆಟ್ಟು ಕಳಿಸಿದ್ದರು ರಿಪೇರಿಗೆ. ಬೇಗ ಮುಗಿಸ ಬೇಕಿತ್ತು. ಭೈರಪ್ಪ ಬಂದು ಕೂತಾಗ ಏನ್ ತಾನೇ ಮಾಡೋದು? ಕಡೆಗೆ ಕೇಳೇ ಬಿಟ್ಟ: "ಏನ್ ಭೈರಪ್ಪಣ್ಣ ಬಂದ್ಬುಟ್ಟೆ ಬಡವನ ಗುಡ್ಲುತಾವ?". ಭೈರಪ್ಪನಿಗೆ ಅಷ್ಟು ಸಾಕಿತ್ತು. "ಏನ್ ಮಾಡ್ದೆ ನಿನ್ಮಗನ ವಿಷಯ ?" ಎಂದ.

ಮಾರಜ್ಜನ ಮುಖದಲ್ಲಿ ಹುಳಿ ತೇಲಿ ಬಂತು. ಕಣ್ಣುಗಳ ಆಳದಲ್ಲಿ ವ್ಯಥೆ ಓಡಾಡೊ ಹಾಗೆ ಕಾಣಿಸ್ತು. ಯಾಕೋ ಏನೂ ಹೇಳೋ ದಿಕ್ಕಾಗದೆ ರಿಪೇರಿಯ ಚಪ್ಪಲಿ ಕಡೇನೇ ನೋಡಿದ; ಒಂದು ಚಪ್ಪಲಿ ತೆಗೆದುಕೊಂಡು ಉಂಗುಷ್ಟಕ್ಕೆ ಮೊಳೆ ಹಾಕಿ ಪಟಪಟಾಂತ ಕುಟ್ಟಿದ; ಮುಂದಕ್ಕೆ ಎಸೆದ; ಸುಮ್ನೆ ಕೂತ. ಆದರೆ ಭೈರಪ್ಪ ಸುಮ್ಮನಿರಲಿಲ್ಲ. "ಅಲ್ಲಜ್ಜ, ಸುಮ್ನೆ ಕೂತ್ರೆ ಹೆಂಗೆ? ಊರ್ನೋರು ಸುಮ್ನೆ ಬಿಡ್ತಾರ?" ಎಂದು ಪ್ರಶ್ನೆ ಹಾಕಿದ.

ಮಾರಜ್ಜ ಬೇಸತ್ತವನಂತೆ ಅಂದ: "ಏನಾರ ಮಾಡ್ಕಂಬ್ಲಿ ಬಿಡಪ್ಪತ್ತ. ಹಿಂದಿನಿಂದ ಹೆಂಗ್ ನಡೆದು ಬಂದೈತೋ ಹಾಂಗ್ ಆಗ್ಲಿ. ಜೋಯಿ ಸ್ರುಗಿಂತ ಬುದ್ಧಿ ಐತಾ ನಮ್ಗೆ? ಬಸಯ್ನೋ-ರಿಲ್ವೆ? ಪಟೇಲ್ರು ಇರಾಕಿಲ್ವೆ? ಅವ್ರೆಲ್ಲ ಹೆಂಗ್ ಹೇಳಿದರ ಹಾಂಗ್ ನ್ಯಾಯ. ಈನನ್ ಮಂಗ ರಾಮುಂಗೆ ಮಾನವಮರ್ರ್ಯಾದೆ ಇದ್ರುಲ್ವ ಮೊದ್ಲು."

ಭೈರಪ್ಪನಿಗೆ ಕಲ್ಲಿಗೆ ಹಣೆ ಕುಟ್ಟುಕೋಳ್ತಿ ದ್ದೇನೆ ಅನ್ನಿಸ್ತು. ಮಾರಜ್ಜ ಮಾತ್ರ ಹೀಗಿರ ಲಿಲ್ಲ. ಆ ಹಟ್ಟೀಲಿ ಬಹಳಷ್ಟು ಜನ ಹೀಗೇ ಇದ್ದದ್ದು. ತಾವು ಪಡೆದು ಬಂದದ್ದು. ಇಷ್ಟೇ ಅಂತ ಇವರೆಲ್ಲರ ನಂಬಿಕೆ. ಈ ನಂಬಿಕೆ ಹೋಗ ಲಾಡ್ಸೋದಿಕ್ಕೆ ಯಾರಾದ್ರೂ ಪ್ರಾಮಾಣಿಕ ವಾಗಿ ಪ್ರಯತ್ನಿಸಿದರೆ ಆಕೆ ಭೈರಪ್ಪನ ಮಗಳು ಶೀಲಾ ಒಬ್ಬಳೇ. ಇವಳು ಬಿ. ಎ. ಪರೀಕ್ಷೆ ಕಟ್ಟಿ ಬಂದವಳು. ಕಾಲೇಜ್ ಓದು-ವಾಗ ಯಾವುದೋ ಸ್ಟಡೀ ಸರ್ಕಲ್‌ಗೆ ಸೇರಿ ವಿಚಾರ ತಿಳಿದು ಚರ್ಚಿಸಿ ಧೋರಣೆ ರೂಪಿಸಿ ಕೊಂಡವಳು. ತಮ್ಮನ್ನು ಈ ಸ್ಥಿತಿಗೆ ತಳ್ಳಿದ ಸಮಾಜದ ಮೇಲೆ ಆಕ್ರೋಶ ಇದ್ದರೂ, ಅದನ್ನೇ ಒಂದು ಪೋಜ್ ಮಾಡಿಕೊಂಡವಳಲ್ಲ; ಈಗಿನ ವ್ಯವಸ್ಥೆ ಬದಲಾಗಬೇಕು ಅನ್ನೋ ತೀವ್ರತೆ ಇದ್ದವಳು. ಶೋಷಣೆಯ ಇತಿ-ಹಾಸಕ್ಕೆ ಒಳಗೊಳಗೇ ಉರಿದವಳು; ಹದಕ್ಕೆ ಬಂದವಳು ಅವಳದು ಜನರನ್ನು ಸಿದ್ಧ ಮಾಡದೆ ಯಾವ ಬದಲಾವಣೆಗೂ ಅರ್ಥವಿಲ್ಲ ಅನ್ನೊ ವಿಚಾರ. ನಿಜವಾದ ಬದಲಾವಣೆ ಜನರ ನಿರ್ಧಾರದಲ್ಲಿಲ್ಲ ಅನ್ನೋ ನಂಬಿಕೆ. ಅವಳು ತಮ್ಮ ಹಟ್ಟಿಗೆ ಜನರ ಜೊತೆ ಬೆರೀತ, ಪೂರ್ವಜನ್ಮದ ಪಾಪ - ಪುಣ್ಯಗಳ ಫಲ ಅನ್ನೊದೆಲ್ಲ ಯಾಕೆ ಸುಳ್ಳು ಅಂತ ತಿಳಿಯ-ಪಡುಸ್ತಾ ಇದ್ದಳು, ಮತ್ತೇನೇನೋ ಹೇಳ್ತಿ ದ್ದಳು. ಪರಿವರ್ತನೆ ಎಷ್ಟು ಕಷ್ಟ ಅಂತ ಅರಿವಾಗ್ತಾ ಇತ್ತು; ಆದರೂ ಜನಶಕ್ತಿಯಲ್ಲೇ ಅವಳಿಗೆ ನಿಜವಾದ ಭರವಸೆ. ಆದರೇನು ಬಂತು? ಒಂದೇ ದಿನದಲ್ಲಿ ಇತಿಹಾಸ ಬದ-ಲಾಯ್ಸೋದಿಕ್ಕೆ ಸಾಧ್ಯವೆ? ಅದೂ ಈ ಊರಿನ ಇತಿಹಾಸ? ಒಬ್ಬೊಬ್ಬ ನಾಯಕ ಹಾರಾಡಿದರೆ ಅಷ್ಟು ಆತಂಕ ಯಾರಿಗೂ ಇಲ್ಲ; ಆದರೆ ಜನವೇ ಎದ್ದರೆ? ಆಗ ಕಷ್ಟ. ಅದಕ್ಕಾಗಿಯೇ ತುಂಬಾ ಹಿಂದಿನಿಂದ, ಬಹುಶಃ ಈ ಊರು ಹುಟ್ಟಿ ಒಂದಷ್ಟು ವರ್ಷಗಳು ಕಳೆದು ಒಂದು ರೂಪ ಬರೋ ಕಾಲದಿಂದ ಬಲಿಷ್ಠರು, ಬುದ್ಧಿ ವಂತರೂ ತಮಗೆ ತಕ್ಕನಾದ ರೀತಿ ಕಟ್ಟಿರ ಬೇಕು– ಈ ಕೋಟೆ, ದೇವಾಲಯ, ಮನೆಲಿರೊ ಖಡ್ಗ ಆಳುಕಾಳು– ಕೋಟೆ, ತಳವಾರ, ಆಮೇಲೆ ದೊಡ್ಡ ದೊಡ್ಡ ಗ್ರಂಥವ ಕಟ್ಟು ಗಳು, ಹರಡಿರೊ ಪುರಾಣ ಕತೆಗಳು– ಹೀಗೆ. ದೊಡ್ಡ ಜನವೆಲ್ಲ ಹೇಳೋ ಈ ಇತಿಹಾಸದ ಸಂಸ್ಕೃತಿಯ ಬದಲಾವಣೆ ಅಂದ್ರೆ ಸಾಮಾನ್ಯ ವಲ್ಲ. ಇನ್ನೊಂದು ವಿಷಯ ಬೇರೆ ಇದೆ. ತೊರೆ ಹರೀತಿದೆ, ದೂರ ಹೊರಗೆ ಇರೋ ಬೆಟ್ಟದಲ್ಲಿ. ಅದು ಈ ಊರು ಹುಟ್ಟಿದಾಗ ಈಶ್ವರ ಕರುಣಿಸಿ ತನ್ನ ಗಂಗೆಯ ಅಂಶವನ್ನೇ ಕಳಿಸಿದ್ದು ಅಂತ ನಂಬಿಕೆ ಬೇರೆ ಇದೆ. ಹಿಂದೆ ಜನ ನಂಬಿದ್ರುಲ್ಲಿ ಆಶ್ಚರ್ಯ ಏನಿದೆ? ಇದ್ದಕ್ಕಿದ್ದಂತೆ ಬೆಟ್ಟದ ಬಂಡೆಗಳ ನಡುವೆ ಎಲ್ಲೋ ನೀರು ಹುಟ್ಟಿ

ಾರಿದು ತಮಗೆಲ್ಲ ಉಪಕಾರ ಮಾಡೋದು ಅಂದ್ರೇನು? ಆದ್ದರಿಂದ ಈ ಊರಿನ ಪುಟ್ಟಿಗೆ ಒಂದು ಪೌರಾಣಿಕ ಚೌಕಟ್ಟು ಒದಗಿತ್ತು. ಇದೆಲ್ಲ ಒಡೆಯೋದು ಕಷ್ಟ ಅಂತ ಶೀಲಾಗೂ ಗೊತ್ತು. ಆದರೆ ಒಡೆಯೋದೆ ಸರಿಯಾದ್ದೂ ಅಂತಲೂ ಗೊತ್ತು, ಭೈರಪ್ಪನಾದರೋ ಈ ಪೌರಾಣಿಕ ಚೌಕಟ್ಟಿನಲ್ಲಿ ತನ್ನನ್ನು ತೊಡಗಿಸಿ ಕೊಂಡವನ.

ರಾಮು ಇವನ್ನೆಲ್ಲ ನಂಬದಿದ್ದರೂ ದಡ್ಡ ಜನರಿಗೆ ಅಂದರೆ ತನ್ನ ಪಟ್ಟಿಯವರಿಗೆ-- ಬುದ್ಧಿ ಕಲಿಸಿ ಮೇಲೇಳಿಸೋದು ಅಂದ್ರೆ ಎಷ್ಟು ಕಾಲ ಬೇಕು, ಏನ್ಕತೆ! ಅದಕ್ಕಿಂತ ತಮ್ಮವರೇ ದೊಡ್ಡ ದೊಡ್ಡ ಸ್ಥಾನದಲ್ಲಿಟ್ರೆ ಸಾಕು; ಇನ್ನೇನು ಬೇಡ, ಎಲ್ಲಾ ಸಾಫ್ ಸೀದಾ ಆಗುತ್ತೆ; ಈ ದೊಡ್ಡ ಜಾತೇರ್ನೆಲ್ಲ ಸದೆ ಬಡ್ಯೋದೊಂದೇ ಕ್ರಾಂತಿ ಹೀಗೆಲ್ಲ ನಂಬಿ ದವನು; ಹಾಗೇ ಹಾರಾಡ್ತ ಇದ್ದವನು, ಪಟ್ಟೀಲಿ ತನ್ನ ಮಾತು ನಡೀಬೇಕು ಅಂತಿದ್ದ ವನು; ಪಟ್ಟೀಲಿ ಅವನಿಗೆ ಪ್ರತ್ಯೇಕ ಸ್ಥಾನ ಮಾನ ಇದ್ದೆ ಇತ್ತು. ಯಾಕೆಂದರೆ ಅವನೇ ವಿಶೇಷ ವಿದ್ಯಾವಂತ ಆ ಪಟ್ಟಿಗೆ. ಇತರರು ಕೆಲವರು ಇವನ ಹಾಗೇ ಬಿ. ಎ. ವರೆಗೆ ಹೋಗಿದ್ದರೂ ಇವನಷ್ಟು ಜನರಲ್ ನಾಲೆಡ್ಜ್' ಇಲ್ಲ, ಯಾವ ದೇಶದ ಯಾವ ವಿಷಯದ ಬಗ್ಗೆ ಯಾದರೂ ಮಾತಾಡೊ ವಾಚಾಳಿ. ಇದೆಲ್ಲ ಏನೇ ಇದ್ದಗೂ ಪಟ್ಟಿಯ ಸ್ಥಿತಿ ಮಾತ್ರ ಹೆಚ್ಚು ಕಮ್ಮಿ ಹಾಗೇ ಇತ್ತು. ಅಲ್ಪ ಸ್ವಲ್ಪ ಬದಲಾವಣೆ ಕಂಡರೂ ಬುಡ ಹಿಂದಿನದೇ. ಅಂದ ಮೇಲೆ ಮಾರಜ್ಜ-ನಂತಹ ಮುದುಕ ಹೀಗಲ್ಲದೆ ಇನ್ನು ಹೇಗೆ

ಮಾತಾಡಿಯಾನು ? ಆದರೆ ಭೈರಪ್ಪ ಬಿಡ ಬೇಕಲ್ಲ ? ಕಡೆಗೆ ಮಾರಜ್ಜ ಒಂದು ಘಟ್ಟದಲ್ಲಿ "ಏನಾರ ಮಾಡ್ಕಳಪ್ಪ. ಬ್ಯಾಡ ಅಂಬಲ್ಲ. ಆದ್ರೆ ನನ್ಮಗನೇನು ಯೋಗ್ತೆ ಇರಾನಲ್ಲ ಬಿಡು, ನಿನ್ಮಗಳನ್ನೆ ಇಡ್ಕಂಡಿದ್ನಲ್ಲ" ಎಂದಾಗ ಒಪ್ಪಿಗೆ ಸಿಕ್ಕಿತಲ್ಲ ಅನ್ನೊ ಆನಂದದ ಜೊತೆ ಹಿಂದೊಮ್ಮೆ ರಾಮು ಹೇಗಿದ್ದರೂ ಶೀಲಾ ಮುಂದೆ ತನ್ನವಳು ಅಂತ ಯಾರೂ ಇಲ್ದಾಗ ಮನೇಲೆ ಕೈ ಹಿಡಿದು ಅಪ್ಪಿಕೊಳ್ಳೋಕೆ ಹೋದದ್ದು, ಅವಳು ಪ್ರತಿಭಟಿಸಿದ್ದು, ಈತ ಗಾಯಗೊಂಡ ಹಾವಿನಂತೆ ಬಂದದ್ದು, ಒಳಗೊಳಗೇ ಸುದ್ದಿ ಹಬ್ಬಿದ್ದು ನೆನಪಿಗೆ ಬಂದು ಕಸಿವಿಸಿಯಾಯ್ತು. ಮುಂದಿನ ಗಂಡ ತಾನೆ ಈ ರಾಮು ಅಂತ ಭೈರಪ್ಪ ಈ ವಿಷ ಯಾನ ಸೀರಿಯಸ್ಸಾಗಿ ತೆಗೆದುಕೊಂಡಿರಲಿಲ್ಲ. ಈಗಲೂ ಅದನ್ನು ಹಚ್ಚಿಕೊಳ್ಳದೆ "ಬರ್ತೀ ನಜ್ಜ. ನಾನಿದ್ದೀನಿ ಹೆದ್ರಬೇಡ" ಅಂತ ಅಭಯ ನೀಡಿ ಹೊರಟ. ಮಾರಜ್ಜ ನಿಟ್ಟುಸಿರುಬಿಡ್ತಾ ತನ್ನ ಕಾರ್ಯದಲ್ಲಿ ಮಗ್ನವಾದ. ಅವನ ಮನದಲ್ಲಿ ಎಂಥ ವ್ಯಥೆಯಿತ್ತೋ ಯಾವ ಕತೆ ಇತ್ತೋ ಅವನಿಗೇ ಗೊತ್ತು.

*

ಇತ್ತ ಕಡೆ ಕೃಷ್ಣಪ್ಪ–ಹನುಮಯ್ಯ, ಅತ್ತ ಕಡೆ ಭೈರಪ್ಪ, ಪಟೇಲ್ ತಿಮ್ಮೇಗೌಡರ ಆಗ ಮನಕ್ಕೆ ಕಾಯ್ತಾ ಇದ್ದಾರೆ. ಭೈರಪ್ಪನೂ ಬಸವಯ್ಯನವರನ್ನು ಕಂಡಿದ್ದಾನೆ; ಅವರು ನಂದೇನಂ ಅಡ್ಡಿ ಇಲ್ಲಪ್ಪ, ಜೋಯಿಸರಿಗೂ ಒಂದು ಮಾತು ಹೇಳು ಅಂದಿದ್ದಾರೆ. ಜೋಯಿಸರು 'ನಂದೇನಪ್ಪ ಇದೆ? ನಾವು ಹೇಳೋದೆಲ್ಲಿ ನಡ್ಯುತ್ತೆ ಈಗ? ನಮ್ಮ ಪರಂಪ ರಾಗತ ನೀತಿ ನಿಯಮ, ವ್ಯವಸ್ಥೆ, ಎಲ್ಲಾ ಹೇಗೆ ಹೇಗೋ ಆಗ್ತಿದೆ. ಹೂಂ, ಅವೆಲ್ಲಾ ಯಾಕೀಗ ಅವ್ರಿಬ್ಬರೂ ಏನಂತಾರೆ ಕೇಳು' ಅಂದಿದ್ದಾರೆ. ಜೊತೆಗೆ 'ನಿಮಗೆ ಇಲ್ಲ ಅನ್ನೋದು ಕಷ್ಟ' ಅಂತಲ್ಲ ಅಂದರು. ಅದರ ಲ್ಲೇನೋ ವ್ಯಂಗ್ಯ ಇದ್ದಂತಿತ್ತು. ಬಸವಯ್ಯ ನವರೂ 'ನಿಮಗೆ ಇಲ್ಲ ಅನ್ನೋದು ಅಂದ್ರೆ ಏನ್ ಸುಲಭಾನ? ಕೇಳು ಯಾಕ್ ಬಿಡ್ತೀಯ; ನಂಗೇನಪ್ಪ ನಷ್ಟ' ಅಂದಿದ್ದು ನೆನಪಿಗೆ ಬಂತು. ಅವರಲ್ಲಿ ವ್ಯಂಗ್ಯದ ಬದಲು ಹುರಿದುಂಬಿಸೋ ಧಾಟಿ ಇತ್ತು.

ಸದ್ಯಕ್ಕೆ ಇಷ್ಟು ಮಾತ್ರ ಹೇಳಬಹುದು: ಯಾವ ಹುತ್ತದಲ್ಲಿ ಯಾವ ಹಾವೋ! ಯಾರಿಗೆ ಗೊತ್ತು!

ಪಟೇಲರು ಸಾಯಂಕಾಲ ಬಂದೇ ಬಿಟ್ಟರು. ಮನೆ ಸೇರಿದ ಕೂಡಲೇ ವಿಷಯ ಗೊತ್ತಾ ಯಿತು. ಇಂಥ ಘಟನೆಗಳೇನೂ ಅಪರಿಚಿತ ವಲ್ಲ ಈ ಊರಿಗೆ. ಅಪರೂಪಕ್ಕೆ ಇಂಥ ಪ್ರಸಂಗ ಎದುರಾಗ್ತಾ ಇದ್ದವು. ಇವನ್ನು ಬಗೆಹರಿಸೋದರಲ್ಲಿ ನ್ಯಾಯಸ್ಥರು ನಯ ನಾಜೂಕು ತೋರಿಸುತ್ತಿದ್ದರು; ಹೇಗೊ ಹಾಗೆ ಮುಚ್ಚಿಹಾಕಿ ಎರಡು ಕಡೆಯವರಿಗೂ ಎಚ್ಚ ರಿಕೆ ಕೊಡ್ತಿದ್ದೇ ಹೆಚ್ಚು. ಈ ಸಾರಿಯಾದರೆ ಪಟೇಲರು ವಿಷಯ ಕೇಳಿಯೇ ಉರಿದು ಬಿದ್ದರು; 'ಎಲಾ ರಾಮು' ಅಂತ ಮನಸ್ಸಿ ನಲ್ಲೇ ಕಿಡಿ ಎರಚಿದರು.

ಪಟೇಲರು ಪಡ ಸಾಲೇಲಿ ತೂಗುಮಂಚದ ಮೇಲೆ ಕೂತುಕೊಳ್ಳೋದಿಕ್ಕೆ ಸರಿಯಾಗಿ, ಕೃಷ್ಣಪ್ಪ–ಹನುಮಯ್ಯ ಬಂದು ನಿಂತು ಕೈ ಮುಗಿದರು. ಊರಿನ ಆಡಳಿತದ ಕೇಂದ್ರ ವ್ಯಕ್ತಿ 'ಕೂತ್ಕಳ್ರಯ್ಯ' ಅಂದಾಗ ನೆಲದ ಮೇಲೆ ಕೂತರು. "ಕೃಷ್ಣಪ್ಪ, ಈ ಕಡೆ ಕೂತ್ಕೋ ಚಾಪೆ ಮೇಲೆ" ಅಂದಾಗ ತನಗೆ ಹೇಳಲಿಲ್ಲ ಅನ್ನೋದನ್ನು ಹನುಮಯ್ಯ ಗಮನಿಸಿದ. ಕೃಷ್ಣಪ್ಪ ಚಾಪೆ ಮೇಲೆ ಕೂತು ಸಾದ್ಯಂತ ವಿವರಿಸಿದ. 'ಹಿಂಗೇ ಬಿಟ್ರೆ ಊರು ಉಳ್ಯೊಲ್ಲ' ಎಂದ. ಪಟೇಲರು ನೋಡೋ ಣಪ್ಪ. ಇವತ್ತೇ ನ್ಯಾಯ ಮಾಡೋಣ; ನೀನು ಹೇಳೋವಷ್ಟು ಸುಲಭ ಅಲ್ಲಯ್ಯ ಅವ್ರನ ಮಟ್ಟ ಹಾಕೋದು' ಅಂದರು. ಪರಿಸ್ಥಿತಿ ಕಷ್ಟ ಅಂತ ಕೃಷ್ಣಪ್ಪನಿಗೂ ಅರಿವಾಯ್ತು. ಇದೇ ಸಮಯ ಅಂತ ನ್ಯಾಯಸ್ಥ ಮಂಡ ಲೀಲಿ ತಮ್ಮ ಜಾತಿಗೆ ಒಂದು ಸ್ಥಾನ ಬೇಕೂಂತ ಬೇಡಿಕೆ ಮುಂದಿಟ್ಟ.

ತಿಮ್ಮೇಗೌಡರು ಏನೂ ಹೇಳದೆ ಗಂಭೀರ ರಾದರು. ಮುಖದಲ್ಲಿ ಅಸಾಧ್ಯ ಬಿಗಿ ಬಂತು.

ಇದೇನು ತಮ್ಮ ಮೇಲಿನ ಅವಿಶ್ವಾಸವೇ ಎಂದುಕೊಂಡರು: ಅವರಿಬ್ಬರನ್ನು ದಿಟ್ಟಿಸಿದರು. ಏನೋ ವಿಶೇಷ ಕಂಡಿತು. ಇವರ ನೋಡಿದ ಕಣ್ಣೇ ಹಾಗೆ ಅಳೀತೋ ಏನೋ ಅಂತೂ ಅವರಿಬ್ಬರಲ್ಲಿ ಏನೋ ಅಗಾಧ ಮಸಲತ್ತು ಕಂಡರು. ಅದೇ ವೇಳೆಗೆ ಸರಿಯಾಗಿ ಹನುಮಯ್ಯ "ಬಸವಯ್ಯನೋರು ಒಪ್ಪಿದ ಹಾಗೇನೆ. ನೀವು ಒಪ್ಪಿದರೆ ಮುಗೀತು" ಅಂದ. ಬಸವಯ್ಯನವರು ಒಪ್ಪಿದಾರೆ ಅಂದ ಮೇಲೆ ಇಗರ ಆಳ ಇನ್ನೂ ಹೆಚ್ಚಾದಂತೆ ಕಂಡಿತು ತಿಮ್ಮೇಗೌಡರಿಗೆ. ತಾವಿಲ್ಲದಾಗ ಭಾರೀ ಮಸಲತ್ತೆ ನಡದಿರೋ ಹಾಗಿದೆ. ಪರಂಪರಾಗತವಾಗಿ ಬಂದ ತಮ್ಮ ಮನೆತನದ ಮರ್ಯಾದೆ ಒಂದು ಪಟ್ಟು ಇಳ್ದ್ಹೋಕೆ ಬಸವಯ್ಯನವರಿಗೂ ಇಷ್ಟ-ಏಗಲ್ಲ ಯೋಚ್ನೆ ಮಾಡ್ತಿರುವಾಗಲೇ ಬಾಗಿಲಲ್ಲಿ ಭೈರಪ್ಪ ನಿಂತು ಕೈಮುಗಿದ. ಕೃಷ್ಣಪ್ಪ-ಹನುಮಯ್ಯ ಕೂತಿರೋದು ಕಂಡು ಸರಿಯಾದ ಸಮಯಕ್ಕೇ ಬಂದೆ ಅದ್ಕೊಂಡ. ಹೆಚ್ಚು ಹೊತ್ತು ಕಳೀದೆ, ಬಾಗಿಲಲ್ಲೇ ನಿಂತು-ಪಟೇಲರು ಕೂತ್ಕೋ ಅಂತಲೂ ಹೇಳಲಿಲ್ಲವಾದ್ದರಿಂದ ಹಾಗೇ ನಿಂತು-ತನ್ನ ನೆಚ್ಚಿನ 'ಕಂಟ್ರಿಬ್ಯೂಷನ್' ಮುಂದೆ ಮಾಡಿ ತಾನು ನ್ಯಾಯ ಮಂಡಲಿಯಲ್ಲಿ ಸ್ಥಾನ ಕೇಳಲು ಇರುವ ಅರ್ಹತೆಯನ್ನು ಸಮರ್ಥಿಸಿಕೊಂಡ. ಒತ್ತಾಯ ಮಾಡಿದ. ಪಟೇಲರಿಗೆ ತಲೆ ಚಿಟ್ಟು ಹಿಡಿದಂತಾಯಿತು. ಇದೇನಿದು ಬದಲಾವಣೆಯ ಸೂಚನೆ ಅಂತ ಅಳುಕೋ, ಅಥವಾ ಅದರಿಂದ ಹುಟ್ಟಿದ ಸಿಟ್ಟೋ ಏನೋ ಅಂತು ಜಗ್ಗನೆ ಎದ್ದು ನಿಂತು, "ಆಗೊಲ್ಲ; ಆಗೊಲ್ಲ. ಯಾವ ಬಸವಯ್ಯ ಒಪ್ಪಿದ್ರೂ ಆಗೊಲ್ಲ. ಎಂದೂ ಇಲ್ಲದ್ದು ಇವತ್ತೇನು ನಿಮ್ಮ ಕಾರುಬಾರು? ನಾವೇನು ನ್ಯಾಯ ಸರ್ಯಾಗಿ ಹೇಳಲ್ವೇನು? ಹೀಗೆಲ್ಲ ಅವಮಾನ ಮಾಡ್ತೀರೇನು? ಯಾವ ಬದಲಾವಣೇನೂ ಇಲ್ಲ. ರಾತ್ರೀಗೆ ಯಾವತ್ತಿನ ಹಾಗೆ ನಡ್ಯುತ್ತೆ, ನ್ಯಾಯ. ಈಗ ಹೊರಟು ಬಿಡಿ ಸದ್ಯ," ಎಂದು ಗಟ್ಟಿಯಾಗಿ ಏರುದನಿಯಲ್ಲಿ ಹೇಳಿ ಒಳ ಹೋಗಿಬಿಟ್ಟರು.

ಕೃಷ್ಣಪ್ಪ-ಹನುಮಯ್ಯ ಮುಖ ಮುಖ ನೋಡಿಕೊಂಡು ಹೊರಬಂದರು. ಹನುಮಯ್ಯನಿಗೆ ಏನೋ ಹೊಳೆದಂತಾಗಿ ಭೈರಪ್ಪನಿಗೆ, "ಬಿಡ್ಬೇಡ ಕಣಯ್ಯ ಪಟ್ಟು; ಹೆದ್ರಬ್ಯಾಡ. ಅದು ಹೆಂಗೆ ಇಲ್ಲ ಅಂತಾರೆ ನೋಡೋಣ" ಅಂತ ಬೆನ್ನು ತಟ್ಟಿ, "ಬಾ ಮಾವ ಬಸವಯ್ನೋರ ಹತ್ರ ಹೊಗೋಣ" ಅಂದು ಕೃಷ್ಣಪ್ಪನನ್ನು ಕರೆದುಕೊಂಡು ಹೊರಟ.

ಹನುಮಯ್ಯ ದಡ್ಡನಲ್ಲ; ಹೇಗೆ 'ರಾಜಕೀಯ' ಮಾಡಬೇಕು ಅಂತ ಗೊತ್ತಿಲ್ಲದವನಲ್ಲ. ಬಸವಯ್ಯನವರ ಹತ್ತಿರ ಬರಬೇಕಾದರೇ ಎಲ್ಲ ಲೆಕ್ಕ ಹಾಕಿಕೊಂಡು ಬಂದಿದ್ದ ಅಂತ ಬೇರೆ ಹೇಳಬೇಕಾಗಿಲ್ಲ: ಬಂದವನೇ ಭಾರಿ ಬೇಜಾರು ಆದವನಂತೆ ಮುಖ ಸಿಂಡರಿಸಿ

ಕೊಂಡು "ಅಲ್ಲ ಬಸವಯ್ನೋರ್ರೆ ಆ ಪಟೇಲ ಮಹಾ ಯಾವ ದೊಡ್ಡಮನುಷ್ಯ ಅಂತ ಹಂಗಾಡ್ತಾನೆ ಅಂತ? ಏನ್ ಮಹಾ ಕೇಳಾಕಿಲ್ಲ ಅವ್ನ ಪೊಗರು. ಏನೋ ಹಿಂದ್ನಿಂದ ಬಂತು ಅಂತ ಊರಿನ ಯಜಮಾನ ಇದ್ದಂಗೈಡಾನೆ. ರಾಜಕೀಯ ಗೊತ್ತೈತೆ; ಚೇರ್ಮನ್ನಾಗವ್ನೆ. ಹೇಳೋರಿಲ್ಲ ಕೇಳೋರಿಲ್ಲ ಹಂಗಾತು ಆಯಪ್ಪನ ದರಬಾರು. ಅಲ್ಲ ಯಾಕ್ ಹೇಳ್ತೀನಿ ಅಂದ್ರೆ ನಿಮ್ಮಂಗೆ ಆಯಪ್ಪನಿಗೆ ಬಂದಷ್ಟು ತಲೇಲಿ ವಿದ್ಯೆ ಬುದ್ಧಿನಾರ ಐತಾ? ಏನೋ ಓದ್ಯಾನೆ ಬರೀತಾನೆ ಅಂದಾಕ್ಷಣ ನಿಮ್ಮಂಗೆ ಪುರಾಣ, ಶಾಸ್ತ್ರ ಎಲ್ಲಾ ಗೊತ್ತ? ಜೋಯಿಸ್ರನ್ನ ಸರಿಗಟ್ಟೋರು ಯಾರಿದ್ರು ಹೇಳ್ರಿ ಮತ್ತೆ ಈ ಊರಾಗೆ? ಅವ್ರ್ದೇ ಎಲ್ಲಾ ಮನಾಪಲ್ಲಿ ಆಗೋಗ್ ಬಿಟ್ಟೈತಲ್ಲ, ಅದನ್ನ ತಪ್ಪಿಸ್ಬೋರು ನೀವ; ನಿಮ್ಮಂಥೋರೂ ಲೆಕ್ಕವಿಲ್ಲ ಆ ಪಟೇಲ ರಾಯನಿಗೆ..."

ಇನ್ನೂ ಹೇಳುತ್ತಿದ್ದನೇನೊ, ಬಸವಯ್ಯನವರು "ಅದೇನು ವಿಷಯ ಹೇಳಯ್ಯ, ಯಾಕ್ ಸುಮ್ನೆ ಎಗರಾಡ್ತೀಯ" ಎಂದಾಗ ಇದ್ದದ್ದು ಇಲ್ಲದ್ದು ಎಲ್ಲಾ ಬಣ್ಣ ಕಟ್ಟಿ ಹೇಳಿ, ಪಟೇಲ ತಮ್ಮನ್ನೂ ಕಡೆಗಣಿಸಿ ಮಾತಾಡಿದನೆಂದು ಒತ್ತಿ ಒತ್ತಿ ನಿರೂಪಿಸಿ, "ಈಗ ನ್ಯಾಯ ದೊರಕಿಸಿ ಕೊಡ್ಬೇಕು ದೇವ್ರೆ" ಅಂತ ಕೈ ಮುಗಿದಾಗ ಬಸವಯ್ಯನವರು ತಕ್ಷಣ ಏನು ತಾನೆ ಹೇಳಿಯಾರು? ಹನುಮಯ್ಯನಂಥ 'ಊರುದಿರುಗ' ತಮ್ಮ ಪಕ್ಕದಲ್ಲಿ ಕೂತುಕೊಳ್ಳೋದು ಅಂದರೆ ಒಳಗೊಳಗೇ ಕಿರಿಕಿರಿ. ಆದರೆ ಕೃಷ್ಣಪ್ಪ ಈ ಸಂದರ್ಭದಲ್ಲಂತೂ ನ್ಯಾಯ ಮಂಡಲಿಗೆ ಸೇರೊಹಾಗಿಲ್ಲ; ಯಾಕೆಂದರೆ ಇದು ಆತನ ಮಗಳ ವಿಷಯ. ಹೋಗಲಿ, ಈ ಸಂದರ್ಭ ಬಿಡೋಣ ಅಂದರೆ ತಮ್ಮ ವರ್ಚಸ್ಸಿನ ವೃದ್ಧಿಗೆ ಇಂಥ ಸುಸಂದರ್ಭ ಮತ್ತೊಮ್ಮೆ ಒದಗುತ್ತೆ ಅನ್ನೋದು ಯಾವ ಗ್ಯಾರಂಟಿ? ಏನಾದರಾಗಲಿ ಬಿಡಲಾರದು ಪಟೇಲನ ಪೊಗರು ಹಚಾಗ್ತಿದೆ ಅಂತ ತೀರ್ಮಾನಿಸಿ. "ಇರ್ಲಿ, ಅದೇನೇನು ಅಂತಾರೊ ಎಲ್ಲಾ ಅನ್ನಲಿ. ನನ್ನ ಗೌರವ ಏನು ಹೋಗುತ್ತಾ? ರಾತ್ರಿ ನಿಮ್ಮ ಜನಾನೆಲ್ಲ ಕರ್ಕೊಂಡ್ ಬರ್ರಯ್ಯ. ನಮ್ಮ ಜನಾನೂ ಬರ್ತಾರೆ; ವಿಷಯ ಎತ್ತಿ. ಇದು ಅಂಥ ಇಂಥ ಸಂದರ್ಭ ಅಲ್ಲ. ಹಾದಿಗರ ಹಟ್ಟಿ ಹುಡುಗ ಹೋರಿ ಹಾಗೆ ಊರೆಲ್ಲ ಆಡೋಕ್ ಶುರು ಮಾಡಿದ್ರೆ ಹೇಗೆ ಅಂತ ಊರು ಜನ ಎಲ್ಲಾ ಕೇಳ್ತಿದಾರೆ. ನಂಗೆ ಊರು, ಊರಿನ ಜನರ ಅಭಿಪ್ರಾಯ ಮುಖ್ಯ. ರಾತ್ರಿ ಚಾವಡೀಗೆ ಬನ್ನಿ. ನೋಡೋಣ ಏನಾಗತ್ತೆ ಅಂತ" ಹೇಳಿ ಕಳಿಸಿದರು.

ಇತ್ತ ಭೈರಪ್ಪನ ಸ್ಥಿತಿಗತಿ ಏನು ಅಂತೀರಾ! ಆತನಿಗಂತೂ ಅದೇ ಧ್ಯಾನ. 'ಅದು ಹೆಂಗೆ ಇಲ್ಲ ಅಂಬ್ತಾರೆ ನೋಡೋಣ' ಅನ್ನೋ ಭಂಡ ಧೈರ್ಯ ಬೇರೆ ಬಂದುಬಿಟ್ಟಿದೆ. ಆದರೆ ಹಟ್ಟೀಲಿ ಯಾರಾದರೂ ವಿರೋಧಿಸಿದರೆ? ಅನ್ನೋ ಪ್ರಶ್ನೆ ಅದು ಯಾಕೊ ತನ್ನ ಮಗಳು ಶೀಲಾಳ ಮುಖ ಕಂಡಕೂಡಲೆ ಬಂತು. ಅದಕ್ಕೆ ಅರ್ಥವಿಲ್ಲದೆ ಇಲ್ಲ. ಯಾಕೆಂದರೆ ಶೀಲಾ ಸುಮ್ಮನೆ ಕೂತವಳಲ್ಲ. ಹಟ್ಟಿಯ ಹೆಂಗಸರ ನಿಕಟತೆ ಅವಳಿಗಿದೆ. ರಾತ್ರಿಹೊತ್ತಂತೂ ಮನೆಯ ಹಜಾರದಲ್ಲಿ ಗಂಡಸರು, ಹೆಂಗಸರು, ಮಕ್ಕಳು—ಒಟ್ಟಾರೆ ಇಷ್ಟಪಟ್ಟವರಿಗೆ ಪಾಠ ಹೇಳ್ತಾಳೆ. ಇಷ್ಟಪಡೋ ಹಾಗೆ ಮಾಡ್ತಾಳೆ. ಪಾಠ ಅಂದ್ರೆ, ಅ, ಆ, ಇ, ಈ, ಆಟ, ಊಟ, ಅಷ್ಟೇ ಅಲ್ಲ; ಅರ್ಥವಾಗೋ ಹಾಗೆ ಅನೇಕ ವಿಷಯ ಹೇಳ್ತಾಳೆ; ಕೇವಲ ಅಧಿಕಾರದ ಕಿತ್ತಾಟದಿಂದ ಹೆಚ್ಚು ಉಪಯೋಗ ಇಲ್ಲ ಅಂತಾಳೆ; ಬುಡವೇ ಬದಲಾಗಬೇಕು ಅನ್ನೊ ವಿಚಾರ ಹೇಳುವಾಗ ಹೆಚ್ಚು ತೀವ್ರವಾಗ್ತಾಳೆ. ಅದೆಲ್ಲ ಸರಿ; ಆದರೆ ಇವರು ಹೇಳಿದ್ದೆಲ್ಲ ಅವರ ತಲೆಗೆ ಹೋಗೋದು ಕಷ್ಟ; ಆದರೂ ಇತ್ತೀಚೆಗೆ ಸ್ವಲ್ಪ ಸ್ವಲ್ಪ ಅವರ ತಲೆ ಚಿಗಿತಂತೆ ಕಾಣುತ್ತೆ. ಹೀಗಾಗಿ ಅವರಿಗೆ ಭೈರಪ್ಪ, ರಾಮು ಇವರನ್ನು ಕಂಡರೆ ಭಯ ಇದೆ. ಶೀಲಾಳನ್ನು ಕಂಡರೆ ವಿಶ್ವಾಸ ಇದೆ. ಇದನ್ನೆಲ್ಲ ಭೈರಪ್ಪನಾಗಲಿ, ರಾಮುನಾಗಲಿ ಗಮನಿಸಿಲ್ಲ ಅಂತ ಅಲ್ಲ. ರಾಮೂಗಂತೂ ಶೀಲಾ ವಿಚಾರ ಕೈ-

ಗೆಟುಕದ ಕನಸು; ಇರೋದರಲ್ಲಿ ಹೇಗೆ ಅದೃಷ್ಟ ಒಲಿಸಿಕೊಳ್ಳಬೇಕು ಅನ್ನೊ ಚಿಂತೆ ಅವನಿಗೆ ಭೈರಪ್ಪನಿಗೆ ಹೇಗೊ ಒಂದಷ್ಟು ಜನ ತನ್ನ ಮನೆಯುವರ ಕೈಯಲ್ಲೆ ಇದ್ದಂತಾಗುತ್ತೆ ಅನ್ನೊ ಆಸೆ.

ಇವತ್ತು ಬಹುಶಃ ಯಾರೂ ಪಾಠಕ್ಕೆ ಬರ ಲಾರರೆಂದು ಅನ್ನಿಸಿತ್ತು ಶೀಲಾಗೆ. ಆದರೂ ಸುಮ್ಮನೆ ತನ್ನ ಎಂದಿನ ಚಟುವಟಿಕೆಯಂತೆ ಅನೇಕರ ಮನೆಗೆ ಹೋಗಿ ಕ... ಮಾತಾಡಿಸಿ ಬಂದಳು. ಅನೇಕರಿಗೆ ಇವತ್ತು ಏನಾಗುತ್ತೆ, ರಾಮು ಹೀಗೆ ಮಾಡ್ದ ಅಂತ ಹಟ್ಟೀಗೆ ಏನು ಆಪತ್ತು ಕಾದಿದೆಯೊ ಅನ್ನೊ ಆತಂಕವೂ ಇದೆ. ಶೀಲಾ ಅಂಥಾದ್ದೇನೂ ಆಗೊಲ್ಲ ಅಂತ ಧೈರ್ಯ ತುಂಬಿದ್ದಾಳೆ. ಅವಳೂ ರಾಮೂ ಪ್ರಸಂಗದ ಬಗ್ಗೆ ಜನರಿಗೆ ಅಷ್ಟಿಷ್ಟು ಹೇಳಿದ್ದಾಳೆ. ಅವರಿಬ್ಬರೂ ಇಷ್ಟಪಟ್ಟು ಹೀಗಾಗಿದೆ. ಕೇವಲ ಪರಿಜನರು ಅಂತ ಏನಾದರೂ ಮಾಡಿದರೆ ತಪ್ಪದೆ ಪ್ರತಿಭಟಿಸಬೇಕು. ನ್ಯಾಯ ತೀರ್ಮಾನ ಮಾಡೋದು ಅಗತ್ಯವೇ ಆಗಿದ್ದರೆ ಅದು ಸಮಾನತೆ ಆಧಾರದ ಮೇಲೆ ನಡೀಬೇಕು. ಮಾದಿಗರು, ಹೊಲೆಯರು ಅವರು ಇವರು ಅನ್ನೊ ಆಧಾರದ ಸಾಂಪ್ರದಾಯಕ ತಳಹದಿ, ನಿಯಮ ಬಿಟ್ಟು ನ್ಯಾಯ ನೋಡ್ಬೇಕು...ಅವಳಪ್ಪನಿಗೂ ಅದೇ ಹೇಳಿ

ದಾಗ "ಅಯ್ಯೋ ನಿಂದೇನೊ ಪುರಾಣ ಕಣಮ್ಮ, ಅವರು ಹರಜನರು ಹರಿಜನರು ಅಂತಾ ಕರೀ-ತಾನೆ ಇರ್ಲಿ; ನಾವೂ ಅದನ್ನೇ ಹಿಡ್ಕಂಡು ಗಿಟ್ಟಿಸ್ಬೇಕು. ಹಂಗಿರ್ಬೇಕು ಪ್ಲಾನು" ಅಂತ ಶುರುಮಾಡಿ ತಾನು ನ್ಯಾಯಮಂಡಲಿ ಸೇರ-ಬೇಕೊಂತ ಮನಸ್ಸು ಮಾಡಿರೊದನ್ನ ಹೇಳಿದ. ಆದಕ್ಕೆ ಜನರಿಗೆ ಹೇಳಿ ಅವರೆಲ್ಲ ಒಂದಾಗಿ 'ಸಪೋರ್ಟ್' ಕೊಡೊಹಾಗೆ ಮಾಡು ಅಂತಲೂ ಸೇರಿಸಿದ.

ಶೀಲಾಗೆ ವಿಷಯ ಎತ್ತ ಸಾಗಿದೆ ಅಂತ ಗೊತ್ತಾಯಿತು. ಇವರು ಎಂಥ ಜನ! ಈಗ ಒಂದು ಪರಿಸ್ಥಿತಿ ಉದ್ಭವವಾಗಿದೆ. ಅಲ್ಲಿಂದ ಏಳೋ ಪ್ರಶ್ನೆಗಳನ್ನು ಆಮೂಲಾಗ್ರ ಎದುರಿಸಿ ಪರಿಹರಿಸೊ ಬದಲು ಇದೆಂಥ ಆಟ ?.. ಹೀಗನ್ನಿಸಿದ್ದನ್ನು ಭೈರಪ್ಪನಿಗೆ ಹೇಳಿದಾಗ ಆತನದು ಮತ್ತದೇ ರಾಗ... "ನಿಂಗೊ-ತ್ತಿಲ್ಲಮ್ಮ ಪ್ರಪಂಚ, ಇವತ್ತು ಬಾ ಚಾವಡಿಗೆ ಹಂಗಿರ್ತೈತೆ ಮಜಾ" ಅಂದಾಗ ಏನು ಹೇಳ ಬೇಕೊ ಗೊತ್ತಾಗಲಿಲ್ಲ.

ಅಂದಹಾಗೆ, ಇಷ್ಟೆಲ್ಲ ಹಗರಣಕ್ಕೆ ಕಾರಣ ನಾದ ವ್ಯಕ್ತಿ ರಾಮುವಿನ ಸ್ಥಿತಿಗತೀನೆ ನಾವು ಮರೆತಿದ್ದೇವೆ, ಇಷ್ಟುಹೊತ್ತು. ಇದನ್ನೂ ಈ ಊರ ಗುಣ ಅಂದರೂ ಆದೀತು. ಊರ ಗುಣದ ಹೆಸರಿನಲ್ಲಿ ಜಾರಿಕೊಳ್ಳೊ ಪ್ರಯತ್ನ ಅಂತ ಭಾವಿಸಲಾಗದು. ಇಷ್ಟು ಹೊತ್ತಿನವರೆಗೆ ನಡೆದಿರೊ ವಿದ್ಯಮಾನಗಳನ್ನು ಅರ್ಥಮಾಡಿ ಕೊಂಡವರು ಬಹುಶಃ ಹಾಗೇ ಭಾವಿಸಲಾರರು. ಇರಲಿ, ಕರೆಂಟು ರೂಮಿನಲ್ಲಿ ಕೂಡಿ ಹಾಕಲ್ಪಟ್ಟ ರಾಮುವಿನ ಗತಿ ಏನಾಗಿರಬೇಡ! ನೋಡಿ ಒಂದು ಮಾತು ಮರೆತು ಹೋಗಿತ್ತು. ಈ ಮಧ್ಯೆ ಕೆಲವರು ಪಟೇಲರ ಹತ್ತಿರ ಹೋಗಿ...ಇವನನ್ನು ಹೀಗೆ ಬಿಡಬಾರದು; ಇದು ರಾಮು ಒಬ್ಬನ ವಿಷಯ ಅಲ್ಲ; ಊರಿನ ಮಾನ ಮರ್ಯಾದೆ ಪ್ರಶ್ನೆ. ನೀತಿ ನಿಯತ್ತಿನ ಪ್ರಶ್ನೆ. ಹಿರಿಯರು ಹಾಕಿಕೊಟ್ಟ ದಾರಿ ಬಿಡದೆ ಬದುಕೊ ಪ್ರಶ್ನೆ...ಹೀಗೆ ಒತ್ತಾಯ ಮಾಡಿದ್ದರು. ಆದ್ದರಿಂದ ಇಲ್ಲಿ ಕರೆಂಟು ರೂಮಿನ ರಾಮು ಒಂದರ್ಥದಲ್ಲಿ ನಿಮಿತ್ತ ಮಾತ್ರ ಎಂದರೂ ಸರಿ. ಕರೆಂಟು ರೂಮಿನ ಒಳಗಿನ ಅವನ ಚಡಪಡಿಕೆ ಹೇಳಲಾಗದು. ಅದು ಸಹಜವೂ ಹೌದು. ಅಲ್ಲಿ, ಬಸವಯ್ಯನ ಮೇಲೆ ಸಿಟ್ಟು ಕಾರ್ತಾನೆ; ಸಿಗರೇಟು ಸೇದ್ತಾ ಆದರಲ್ಲಿ ನ್ಯಾಯಸ್ಥರನ್ನೆಲ್ಲ ಸುಡ್ತಾನೆ; ತನ್ನ ಬಗ್ಗೆ ಈ ಊರು— ಅಂದರೆ ಊರಿನ ಎಲ್ಲಾ ಜನರು—ಅಂತಲೇ ಭಾವಿಸಬೇಕಾಗಿಲ್ಲ. ಯಾಕೆಂ-ದರೆ ಈ ಊರಿನಲ್ಲಿ ಜನರನ್ನು ಹಿಂದೆಲ್ಲ ಯೋಚನೆ ಮಾಡೋಕೆ ಬಿಟ್ಟಿದ್ದೇ ಇಲ್ಲ. ಈಗ ಲಾದರೂ ಅಲ್ಪಸ್ವಲ್ಪ ಸುಧಾರಣೇಲಿ ಅದೇ ಪದ್ಧತಿ ಉಳಿದಿರೋದರಿಂದ. ಊರು ಅಂದರೆ ವಿಚಾರ, ಅಧಿಕಾರ, ಆರ್ಥಿಕಶಕ್ತಿ ಹಿಡಿದಿರೋ ಅಂತಹ ಜನರು ಅಂತ ಅರಿತಿರಬೇಕು. ಇರಲಿ, ಇಂಥ ಈ ಊರು ತೆಗೆದುಕೊಳ್ಳೊ ತೀರ್ಮಾನ ಪರಿಣಾಮದಲ್ಲಿ ತನ್ನೊಬ್ಬನನ್ನು ಒಳಗೊಳ್ಳುತ್ತೊ. ಸಾರ್ವತ್ರಿಕ ವ್ಯಾಪ್ತಿ ಪಡೆಯುತ್ತೊ ಹೇಗೆ ಎಂದೂ ಯೋಚಿಸುವ ಪ್ರಯತ್ನ ಮಾಡಿಲ್ಲ. ಅದೆಲ್ಲ ಅವನಿಗೆ ಹೊಳೆದೂ ಇಲ್ಲ ಅನ್ನಬಹುದು. ನಾನು ಅಂದ್ರೆ ಏನೊ ಅಂದ್ಕೊಂಡಿದಾರೆ, ಈ ಬೋಳಿಮಕ್ಕಳು; ಅದೇನ್ ಮಾಡ್ತಾರೊ ನೋಡ್ತೀನಿ. ಅದೇನ ಮಾಡಿದ್ರೂ ಸುಮ್ನೆ ಬಿಡ್ತೀನಾ; ಒಂದ್ಸಾರಿ ಎಲ್ಲರನ್ನೂ ಒದ್ದು ಹೋಗ್ತೀನಿ ಹಾಳಾಗಿ ಹೋಗ್ಲಿ ಈ ಊರು ಅಂತ ಹೀಗೆ ಸಿಡಿದು ಬೀಳ್ತಿದಾನೆ ಒಬ್ಬನೇ. ಊರಿನ ಹೋರಿ ಇದ್ದ ಹಾಗೆ ಇರ್ತೇನೆ, ಏನ್ಮಾಡ್ತಾರೆ ನೋಡೋಣ—ಅಂತಲೂ ಅಂದು ಕೊಳ್ತಾನೆ. ಹೀಗೇ ಅಸಹನೆ, ಅವಮಾನ ಆಕ್ರೋಶ ಎಲ್ಲ ತುಂಬಿದಮನಸ್ಸು; ಜನರು ತನ್ನ ಬಗ್ಗೆ ಏನೆಲ್ಲ ಮಾತಾಡಿಕೊಳ್ಳುತ್ತಿರಬಹುದು ಅಂತ ಯೋಚಿಸಿದಾಗ ಮನಸ್ಸು ಹಿಂಡಿದಂತಾದರೂ ಮರುಕ್ಷಣದಲ್ಲೆ ಧೈರ್ಯವಾಗಿ ತಲೆ ಎತ್ತಿ ಹೋರಿಹೋದಹಾಗೇ ಹೋಗ್ತೇನೆ ಊರೊಳಗೆ ಎಂದು ಗಟ್ಟಿಮನಸ್ಸು ಮಾಡಿಕೊಳ್ತಾನೆ. ಒಂದೊಂದು ಸಾರಿ, ಈ ಜನಕ್ಕೇನಿದೆ ತಲೇಲಿ? ಸಗಣಿ ಬರೀ ಸಗಣಿ! ನಾವಿಬ್ಬರೂ ಇಷ್ಟಪಟ್ಟು ಏನಾರ ಮಾಡ್ಕೊಳ್ತೀವೆ ಇವ್ರಿಗೇನಾಗ್ಬೇಕು? ಇದೇನು ದೊಡ್ಡ ವಿಷಯ ಅಂತ ಹೀಗಾಡ್ತಾರೊ? ಥೂ! ಏನು

ಊರೋ ಇದು! ಯಾಕೆ ಹುಟ್ಟಿದೆನೊ ಇಲ್ಲಿ. ಇನ್ನೆಲ್ಲಾದ್ರೂ ಹುಟ್ಟಬಾರದಿತ್ತಾ, ಹಾಯಾಗಿ ಇರ್ತಾ ಅಂತ ಕಡೆ ಅನ್ನಿಸುತ್ತೆ. ಆಗ ಅಮೇರಿಕಾ ಇಂಗ್ಲೆಂಡು ಎದುರಿಗೆ ಬಂದು, ಕೇಳಿದ, ಓದಿದ ಸರೋವರದ ದಂಡೆಗಳು, ಅಲ್ಲಿ ಬರಿ ಮೈಯಲ್ಲಿ ಅಂಗಾತ ಬಿದ್ದ ಹೆಣ್ಣುಗಳ ಬಾಳೆ ದಿಂಡಿನಂಥ ತೊಡೆಗಳು ಒಡೆದು ಕಾಣುತ್ತವೆ; ಆ ಕ್ಷಣದಲ್ಲಿ ಅಲ್ಲಿಯ ಆಡಳಿತವೇ ಸರಿ ಅನ್ನಿಸುತ್ತೆ. ತಕ್ಷಣ ತನ್ನ ಈ ಅನಿಸಿಕೇನ ವಿರೋಧಿಸಿದ್ದ ಶೀಲಾ ಎದುರಿಗೆ ಬಂದಂತಾಗುತ್ತೆ, ಅವತ್ತು ಹಿಡಿದುಕೊಳ್ಳೋದಿಕ್ಕೆ ಹೋದಾಗ ಕಿರುಚಿದ ಶೀಲಾ ಇವತ್ತು ನನ್ನ ಸ್ಥಿತಿ ನೋಡಿ ನಗ್ತಾ ಇರಬಹುದು; ಆನಂದದಿಂದ ಹಾರಾಡ್ತಿರಬಹುದು. ಅವ್ನಿಗೆ ಹೀಗೇ ಆಗ್ಬೇಕು ಅಂತ ಹಟ್ಟೀಲೆಲ್ಲ ಅಭಿಪ್ರಾಯ ಹಬ್ಬಿಸಿರಬಹುದು......ಅಂತೆಲ್ಲ ಅನ್ನಿಸತೊಡಗಿದಾಗ ಅವಳೇ ನನ್ನ ನಿಜವಾದ ಶತ್ರು ಅನ್ನಿಸಿಬಿಡುತ್ತೆ. ಅವಳಿಗೆ ಬುದ್ಧಿ ಕಲಿಸಬೇಕು; ಹಾಳ್ ಮುಂಡೆ. ಅದೇನೇನೋ ಹೇಳ್ತಾಳೆ ತನಗೇ ಗೊತ್ತಿದೆ ಅಂತ. ಅವ್ಳ ಮೈಯೆಲ್ಲ ಸುಲಿದು ತಿಂದು ಬಿಡಬೇಕು... ನನ್ನ ಸ್ಥಿತಿ ನೋಡಿ ಆಗಿರೊ ಆನಂದಕ್ಕೆ ಇದೇ ಶಾಸ್ತಿ ಅನ್ನಬೇಕು......

ಕರೆಂಟು ರೂಮಿನ ಬಾಗಿಲು ತೆಗೆದಾಗ ಅಪ್ಪಳಿಸುವ ಅಲೆಗಳಿಗೆ ಅಡ್ಡ ಹಾಕಬೇಕಾಯಿತು.

*

ರಾತ್ರಿ ಚಾವಡಿಯಲ್ಲಿ ಅಗಾಧ ಜನಸಂದಣಿ. ಸಾಮಾನ್ಯ ಸಂದರ್ಭಗಳಲ್ಲೆ ಜನಕ್ಕೆ ಸಾಕಷ್ಟು ಕುತೂಹಲವಿರುತ್ತೆಂದ ಮೇಲೆ ಈಗ ಎಷ್ಟಿರಬೇಡ! ಭೈರಪ್ಪ ಬರಬೇಕಾದರೆ ತನ್ನ ಹಟ್ಟಿಯ ಕೆಲವರಿಗೆ ವಿಷಯ ವಿವರಿಸಿಕೊಂಡೇ ಬಂದಿದ್ದ. ತನ್ನ ಹೆಂಡತಿಗೂ ಹೇಳಿದ್ದ; 'ಬರೋ ಹಂಗಿದ್ರೆ ಬಾ. ಚನ್ನಾಗಿರ್ತೈತೆ'– ಆಕೆ ಬಂದಿದ್ದಳು: ಶೀಲಾ ಮಾತ್ರ ಬರಲಿಲ್ಲ. ಅವಳಿಗೆ ಹೋಗೋ ಮನಸ್ಸಾಗಲಿಲ್ಲ. ಹೋಗಿ ಮಾಡುವುದೇನು? ಬರೀ ತಮಾಷೆ ನೋಡಬೇಕಷ್ಟೆ– ಹೀಗೆ ಆಕೆ ತೀರ್ಮಾನಿಸಲು, ಈಗಾಗಲೆ ಗೊತ್ತಾಗಿದ್ದ ಒನ್ನೆಲೆಯೇ ಕಾರಣ. ಜೊತೆಗೆ ಈ ಊರಲ್ಲಿ ಇನ್ನೇನಾದೀತು ಈ ಘಟ್ಟದಲ್ಲಿ ಅನ್ನೊ ಅರಿವೂ ಕಾರಣ. ಎದ್ದು ಹೋಗೋ ಮಾತು ಬಿದ್ದು ಹೋಗಲಿ ಅನ್ನೊ ಭಾವದಿಂದ. "ಊರಿನ ಗೌರವ ಘನತೆ ಅಂತ ಹಳೇ ಕಂದಾಚಾರದ ಆಧಾರದ ಮೇಲೇ ಅಳೆಯೋದು ಇದೆಯಲ್ಲ. ಅದನ್ನು ಮೊದಲು ಬದಲಾಯ್ಸಿ ಅಂತ ಹಟ್ಟಿಯವರನ್ನೆಲ್ಲ ಕಟ್ಟಿಕೊಂಡು ಹೊರಟರೆ ಖಂಡಿತ ಬರ್ತೀನಪ್ಪ" ಎಂದು ಹೇಳಿದಾಗ ಭೈರಪ್ಪ, "ನಿಂದು ಅದೇ ಹುಡುಗಾಟ" ಎಂದುಬಿಟ್ಟ. ಊರಿಗೆ ಊರೇ ಬದಲಾಗ್ಬಿಡ್ಬೇಕು ಅಂದ್ರೆ ಸಂಗಮ್ಮ? ಇರೋದ್ರಾಗೆ ಹಂಗೋ ಹಂಗೆ ತೂರ್ಕಳ್ಬೇಕಮ್ಮ. ಈಗ ಹಂಗೊಂದು ಛಾನ್ಸ್ ಸಿಗಲಿ; ರಾಮು ಕೂದಲು ಒಂದೂ

ಅಳ್ಳಾಡಂಗಿಲ್ಲ; ಗೊತ್ತ? ನಮ್ಮೋನು ಅಂತ ಒಬ್ಬ ಅಲ್ಲೈದಾಗೆ ಅಂಬ್ರ ಹಟ್ಟೀರ್ಗೆಲ್ಲ ಧೈರ್ಯರ್ಗ" ಎಂದು ಹೊರಟೇ ಬಿಟ್ಟಿದ್ದ. ಮನೆ ಹತ್ತಿರ ಒಬ್ಬ ಆಳು ಇದ್ದದ್ದರಿಂದ ಆತ ಹಜಾರದಲ್ಲಿ ಮಲಗುತ್ತಿದ್ದ; ಶೀಲಾ ಒಳಗೆ. ಆಕೆ ತಾಯಿ, "ಪೆಂಗಾರ ಆಗ್ಲಿ ಜಲ್ದ್ ಬತ್ತೀ ನವ್ವ ಶೀಲಕ್ಕ" ಅಂತ ಹೇಳಿಯೇ ಹೋಗಿದ್ದಳು.

ಚಾವಡಿಗೆ ಮಾರಜ್ಜನೂ ಬಂದಿದ್ದು; ಬರಲೇ ಬೇಕಿತ್ತಲ್ಲ? ರಾಮುವನ್ನು ಒಂದು ಕಡೆ ಕೂಡಿಸಿದ್ದರು; ಭೈರಪ್ಪ ಹೆದರಬೇಡ ಅಂತ ಸನ್ನೆಯಿಂದಲೇ ಹೇಳುತ್ತಿದ್ದ. ರಾಮು ತಾನೇನೂ ಮಾಡಿಲ್ಲ, ತನಗೇನೂ ಆಗಿಲ್ಲ ಎನ್ನು ವಂತಿರಲು ಪ್ರಯತ್ನಿಸುತ್ತಿದ್ದ. ಉದ್ದೇಶಿತ ಠೀವಿಯೊಂದು ಮುಖದ ಮೇಲೆ ಕಾಣು ತ್ತಿತ್ತು. ಕೃಷ್ಣಪ್ಪನ ಮಗಳನ್ನೂ ಒಂದು ಕಡೆ ಕೂಡಿಸಲಾಗಿತ್ತು. ಆಕೆಯಂತೂ ಸೆರಗಿ ನಲ್ಲಿ ಮುಖ ಮುಚ್ಚಿಕೊಂಡು ಕೂತಿದ್ದಳು; ಹಾಗೆಂದ ಕೂಡಲೆ ಸೆರಗಿನ ಮರೆಯಲ್ಲಿ, ರಾಮುವನ್ನು ಕದ್ದು ನೋಡುತ್ತಿರಲಿಲ್ಲ ಅಂತ ಭಾವಿಸಬಾರದು. ಅದನ್ನು ತಪ್ಪಿಸೋದಿಕ್ಕೆ ಎಂಥ ಊರಾದ್ರೇನಂತೆ– ಹೇಗೆ ಸಾಧ್ಯ.

ಮಧ್ಯದಲ್ಲಿ ಪಟೇಲ್ ತಿಮ್ಮೇಗೌಡರು, ಅಕ್ಕ ಪಕ್ಕದಲ್ಲಿ ಸ್ವಲ್ಪ ದೂರದಲ್ಲಿ, ಬಸವಯ್ಯ, ಜೋಯಿಸರು ಕೂತಿದ್ದರು. ಪಟೇಲರು ತಳವಾರನನ್ನು ಕರೆದು ಗದ್ದಲ ಸುಮ್ಮ ನಿರಿಸು ಎಂದಾಗ, ಆತ ದೊಣೆ ಕುಟ್ಟಿ ಕೂಗಿ ಹೇಳಿದ: "ಪಟೇಲ್ರು ಹೇಳವ್ರೆ ಸುಮ್ನಾ ಗ್ರಪ್ಪೊ; ಅರೆ! ಸುಮ್ನಿರ್ರಮ್ಮ ತಾಯಿ ಇಲ್ಲೂ ನಿಮ್ಮ ಬಾಯಿಗೆ ಪಡವು ಬ್ಯಾಡವ?" ಸರಿ, ಸ್ವಲ್ಪ ಹೊತ್ತಿನಲ್ಲೆ ಗದ್ದಲ ಕಡಮೆಯಾಗಿ, ವಾತಾವರಣದಲ್ಲಿ ಬಿಗಿ ಮೂಡ್ತಾ ಬಂತು. ಪಟೇಲರು ಒಂದು ಸಾರಿ ಗಂಭೀರವದನ ದಿಂದ ಎಲ್ಲರ ಕಡೆ ದೃಷ್ಟಿ ಹಾಯಿಸಿದರು; ರಾಮು ಕಡೆ ನೋಡಿದರು, ಆಮೇಲೆ ಕೃಷ್ಣಪ್ಪನನ್ನು ಕುರಿತು, "ಅದೇನು ನಿನ್ನ ಅಹವಾಲು ಹೇಳು ಕೃಷ್ಣಪ್ಪ." ಎಂದರು. ತಕ್ಷಣ ರಾಮು ಹೇಳಿದ: "ಆತ ಏನ್ ಸ್ವಾಮಿ ಹೇಳೋದು. ನಾನ್ ಹೇಳ್ತೀನಿ ಕೇಳ್ರಿ. ನಂಗೊತ್ತಿಲ್ಲದ್ದು ಆತನಿಗೇನು ಗೊತ್ತು ಮಹಾ? ಮೊದಲು ನನಗೆ ಅವಕಾಶ ಬೇಕು. ಇಲ್ಲೂ ಮೇಲು ಕೀಳು ನೋಡ್ತಿದ್ದೀರಲ್ಲ?"

ಪಟೇಲರಿಗೆ ಮೊದಲ ಹೆಜ್ಜೆಯಲ್ಲೇ ಎದುರು ಮಾತು. ತುಳಿಸಿಕೊಂಡ ಹಾವಿನ ಹಾಗೆ ತಲೆ ಎತ್ತಿದರು; ನುಂಗೊ ಹಾಗೆ ನೋಡಿದರು; ಆಮೇಲೆ ಅವನನ್ನು ಕಣ್ಣಲ್ಲೆ ಕಡೆ ಮಾಡಿ, ಕೃಷ್ಣಪ್ಪನ ಕಡೆ ತಿರುಗಿ ಕೇಳಿಸ್ಸಿ ಲ್ವೇನಯ್ಯ ಕೃಷ್ಣಪ್ಪ; ಹೇಳು" ಎಂದಾಗ ರಾಮು ಅವಡುಗಚ್ಚಿದ. ತಡೆಯಲಾರದೆ. "ನನ್ನ ಮಾತಿಗೆ ಬೆಲೆ ಕೊಡ್ಬೇಕು ಅಂತ ಅರಚಿದ. ಆಗ ಜೋಯಿಸರು ಪಂಪ ಭಾರತದ ಭೀಷ್ಮ ಹೇಗೋ ಹಾಗೆ "ನಿನಗೂ ಸರದಿ ಬರುತ್ತೆ ಇರಪ್ಪ ರಾಮು, ಆತುರ ಯಾಕೆ? ಎಲ್ಲಾ ಯಾವತ್ತಿನಂತೆ ನಡೀಲಿ" ಅಂದರು.

ಕೃಷ್ಣಪ್ಪ ಏಳುವುದಕ್ಕೆ ಸ್ವಲ್ಪ ಕೊಸರಾಡ್ತ ಹನುಮಯ್ಯನನ್ನು ಚಿಗುಟಿದ; ಹನುಮಯ್ಯ ಬಸವಯ್ಯನವರ ಕಡೆ ನೋಡಿ, ಅವರ ಮುಖ ದಲ್ಲಿ ಪ್ರೇರಣೆ ಕಂಡು, ಇನ್ನೇನು ಮೇಲೆಳ ಬೇಕೆನ್ನುವಷ್ಟರಲ್ಲಿ, ಭೈರಪ್ಪ ಬಡಕ್ಕನೆ ಎದ್ದು "ಪಟೇಲ್ರು, ಆವ್ಯಾಕೆ ಈ ಊರಿನ ನ್ಯಾಯ- ಸ್ಥರು, ತಪ್ಪು ತೀಳ್ಕೋಬಾರ್ದು. ಇಲ್ಲಿ ಎಲ್ಲಾ ಜನ ಕಲೆತಿದ್ದೀರಿ. ನಂದೊಂದು ಮಾತುಐತೆ. ನೋಡಿ, ನಮ್ಮೂರು ಈಗೀಗ ಸ್ವಲ್ಪ ಬದ- ಲಾಗ್ತ ಐತೆ; ಆದ್ರೆ ಊರ್ನಿಂದ ಹೊರಗೆ ಹಾಕಿದ ನಮಗೆ ಇನ್ನೂ ಸರ್ರ್ಯಾಗಿ ನ್ಯಾಯ ಗೀಯ ಸಿಕ್ಕಿಲ್ಲ- ನಮ್ಮ ಹಟ್ಟಿ ಅಂದ್ರೆ ಎಷ್ಟು ದೊಡ್ಡದು ಏನ್ಕತೆ! ಆದಿಂದ್ರ ನಮ್ಮ ಹಟ್ಟಿಗೆ ಒಂದು ನ್ಯಾಯಸ್ಥರ ಜಾಗ ಕೊಡ್ಬೇಕು. ನಾವೂ ಊರಿಗೆ ಸರ್ರ್ಯಾಗಿ ನಡ್ಕೊಂಡ್ ಹೋಗ್ತೀವಿ."

ಪಟೇಲರು ಸಿಡಿದರು: "ಕೂತ್ಕಳಯ್ಯ ಕಂಡಿದ್ದೀನಿ ನಾನೂನು. ಈಗೇನು ನ್ಯಾಯ ಮಾಡ್ಬೇಕೊ ಬೇಡವೊ. ಎಲ್ಲಾ ತರ್ಲೆ ಆಗಿದ್ಕಲ್ಲ ನಿಮ್ದು."

ರಾಮುಗೆ ಸುಮ್ಮನಿರಲಾಗಲಿಲ್ಲ. "ನೋಡಿ, ನೀವು ಹಿಂಗೆಲ್ಲ ದಬಾವಣೆ ಸೆಕ್ಷನ್ ತಗುದ್ರೆ ಸರಿಬರೊಲ್ಲ... "ಎಂದು ಜೋರಾಗಿ ಕೂಗ

ಹತ್ತಿದಾಗ ಜೋಯಿಸರು "ಸಮಾಧಾನ ರಾಮಯ್ಯ, ಸಮಾಧಾನ; ಈಗ ನೀನು ಅಪರಾಧಿ ಸ್ಥಾನದಲ್ಲಿದ್ದಿಯೇ. ಹೀಗೆಲ್ಲ ಮನಸ್ಸಿಗೆ ಬಂದಂತೆ ಮಾತಾಡಬಾರದು; ನಮ್ಮೂರಿನ ಚಾವಡಿ ನ್ಯಾಯ ಅಂದರೆ ಯಾರೂ ಪ್ರಶ್ನೆ ಮಾಡೋ ಹಾಗೇ ಇಲ್ಲ. ಅಪತ್ತಿನಿಂದ ಇವತ್ತಿನವರೆಗೆ ಹೀಗೇ ನಡ್ಕೊಂಡು ಬಂದಿದೆ. ಹಾಗೆಯೇ ಇವತ್ತೂ ಕೆಲ್ಸ ನಡ್ಯೋದು ಮುಖ್ಯ. ಹೀಗೆಲ್ಲ ನ್ಯಾಯಸ್ಥರಿಗೆ ಅವಮಾನ ಮಾಡೋದು ಸಂಪ್ರದಾಯವಲ್ಲ." ಎಂದು ತುಂಬ ಸಮಾಧಾನದ ದನಿಹೇಳಿದಾಗ ಪಟೇಲರು, "ಹೇಳಿ ಸ್ವಾಮಿ ನೀವಾದ್ರು; ಈ ಜನಕ್ಕೆ ಬುದ್ಧಿನೇ ಇಲ್ಲ. ನಮ್ಮೂರಿನ ನ್ಯಾಯ ಅಂದ್ರೆ ಹುಡುಗಾಟವಾ?" ಎಂದು ಉಬ್ಬಿ ಹೇಳಿದರು. ಆ ಮಾತುಗಳ ಹಿಂದೆ ಆಗ್ರಹವೂ ಇತ್ತು.

ಬಸವಯ್ಯನವರು ಹನುಮಯ್ಯನ ಕಡೆ ನೋಡಿದರು. ಆತ ಮುಖ ರನ್ನು ಸರಿಪಡಿಸಿಕೊಳ್ತಾ ಎದ್ದು ನಿಂತ. "ಹಂಗಂದ್ರೆ ಹೆಂಗಾಗ್ತೈತೆ ಪಟೇಲ್ರೆ? ಈಗ ನನ್ನ ಪಾಯಿಂಟೂ ಅದೇ ಊರ್ನಾಗೆ ಜಾಸ್ತಿ ಜನ ಇರ್ವಾಗ ಅಂಥ ಕುಲಕ್ಕೊಂದ ಜಾಗ ಇದ್ರೆ ಏನತಪ್ಪು? ನಾನಂತೂ ಕೇಳ್ತಿದ್ದೀನಿ; ನಮಗೂ ಒಂದು ಜಾಗಬೇಕು" ಎಂದು ಕೃಷ್ಣಪ್ಪನ ಕಡೆ ತಿರುಗಿ, "ಏನ್ ಮಾವ?" ಎಂದ. ಆತ ಹೌದೆಂದು; ಹಂಗಾಗಿದ್ರೆ ಅದೇಂಗಾಗ್ತೈತೆ? ಇದು ತೀರ್ಮಾನವಾದ್ಮೇಲೆ ನ್ಯಾಯ ಮಾಡ್ಲಿ" ಅಂದ.

ಗುಜು ಗುಜು ಶುರುವಾಯ್ತು; ಕೂತಲ್ಲೆ ಕೆಲವು ಗುಂಪುಗಳಾಗಿ ಅವುಗಳಲ್ಲೆ ಏನೋ ಮಾತುಕತೆ ನಡೆಯುತ್ತಿತ್ತು. ತಿಮ್ಮೇಗೌಡರಿಗೆ ರೇಗಿ ಹೋಗಿತ್ತು. ಏನಾದ್ರೂ ಮಾಡ್ಕೊಳ್ಳಿ, ಈ ಊರು ಉಸಾಬರಿ ಬೇಡ— ಅಂತ ಕಿತ್ತೆಸೆದು ಹೋಗಿ ಬಿಡಲ ಅನ್ನೋವಷ್ಟು ಬೇಜಾರು ಬಂದಿತ್ತು. ಎಂದೂ ಎದುರಾಗದ ಮಾತುಗಳು ಇಂದು ಬಂದು ನಿಂತು ಕೆಣಕುತ್ತಿವೆ. ಬಂದ ಸಿಟ್ಟನ್ನು ಹಾಗೇ ಅದುಮಿಡಲು ಯತ್ನಿಸುತ್ತ ಪಟೇಲರು ಜೋಯಿಸರು

ಬಸಯ್ಯನವರ ಕಡೆ ತಿರುಗಿ, "ಏನ್ ಸ್ವಾಮಿ ಮಾತಾಡ್ರಿ, ಸುಮ್ನೆ ಕೂತರಲ್ಲ?" ಎಂದರು. ಜೋಯಿಸರು ಏನೋ ಗಾಢವಾಗಿ ಯೋಚಿಸುವವರಂತೆ ಮುಖ ಮೇಲಕ್ಕೆ ಮಾಡಿ ಸುಮ್ಮನಾದರು; ಬಸಯ್ಯನವರು ಕುಳಿತಲ್ಲೆ ಸ್ವಲ್ಪ ಒಸಗಾಡುತ್ತ ಶಲ್ಯದಿಂದ ಗಾಳಿ ಹಾಕಿಕೊಂಡು, ಕತ್ತಿನ ಸುತ್ತ, ಮತ್ತು ಎದೆಯ ಭಾಗ ಒರೆಸಿ ಕೊಳ್ಳುತ್ತಾ, ಒಂದೆರಡು ಸಾರಿ ಹುಸಿಕೆಮ್ಮು ಚಿಮ್ಮಿಸಿ "ನಂದೂ ಒಂದ್ ಮಾತು" ಅಂತ ಪ್ರಾರಂಭಿಸಿದರು. ತಳವಾರ "ಸದ್ದು ಸದ್ದು" ಅಂತ ಕೋಲು ಕುಟ್ಟಿ ಜನರ ಗುಜು ಗುಜು ಕಡಿಮೆಯಾಗಬೇಕೆಂದು ಸೂಚಿಸಿದ. ಬಸವಯ್ಯನವರು ನೆಲದ ಮೇಲೆ ಏನೋ ಬರೆಯುವಂತೆ ಮಾಡಿ, ಆಮೇಲೆ ತಲೆ ಮೇಲೆತ್ತಿ,

ಪಟೇಲರ ಕಡೆ ಬೇಕೆಂದೇ ನೋಡದೆ ಹೇಳಿದರು:

"ಇವ್ರು ಕೇಳೋದ್ರಲ್ಲೂ ಅರ್ಥ ಇದೆ ಅನ್ಸುತ್ತೆ. ಕಾಲ ಬದಲಾಗ್ತಿದೆ; ಇಷ್ಟಕ್ಕೂ ನ್ಯಾಯಾಸ್ಥಾನ ಅನ್ನೋದು ನಮಗೆ ಮಾತ್ರ ಗುತ್ತಿಗೆ ಅಂತ ಯಾಕ್ ತಿಳ್ಕೋಬೇಕೋ ಗೊತ್ತಾಗೊಲ್ಲ ನನಗಂತು.

ಪಟೇಲರಿಗೆ ದಿಗ್ಭ್ರಮೆಯಾಯಿತು ಅಂದರೂ ಉತ್ಪ್ರೇಕ್ಷೆ ಏನಲ್ಲ. ಯಾಕೆಂದರೆ ಅವರು ಬಸವಯ್ಯನವರು ಏನಾದರೂ ಕಿತಾಪತಿ ಮಾಡಬಲ್ಲರೆಂದು ಭಾವಿಸಿದ್ದರೇ ಹೊರತು ಹೀಗೆ ನೇರವಾಗಿ ನೂರಾರು ಜನರ ಎದುರು ತಮ್ಮ ಅಭಿಪ್ರಾಯಕ್ಕೆ ವಿರೋಧಿಯಾದಾರೆಂದು ಅಂದುಕೊಂಡಿರಲಿಲ್ಲ. ಹೇಗಿದ್ದರೂ ಅವರು ಒಬ್ಬ ಹಳೇ ನ್ಯಾಯಸ್ಥರು ಅನ್ನೋ ನಂಬಿಕೆ ಇವರಿಗೆ. ಈಗ ಕೂತ ನೆಲವೇ ಕಡಿದಂತಾಗಿ, 'ಎಲಾ ಬಸವಯ್ಯ' ಅಂತ ಒಳಗೊಳಗೇ ಹಲ್ಲು ಕಡಿದರು. ಅಷ್ಟರಲ್ಲೇ ಹನುಮಯ್ಯ ಎದ್ದುನಿಂತು, "ಬಸವಯ್ನೋರು ಹೇಳಿದ್ದೇ ನಾವೂ ಕೇಳೋದು; ಅಂಥ ದೊಡ್ಡ ಮನುಷ್ಯರಿಗೇ ಹಂಗನ್ನಿಸಿರ್ಬೇಕಾದ್ರೆ ಇನ್ ಯಾಕೆ ಹೇಳ್ಬೇಕು" ಅಂದ. ಭೈರಪ್ಪ ಸುಮ್ಮನಿದ್ದಾನೆ? ಎದ್ದು ಗಟ್ಟಿಯಾಗಿ ಹೇಳಿದ; "ನಮ್ಮನ್ನ ಮರೀ ಕೂಡದಂ ಮಹಾ ಸ್ವಾಮಿಗಳು; ನಮಗಂತೂ ಒಂದು ಸೀಟು ರಿಸರ್ವು. ಅವ್ರ್ಯಾಕೆ ಹೆಂಗಾರ ಮಾಡ್ಕಳ್ಳಿ." ರಾಮುವಿಗೂ ಸುಮ್ಮನಿರಲಾಗಲಿಲ್ಲ; "ಹೌದೌದು. ಇದೇನು ಗುತ್ತಿಗೇಗೆ ಕೊಟ್ಟಿಲ್ಲ ಬಸವಯ್ನೋರು ಹೇಳ್ದಂಗೆ" ಎಂದ. ಈ ಸಾರಿ ನ್ಯಾಯಸ್ಥರು ಯಾರೂ ಆ ಕಡೆ ಗಮನ ಕೊಡಲಿಲ್ಲ. ರಾಮುವಿಗೆ ಭಾರಿ ಬೇಜಾರಾಯಿತು. ಕಳ್ಳಸೂಳೆ ಮಕ್ಕಳು ಅಂತ ಬಯ್ಕೊಂಡ. ಅಷ್ಟರಲ್ಲಿ ಬಸವಯ್ಯನವರು ಮತ್ತೆ ಮಾತಾಡಿದರು:

"ನಂಗೇನು ಇದರಲ್ಲಿ ಸ್ವಾರ್ಥ ಇಲ್ಲ. ಜನದ ಅಭಿಪ್ರಾಯಕ್ಕೆ ಮನ್ನಣೆ ಕೊಡೋದು ಊರು ಉಸ್ತುವಾರಿ ನೋಡ್ಕೊಳ್ಳೋವ್ರು ಧರ್ಮ ಅಂತ ನನಗನ್ನಿಸ್ತು. ದರ್ದು. ಇಲ್ಲಿದ್ದ ಶಿವ

ಮೆಚ್ತಾನ?" ಎಂದವರು ಜನರನ್ನು ಕುರಿತು, "ಏನಪ್ಪ ಏನಂತೀರಿ ನೀವೆಲ್ಲ" ಎಂದು ಒಂದು ಮಾತು ಎಸೆದರು. ಆ ಮಾತು ಯಾವಾಗ ಬಂದೀತೋ ಅಂತ ವಾಲೀಬಾಲ್ ಆಡೋ ಹುಡುಗರ ಹಾಗೆ ಕಾಯ್ತಾ ಇದ್ದ ಜನ–ಅದೂ ಕೃಷ್ಣಪ್ಪ, ಭೈರಪ್ಪ ಮತ್ತು ಬಸವಯ್ಯನವರ ಕುಲಸ್ಥರು, ಮೊದಲೇ ನಿಯೋಜಿತರಾಗಿದ್ದವರು ಗಟ್ಟಿಯಾಗಿ, "ಸರಿ, ಸರಿ" ಅಂತ ಕೂಗಿದರು.

ಪಟೇಲರು ದಂಗಾದರು. ಜೋಯಿಸರು, 'ಇದರಲ್ಲಿ ಬಸವಯ್ಯನ ಕೈಚಳಕ ಇದೆ' ಅಂತ ಮನಸ್ಸಿನಲ್ಲೇ ವಾಸನೆ ಹಿಡಿದು ಈಗ ಹುಷಾರಾಗಿ ವರ್ತಿಸಬೇಕು ಅಂತ ಅಂದುಕೊಳ್ಳುತ್ತಿದ್ದರು. ಅಷ್ಟರಲ್ಲಿ, ಹಿಂದೆ ಆದ ಗುಜುಗುಜು ಸಂದರ್ಭದಲ್ಲಿ ಮಾತಾಡಲು ಮೊದಲು ಮಾಡಿ ಅರ್ಧಕ್ಕೆ ನಿಲ್ಲಿಸಬೇಕಾಗಿ ಬಂದವರು ಈಗ ಮುಂದುವರಿಸಿದರು; ಅದರಲ್ಲಿ ಹೊಲೆಯರು ಮತ್ತು ಕುರುಬರು ಮುಖ್ಯರು. ಅವರಲ್ಲಿ ಕೆಲವರು ಪಾಪಣ್ಣನನ್ನೂ, ಇನ್ನು ಕೆಲವರು ತಿಮ್ಮಜ್ಜನನ್ನೂ ನ್ಯಾಯಸ್ಥರನ್ನಾಗಿ ನೇಮಿಸಬೇಕೆಂದು ಕೇಳುತ್ತಿದ್ದರು. ದೂರದಿಂದಲೇ ವಾಸನೆ ಹಿಡಿದ ಭೈರಪ್ಪ ಪಾಪಣ್ಣನ ಹತ್ತಿರ ಬಂದು, "ನಾವೂ ನೀವೂ ಒಂದೇ ಲಿಸ್ಟು; ಒಬ್ಬರಿದ್ದರೆ ಸಾಕು..." ಎಂದು ಹೇಳಲು ಶುರು ಮಾಡಿದಾಗ ಪಾಪಣ್ಣ, "ಅವೆಲ್ಲ ಬ್ಯಾಡ ಕಣಪ್ಪೊ ಭೈರಪ್ಪಣ್ಣ, ನಮ್ಮದು ನಮ್ಗೆ ನಿಮ್ಮದು ನಿಮ್ಗೆ" ಅಂದು ಬಿಟ್ಟ. ಭೈರಪ್ಪ–ಬುದ್ಧಿ ಇಲ್ದೋರು–ಹಾಗೆ ಹೀಗೆ ಅಂತ ಗೊಣಗಿಕೊಳ್ತ ಹೋದ. ಈ ಗೊಂದಲಮಯ ವಾತಾವರಣ ನೋಡ್ತ ಈ ಸ್ಥಿತಿಯಲ್ಲೂ ಮೋಜು ಅನುಭವಿಸುತ್ತ ಕೂತಿದ್ದ ರಾಮುವಿಗೆ ಸಿಗರೇಟು ಸೇದಬೇಕು ಅನ್ನಿಸಿತು. ಎಷ್ಟೇ ಉದ್ಧಟ ಅನ್ನಿಸಿಕೊಂಡಿದ್ದರೂ ಈಗ ಸಿಗರೇಟು ಸೇದೋದು ತರವಲ್ಲ ಅನ್ನಿಸಿ, "ನಮ್ಮೋರೆ ಒಬ್ಬರು ನ್ಯಾಯಸ್ಥರು ಇದ್ದಿದ್ದರೆ ದಬಾಯಿಸಬಹುದಿತ್ತು. ಯಾರು ಏನ್ ಬೇಕಾದ್ರೂ ಸೇದ್ಕೊಳ್ಳಿ ಅಂತ ಆರ್ಡರೇ ಮಾಡುಬಹುದಿತ್ತು.

ಕೊಡೋಲ್ಲ." ಅಂತ ಬಯ್ಕೊಂಡಿದ್ದಲ್ಲದೆ, ಈಗ ಸ್ಥಾನಕ್ಕಾಗಿ ಹೋರಾಡ್ತಿರೋ ಭೈರಪ್ಪನಿಗೆ ಮನಸ್ಸಿನಲ್ಲೇ ಭೇಷ್ ಹೇಳಿದ.

ಅಷ್ಟರಲ್ಲಿ ಪಾಪಣ್ಣ, ತಿಮ್ಮಜ್ಜ ಎದ್ದು–ಬೇರೆಯವರಿಗೆ ಕೊಡೋದಾದರೆ ನಮಗೂ ಕೊಡಬೇಕು ಅಂತ ನಮ್ಮ ಜನರೆಲ್ಲ ಹೇಳ್ತಿದಾರೆ ಎಂಬ ಮಾತನ್ನು ಕೇಂದ್ರವಾಗಿಟ್ಟುಕೊಂಡು ಹನುಮಯ್ಯ, ಭೈರಪ್ಪನವರ ಹಾಗೆ ಜೋರು ಮಾಡದೆ ನಯವಾಗಿ ಬೇಡಿಕೆ ಮುಂದಿಟ್ಟರು. ಜೋರು ಮಾಡುವುದಕ್ಕೆ ಅವರ ಜಾತಿಯ ಜನರಿದ್ದಷ್ಟು ತಮ್ಮಲ್ಲಿಲ್ಲದ್ದು ಒಂದು ಕಾರಣವಾದರೆ, ತಾವಿಬ್ಬರೂ ಅಷ್ಟು ಹಣವಂತರೂ ಅಲ್ಲದ್ದು ಇನ್ನೊಂದು ಕಾರಣ. ಏನೋ ಇದ್ದದ್ದರಲ್ಲಿ ಇವರೇ ವಾಸಿ ಅಂತ ಅವರಿಬ್ಬರ ಜಾತಿಯವರಿಗೂ ಈಗ ಮುಂದಾಳುಗಳು.

ಪಟೇಲರು ಒಂದು ಸಾರಿ ಜನರ ಕಡೆ ನೋಡಿದರು. ಆ ಮೇಲೆ ಜೋಯಿಸರ ಕಡೆ ನೋಡಿದರು. ಅವರು ಎತ್ತಲೋ ನೋಡುತ್ತ ಕೂತರು; ಬಸವಯ್ಯನವರ ಮುಖದ ಮೇಲೆ ಒತ್ತಿಟ್ಟರೂ ಕೇಳದೆ ಕಳೆ ಬಂದಂತಿತ್ತು. ಈಗ ಮಾತಾಡೋದು ಸರಿಯಲ್ಲ ಅಂದುಕೊಂಡರು ಪಟೇಲರು. ಸ್ವಲ್ಪ ಹೊತ್ತು ಸುಮ್ಮನೆ ಕೂತರು; ಆ ಮೇಲೆ ಹೇಳಿದರು: "ಇದು ದೊಡ್ಡ ಪ್ರಶ್ನೆ, ಒಂದೇ ಮಾತ್ನಲ್ಲಿ ಹೇಳೋದಾದ್ರೆ ಊರಿಗೆ ಬೇರೆ ಪದ್ಧತಿ ತರೋ ಪ್ರಶ್ನೆ. ಇದರಲ್ಲಿ ಊರಿನ ಒಳಿತು–ಕೆಡಕು ಯೋಚಿಸ್ಬೇಕು. ಆತುರ ಬೀಳದೆ ಸ್ವಲ್ಪ ಹೊತ್ತು ಯೋಚಿಸಿ; ಈಗ ಬಂದೆ" ಎಂದು ಎದ್ದು ಹೋಗಿ ಒಳಗೆ ನೀರು ಕುಡಿದು, ಹಿತ್ತಲಿಗೆ ಬಂದರು; ಅಲ್ಲಿ ಹೂವಿನ ಗಿಡ ಬೆಳೆಸಲಾಗಿತ್ತು; ಕೂತುಕೊಳ್ಳೋದಕ್ಕೆ ಕಲ್ಲು ಬೆಂಚು ಹಾಕಲಾಗಿತ್ತು; ಹೋಗಿ ಕೂತರು; ತಳವಾರನೂ ಜೊತೆಯಲ್ಲಿದ್ದ.

ಸ್ವಲ್ಪ ಹೊತ್ತಿಗೆ ತಳವಾರ ಬಂದು ಬಸವಯ್ಯನವರ ಕಿವಿಯಲ್ಲಿ ಏನೋ ಹೇಳಿದ; ಅವರು ಸ್ವಲ್ಪ ಹೊತ್ತು ಯೋಚನೆ ಮಾಡಿ ಮೇಲೆದ್ದರು; ಸವಾರಿ ಸೀದಾ ಹಿತ್ತಲಿಗೆ ಬಂತು.

ಇತ್ತ ಚಾವಡೀಲಿ ಜೋಯಿಸರೊಬ್ಬರೇ, ಜನ ತಮಗೆ ಇಷ್ಟ ಬಂದಂತೆ ತಮ್ಮಲ್ಲೇ ಮಾತಾಡಿಕೊಳ್ತಿದಾರೆ; ಕೆಲವರು ಹಳೇ ತಲೆಗಳು, ಜೊತೆಗೆ ಹೊಸ ತಲೆಗಳೂ ಜೋಯಿಸರ ಹತ್ತಿರ ಬಂದು, 'ಊರು ಹೆಂಗಾಗ್ತಾ' ಐತೆ ಸ್ವಾಮಿ; ನೀವಾರ ಸ್ವಲ್ಪ ಏನಾದ್ರೂ ಮಾಡಿ" ಎನ್ನುತ್ತಿದ್ದರು. ಅವರು "ನೋಡೋಣ, ಎಲ್ಲಾ ಶ್ರೀಹರಿ ಇಚ್ಛೆ" ಎನ್ನುತ್ತಿದ್ದರು. ಈ ವೇಳೆಗೆ ರಾಮುವಿಗೆ

ಸಿಗರೇಟು ಚಟ ತಡೆಯಲಾಗಲಿಲ್ಲ. 'ಜೋಯಿಸ ಇದ್ದರೇನಂತೆ; ಇವ್ನ ಮನೆತನಕ್ಕಿಷ್ಟು ಬೆಂಕಿ ಹಾಕಿದ್ರು. ಇವ್ನ ಪೂರ್ವಿಕರೇ ನಮ್ಮನ್ನೆಲ್ಲ ಊರ ಹೊರಗೆ ಹಾಕಿದ್ದು' ಅಂತ ಒಳಗೇ ಒಟಗುಟ್ಟಾ ಸಿಗರೇಟು ತೆಗೆದು ಹಚ್ಚಿಬಿಟ್ಟ. ಜನಕ್ಕೆ ಒಂಥರಾ ಅನ್ನಿಸಿತಾದ್ರೂ ಯಾರೂ ಮಾತಾಡಲಿಲ್ಲ. ಜೋಯಿಸರು ನೋಡಿದರೂ ನೋಡದವರಂತೆ ಅಪ್ಪಿತಪ್ಪಿಯೂ ಅತ್ತಕಡೆ ಕತ್ತು ತಿರುಗಿಸದೆ ಸುತ್ತ ಬಂದಿದ್ದವರ ಹತ್ತಿರ ಏನೋ ಮಾತನಾಡತೊಡಗಿದರು. ಅದೂ ಈಗಿನ ವಿಷಯ ಬಿಟ್ಟು ಮಳೆ–ಬೆಳೆ ಇತ್ಯಾದಿ ಮಾತು.

ರಾಮು ಸಿಗರೇಟ್ ಸೇದ್ತಾ ಸುತ್ತ ನೋಡಿದ; ಭೈರಪ್ಪನ ಹೆಂಡತಿ ಕಂಡಾಗ, ಶೀಲಾ ಇರಬಹುದೆ ಅಂತ ಕೂತ ಕಡೆಯಿಂದಲೇ ಹುಡುಕಿದ; ಕಾಣಲಿಲ್ಲ. 'ಅವಳು ಏನೇನೊ ವೇದಾಂತ ಮಾತಾಡ್ತಾಳೆ ಇವತ್ತು ಬರೋ ಖೇನಾಗಿತ್ತು. ಸೊಕ್ಕಿವೆ ಮುಂಡೆ?' ಎಂದು-ಕೊಂಡ. ಅಷ್ಟರಲ್ಲಿ ಭೈರಪ್ಪ ಬಂದು ರಾಮು ವಿಗೆ ಧೈರ್ಯದ ಮಾತು ಹೇಳತೊಡಗಿದ. "ಹೆದರ ಬ್ಯಾಡ, ನಾನಿದ್ದೀನಿ. ಇಷ್ಟಕ್ಕೇ ನಿಲ್ಲಾಕಿಲ್ಲ ಇವೆಲ್ಲ" ಅಂದ. ರಾಮು ನಸು ನಕ್ಕ. ಇಡೀ ಊರಿನ ಮೇಲೆ ಅಸಾಧ್ಯ ಸಿಟ್ಟು ಬಂದಿದ್ದರೂ ಒಂದಿಷ್ಟು ಮಾತಾಡದೆ ಸುಮ್ಮನೆ ಸಿಗರೇಟು ಸೇದಿದ. ಮಧ್ಯೆ ಒಂದು ಸಾರಿ "ಶೀಲಾ ಎಲ್ಲಿ" ಅಂದ. ಭೈರಪ್ಪ "ನಿಂಗೊತ್ತಿಲ್ಲ ಅವ್ಳ ಕತೆ, ಏನೇನೊ ಹೇಳ್ತಾಳೆ, ಬರೊಲ್ಲ ಅಂತ ಮನೆಯಾಗ್ ಮಲಗವ್ಳೆ, ನೋಡು" ಎಂದ. ರಾಮು ಸಿಗರೇಟನ್ನು ನೆಲಕ್ಕೆ ಬಲವಾಗಿ ಒಸಗಿ ಚೂರು ಚೂರು ಮಾಡಿದ.

ಇತ್ತ ಹಿತ್ತಲ ವಿಷಯ ಮರತೇ ಬಿಟ್ವೆವಲ್ಲ? ಅಲ್ಲಿ ಆಗಲೇ ಸಮಾಲೋಚನೆ ಶುರುವಾಗಿತ್ತು. ಪಟೇಲರು ಬಸವಯ್ಯನವರ ಬುದ್ಧಿವಂತಿಕೆಯ ಪ್ರಶಂಸಾವಾಕ್ಯಗಳಿಂದಲೇ ಮಾತು ಪ್ರಾರಂಭಿಸಿದ್ದರೆಂದಮೇಲೆ ವಿವರಣೆ ಯಾಕೆ? ಈಗ ಅವರು ಹೇಳ್ತಾ ಇದ್ದರು: "ಅಲ್ಲಿ, ನೀವು ಆ ಹನುಮ, ಭೈರ ಇವ್ರ ಮಾತಿಗೆ ಯಾಕೆ ಅಷ್ಟೊಂದು ಬೆಲೆ ಕೊಡ್ತೀರಿ? ಈಗ ನಿಮಗೇನಾಗಿದೆ ಕಡಿಮೆ ಅಂತ. ನಿಮ್ಮಷ್ಟು ಬುದ್ಧಿ ನನಗಿದ್ದಿದ್ದರೆ ಬಿಡಿ; ನನ್ನೊಂತೋರ್ನೆ ಎಲ್ಲಿ ಬಂತು ಅದು? ಅಲ್ಲಿ, ಈ ತರ್ಲೆ ಜನ ಕಟ್ಕೊಂಡ್ರೆ ಕೆಲ್ಸ ಆಗುತ್ತ? ಆಮೇಲೆ ಈ ಊರ್ನಾಗೆ ನಮ್ಮ-ನಿಮ್ಮ ಜನಾನೆ ಜಾಸ್ತಿ ಇರೋದು. ಜೋಯಿಸರು ಬಿಡಿ, ಹಿಡಿತಕ್ಕೆ ಸಿಕ್ಕಿದ ಆಸಾಮಿ. ಅಂತೂ ನಾವಿಬ್ರೂ ಸರ್ಯಾ-ಗಿದ್ರೆ ಯಾರ್ದೂ ನಡ್ಯೋಲ್ಲ. ಚನ್ನಾಗ್ ಯೋಚ್ನೆಮಾಡಿ," ಎಂದು ಒತ್ತಿ ಹೇಳಿದಾಗ ಬಸವಯ್ಯನವರಿಗೆ ತಕ್ಷಣ ಏನು ಹೇಳಬೇಕೆಂದು ಗೊತ್ತಾಗಲಿಲ್ಲ. ಹಾಗಾದ್ರೆ ಪಟೇಲರು ತಮ್ಮನ್ನು ಬಯ್ದದ್ದು ಸುಳ್ಳೆ? ಇದೇ ತಾನೆ ಹೊಗಳಿದರಲ್ಲ? ಇದು ಸಮಯ ಸಾಧಕ ಹೊಗಳಿಕೆ ಅಲ್ಲ ತಾನೆ? ಆದರೂ ಇವರ ಮಾತುಗಳಲ್ಲಿ ಸತ್ಯ ಇದೆ ಅನ್ನಿಸತ್ತೆ. ನಾವು—ನಾವು ಜಾತಿ ಅಂತ ಜಗಳಾಡಿದ್ರೆ ಸರಿಯಲ್ಲ; ಈಗ ಅಂತಸ್ತು ನೋಡಬೇಕು. ಇಲ್ದಿದ್ರೆ ಕಷ್ಟ. ಆಮೇಲೆ ಆ ಜನ ಎಲ್ಲ ಒಂದಾದ್ರೆ ತಾನು ಅತ್ತಲೂ ಇಲ್ಲ, ಇತ್ತ ಪಟೇಲರ ಕಡೇನೂ ಇಲ್ಲ ಅನ್ನೊ ಹಾಗ್‌ದ್ರೆ—

ಅಷ್ಟರಲ್ಲಿ ಪಟೇಲರು ಮತ್ತೆ ಹೇಳಿದರು. "ಅಲ್ಲ ಬಸವಯ್ನೋರೆ, ನೀವು ಇರೋವರೆಗೂ ಇದ್ದು ಆ ಹಲಾಲ್ ಟೋಪಿ ಹನುಮನ ಮಾತಿಗೆ ಬೆಲೆ ಕೊಟ್ಟಿದ್ದೀರಲ್ಲ? ನೀವೆಲ್ಲಿ, ಅವನೆಲ್ಲಿ?"

ಒಂದಷ್ಟು ಕಾಲಯೋಚಿಸಿದ ಬಸವಯ್ಯನವರಿಗೆ ಅದೂ ಸರಿ ಅನ್ನಿಸಿತು. ತಾವು–ಪಟೇಲರೂ ಒಂದಾಗಿರೋದೆ ಸೂಕ್ತ ಅಂದುಕೊಂಡರು. ಹಾಗೆ ಮತ್ತೊಂದು ಅಂಶವೂ ಮೇಲೆದ್ದಿತು: ಕೃಷ್ಣಪ್ಪ ಹೇಗಾದ್ರೂ ಅವರ ಜಾತೀಲಿ ದೊಡ್ಡ ಕುಳ; ಇತ್ತ ಭೈರಪ್ಪನೂ ಅಷ್ಟೆ. ತಮ್ಮಿಬ್ಬರಷ್ಟು ಅಲ್ದಿದ್ರೂ ಅವರೂ ಇದ್ದದ್ದರಲ್ಲಿ ಆಸ್ತಿವಂತರು; ಹಣ ಆಡೋರು. ಅವ್ರನ್ನ ಬಿಟ್ಟರೆ ಭವಿಷ್ಯದಲ್ಲಿ ಅನಾನುಕೂಲ ಆಗಬಹುದಲ್ಲವೆ? ಭೈರಪ್ಪನ್ನ ಸೇರಿಸ್ಕೊಂಡರೆ ಒಂದು ರೀತಿ ಜಾತ್ಯಾತೀತತೆಗೂ ಉದಾಹರಣೆ ಕೊಡಬಹುದಲ್ಲವೆ? ತಮಗೆ ಬಂದ ಆಲೋಚನೆಯನ್ನು ಪಟೇಲರ ಮುಂದಿಟ್ಟರು. ಅವ

ರಿಗೂ ಇದರಲ್ಲಿ ಅರ್ಥ ಇದೆ ಅನ್ನಿಸಿತು. ಹೀಗೆ ಸ್ವಲ್ಪವಾದರೂ 'ಸುಧಾರಣೆ' ಆಗ್ದಿದ್ರೆ ಆಗೋಲ್ಲ ಅಂತ ಅನ್ನಿಸಿ ಮತ್ತೊಂದು ಮಾತು ಸೇರಿಸಿದರು. "ನಿಮ್ಮ ಮಾತೇನೊ ಸರಿ ಬಸವಯ್ಯನೋರೆ, ಆದ್ರೆ ಇನ್ನು ಯಾರಿಗೂ ಅವ್ಕಾಶ ಬೇಡ. ಆ ಪಾಪಣ್ಣ, ತಿಮ್ಮಜ್ಜ ಯಾರಿಗೂ ಬೇಡ."

ಬಸವಯ್ಯನವರು ನಕ್ಕು ಹೇಳಿದರು: "ಅಲ್ಲ, ಅವ್ರಿಗೆಲ್ಲ ಜಾಗ ಕೊಡ್ಬೇಕು ಅಂತ ಹೇಳೋಕೆ ನಾನೇನು ದಡ್ಡನೆ? ಅವರು ಯಾರೂ ಬಲವಾದೋರಲ್ಲ ಬಿಡಿ. ಅದರ ಮೇಲೆ ಅವರ ಜನದ್ದು ಅಂಥ ಜಾಸ್ತಿ ಮನೆಗಳೂ ಇಲ್ಲ."

ಸರಿ, ಈ ತೀರ್ಮಾನವನ್ನು ಭೈರಪ್ಪ, ಕೃಷ್ಣಪ್ಪ ಇವರಿಗೆ ಮೊದಲೇ ತಿಳಿಸಿದರೆ ವಾಸಿಯೆಂದು ಪಟೇಲರು ಅಲ್ಲಿಂದಲೆ ಹೇಳಿ ಕಳಿಸಿದರು. ಪಟೇಲರ ಆಳು ಅವರಿಬ್ಬರ ಕಿವಿಯಲ್ಲಿ ಪಿಸುಗುಟ್ಟಿದ ಕೂಡಲೇ ಅವರು ಎದ್ದು ಹೋದದ್ದು ಕಂಡ ಜೋಯಿಸರು, 'ಏನೋ ನಡೀತಿರೊ ಹಾಗಿದೆ ಮಸಲತ್ತು' ಎಂದು ಎದ್ದು ವಾಸನೆ ಹಿಡಿಯಲು ಹಿಂದೆ ಮುಂದೆ ನೋಡಲಿಲ್ಲ. ಜೊತೆಗೆ ಬಸವಯ್ಯನವರು ಆಗಲೇ ಹೋದದ್ದು ಕುಮ್ಮಕ್ಕು ಕೊಟ್ಟಿತು; ನೋಡೋಣ ಎಂದುಕೊಂಡು ಸುಮ್ಮನೆ ಕೂತರು, ನಸ್ಯ ಏರಿಸುತ್ತ.

ಭೈರಪ್ಪ ಮತ್ತು ಅವನ ಜಾತಿಯವರನ್ನು ಎಂದೂ ಹತ್ತಲಿಗೂ ಕರೆಯದಿದ್ದ ಪಟೇಲರು ಅಂದು ನಸುನಗುತ್ತಾ ಸ್ವಾಗತಿಸಿದಾಗ ಭೈರಪ್ಪನಿಗೆ ಖುಷಿ. ನಿಂತೆ ಇದ್ದ ಅವನನ್ನು ಬಸವಯ್ಯನವರು "ಕೂತ್ಕೊ ಭೈರಪ್ಪ ಪರವಾಗಿಲ್ಲ" ಎಂದು ಒತ್ತಾಯಿಸಿದಾಗ, ಪಟೇಲರೂ ಹಾಗೇ ಅಂದಾಗ ಆನಂದ ಹೇಳತೀರದು; ಕೂತ ಕೃಷ್ಣಪ್ಪನಿಗೂ ಅದೇ ಸ್ವಾಗತ, ಅವನೂ ಕೂತ. ಪಟೇಲರು ಮತ್ತು ಬಸವಯ್ಯನವರು ಎಲ್ಲಾ ಹೇಳಿದರು: "ನೀವಿಬ್ಬರೂ ನ್ಯಾಯಮಂಡಲೀಲಿ ಇರಬೇಕು ಅಂತಲೆ ನಮ್ಮಾಸೆ. ಆದ್ರೆ ನೀವು ನಿಮ್ಮ ಜನ ಹಾಗೆ ಹೀಗೆ ಅಂತ ಕಟ್ಕೊಂಡು ನಮ್ಮನ್ನ ಎಲ್ಲಿ ಮೀರಿತೀರೊ ಅಂತ ಅನುಮಾನ..." ಎನ್ನುತ್ತಿರುವಾಗ ಭೈರಪ್ಪ "ಛೆ! ಛೆ! ಬಿಟ್ ಬಿಡ್ರಿ ನೀವು ತು· ಎಲ್ಲಾದ್ರೂ ಉಂಟಾ? ನ್ಯಾಯಮಂಡಲಿ ಅಂದ್ಮೇಲೆ ನಾವೆಲ್ಲ ಸಮಾನ; ಈಕ್ವಾಲಿಟಿ (Equality) ಅಲ್ಲವಾ?" ಎಂದ ತನ್ನನ್ನು ಅವರಿಬ್ಬರ ಸಾಲಿನಲ್ಲಿ ಸ್ಥಾಪಿಸಿಕೊಳ್ಳುತ್ತ, ಕೃಷ್ಣಪ್ಪ ಸ್ವಲ್ಪ ಹಿಂದೆ ಮುಂದೆ ನೋಡಿದ. ಏಕೆಂದರೆ ಹನುಮಯ್ಯ ಏನೆಂದಾನೋ ಅನ್ನೊ ಆತಂಕ ಅವನಿಗೆ. ಇದನ್ನರಿತ ಅವರಿಬ್ಬರೂ "ಅವ್ನ ವಿಷಯ ಬಿಟ್‌ಬಿಡು; ನಮಗಿರ್ಲಿ. ಅವ್ನು ಯಾವ ಲೆಕ್ಕ? ಈ ಉರ್ನಾಗೆ ಇರೋಕೆ ಅಂಗೈಯಗಲ ಜಾಗ ಬಿಟ್ರೆ ಇನ್ನೇನಿದೆ, ಬಾಯೊಂದು ಬಿಟ್ಟು," ಎಂದಾಗ ಕೃಷ್ಣಪ್ಪ ಒಪ್ಪಿದ. ಅನಾಯಾಸವಾಗಿ ಬಂದ ಸ್ಥಾನ ಯಾಕೆ ಬಿಡೋದು? ಅದರಲ್ಲೂ ಇವರೆಲ್ಲರ ಜೊತೆ ತಾನೂ ಒಬ್ಬ ನ್ಯಾಯಸ್ಥ! ಎಂಥ ಗೌರವ ಏನು ಕತೆ!

ಒಬ್ಬೊಬ್ಬರೇ ಮೆಲ್ಲಗೆ ಬಂದು ಅವರವರ ಜಾಗದಲ್ಲಿ ಉಪಸ್ಥಿತರಾದದ್ದನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದರು ಜೋಯಿಸರು. ಪಟೇಲರು ಒಂದೆರಡು ಸಾರಿ ಕೆಮ್ಮಿ ಹೇಳಿದರು: "ವಾತಾವರಣ ಸ್ವಲ್ಪ ತಂಪಾಗ್ಲಿ ಅಂತ ಬಿಡುವು ಕೊಟ್ಟದ್ವಿ. ಈಗ ಹೀಗೆ ಮಾಡ್ಬಹುದು ಅಂತ ನಂಗನ್ಸುತ್ತೆ: ಈಗ ನೋಡಿ ಸಮಸ್ಯೆ ಇರೋದು ಭೈರಪ್ಪನ ಜಾತಿ ಮತ್ತು ಕೃಷ್ಣಪ್ಪನ ಜಾತಿ ಮಧ್ಯೆ ಆದ್ದರಿಂದ ಅವ್ರಿಬ್ಬರನ್ನು ಇವತ್ತಿನಿಂದ ನ್ಯಾಯ ಮಂಡಲೀಗೆ ಸೇರಿಸ್ಕೊಳ್ತೀವೆ. · ಅಲ್ಲಿಗೆ ಅವರಿಗೂ ಅವಕಾಶಕೊಟ್ಟಿದ್ದೇವೆ. ನಾವೇ ಹಿಡ್ಕೊಂಡು ಕೂತ್ಕೊಬೇಕು ಅಂತ ನಮ್ಮಾಸೆ ಅಲ್ಲ. ಬೇರೆ ಜನಾ ಕೇಳಿದ್ದನ್ನು ಈಗ ಲೆಕ್ಕಕ್ಕೆ ತಗೊಳ್ಳಾಕಾಗೋದಿಲ್ಲ. ಇದಿಷ್ಟೆ ವಿಷಯ...ಏನಂತೀರಿ ಬಸವಯ್ಯನೋರೆ?"

ಬಸವಯ್ಯನವರು ಕ್ಷಣಕಾಲ ಮೇಲೆ ದಿಟ್ಟಿಸಿದರು. ಚಿಂತೆಯ ಗೆರೆಗಳನ್ನು ಮೂಡಿಸಿದರು; ಗಂಭೀರವಾದರು. ಮೌನ ಧರಿಸಿದರು; ಏನೋ ಚಿಂತನೆ ನಡೆಸೋ ಹಾಗೆ ಸ್ವಲ್ಪ ಕಾಲ ಕೂತು ಮೌನ ಮುರಿದರು:

"ಪಟೇಲರ ಮಾತು ಸರಿ ಅನ್ಸುತ್ತೆ.

ಹಳ್ಳಿಯ ಶಾಂತಿ, ಸುಖದ ದೃಷ್ಟಿಯಿಂದ ನಾವು ಹಾಗೆ ನಡೀಬೇಕು. ಬೇರೆ ಜಾತಿಯವರ ವಿಷಯ ಇಲ್ಲಿ ಮುಖ್ಯವಾಗಿಲ್ಲವಾದ್ದರಿಂದ ಅದನ್ನು ಅಲ್ಲಿಗೆ ಬಿಟ್ಟುಬಿಡೋದು ಸರಿ" ಎಂದು ಹೇಳಿ ಪಟೇಲರ ಕಡೆ ತಿರುಗಿ, "ಇನ್ನು ಕೃಷ್ಣಪ್ಪ, ಭೈರಪ್ಪನ್ನ ಕರೆದು ಇಲ್ಲಿ ಕೂಡಿಸ ಬಹುದಲ್ಲ ?" ಎಂದರು. ಪಟೇಲರು "ಓಹೊ! ಅದಕ್ಕೇನಂತೆ, ಆಗಬಹುದು" ಎನ್ನುತ್ತಿರು ವಾಗಲೇ ಭೈರಪ್ಪ ಎದ್ದುನಿಂತು ಅಧಿಕಾರ ಸ್ಥಾನಕ್ಕೆ ಹೋಗಲು ಬಟ್ಟೆಬರೆ ಕೊಡವಿಕೊಳ್ಳು ತ್ತಿದ್ದ. ಕೃಷ್ಣಪ್ಪ ಮೆಲ್ಲಗೆ ಏಳುತ್ತ ಹನುಮಯ್ಯನ ಕಡೆ ನೋಡುತ್ತಿದ್ದ.

ಬಹಳ ಬುದ್ಧಿ ಓಡಿಸಿ ತನ್ನನ್ನು ತಪ್ಪಿಸಿದಾರೆ ಅಂತ ಅಂದುಕೊಂಡ ಹನುಮಯ್ಯ. ತನ್ನ ಜಾತಿಯವರಿಗೆ ಪ್ರಾತಿನಿಧ್ಯ ಬೇಕು ಅಂತ ತಾನು ಕೇಳಿದ್ದು, ಅದು ಈಗ ಈಡೇರಿರೋದ್ರಿಂದ ತಾನು ಹೇಗೆ ಮಾತಾಡೋದು ಎಂದು ಒಳಗೇ ಒದ್ದಾಡಿದ. ಅಂತೂ ಇಷ್ಟು ಕಷ್ಟ ಬಿದ್ದರೂ ತನಗೆ ಕೈಕೊಟ್ಟರು ಎಲ್ಲ; ಕೃಷ್ಣಪ್ಪ ಮಾವನೂ ಅವರ ಬುಟ್ಟಿಗೆ ಬಿದ್ದ ಅಂತ ತೀರ್ಮಾನಿಸಿ ಹಲ್ಲುಕಡಿದ.

ಜೋಯಿಸರಿಗೂ ಮನಸ್ಸು ಕಡಿದಿತ್ತು. ಇಷ್ಟೆಲ್ಲ ತೀರ್ಮಾನವನ್ನು ತಾವಿಲ್ಲದೆ, ತಮ್ಮನ್ನು ಲೆಕ್ಕಕ್ಕೆ ತಾರದೆ, ಮಾಡಿದ್ದಾರೆಂಬುದನ್ನು ಕಂಡು ಏನಾದರೂ ಮಾಡಬೇಕು ಈ ಕದೀಮರಿಗೆ ಅಂತ ಲೆಕ್ಕಾಚಾರ ಹಾಕಿ, ಕಡೆಗೆ ಒಂದು ಗ್ಯಾರಂಟಿ ಗುಳಿಗೆ ಸಿದ್ಧಮಾಡಿ ಬಾಯಿಬಿಟ್ಟರು :

"ನನ್ನದೊಂದು ಮಾತಿದೆ ಇಲ್ಲಿ"—ಪಟೇಲರು, ಬಸವಯ್ಯ, ಹನುಮಯ್ಯ, ಎಲ್ಲ ಇತ್ತಕಡೆ ನೋಡಿದಾಗ ಮುಂದುವರಿಸಿದರು : "ಇವರಿಗೆ ಅವಕಾಶ ಕೊಟ್ಟ ಮೇಲೆ, ಹೊಲೆಯರು, ಕುರುಬರು ಇದಾರಲ್ಲ, ಅವ್ರಿಗೂ ಕೊಡಬೇಕು ಅನ್ಸುತ್ತೆ. ಇಲ್ದಿದ್ರೆ ಇದು ಅನ್ಯಾಯ ಅಂತ ಹೇಳದಿದ್ದರೂ ಅಪೂರ್ಣ ಅನ್ನ ಬೇಕಾಗುತ್ತೆ. ಜೊತೆಗೆ ಇನ್ನೊಂದು ಅಂಶ ಗಮನಿಸಬೇಕು. ಮುಂದೆ ಹೇಗಾದ್ರು ಇರಲಿ, ಈಗ ಕೃಷ್ಣಪ್ಪನ ಮಗಳ ವಿಷಯ ನಮ್ಮ ಮುಂದಿರೋವಾಗ ಆತನೇ ನ್ಯಾಯಸ್ಥ ಆಗಿರೋದು ಅಷ್ಟೊಂದು ಸರಿಯಲ್ಲ ಅನ್ಸುತ್ತೆ. ಇದನ್ನ ಯಾಕೆ ಹೇಳ್ತೀನಿ ಅಂದ್ರೆ, ಸುತ್ತ ಏಳು ಹಳ್ಳಿ ಜನ ಆಮೇಲೆ ನಮ್ಮ ಹಳ್ಳಿ ಕಡೆ ಬೆರಳು ತೋರಿಸಬಾರ್ದು ಅಂತ ಅಷ್ಟೆ."

ಬಸವಯ್ಯನವರಿಗೆ ನೈಜವಾಸನೆ ಹೊಡೆದು ಒಂಥರಾ ನೋಡಿದರು. ಹನುಮಯ್ಯ ಖುಷಿಯಾದ; ದಿಗ್ಗನೆ ಎದ್ದ. "ಜೋಯಿಸರು ಹೇಳೋದ್ ಸರಿ. ನೂರಕ್ಕೆ ನೂರು ಸರಿ. ಅದು ತೀರ್ಮಾನ ಆಗ್ದೆ ಏನೂ ನಡೀಕೂಡ್ದು. ಬೇರೆ ಜನಾನ ಲೆಕ್ಕಕ್ಕೇ ತಗೊಳ್ಳೊಲ್ಲ ಅಂದ್ರೆ ಏನರ್ಥ. ಇದ್ರಲ್ಲೇನೊ ಮಸಲತ್ತಿದೆ" ಎಂದುಬಿಟ್ಟ. ಬಸವಯ್ಯನವರಿಗೆ ಬೇಜಾರು ಬಂತು. ಜೋಯಿಸರ ಮೇಲಿನ ಸಿಟ್ಟನ್ನೂ ಅವನ ಮೇಲೇ ಹಾಕಿ, "ಮಸಲತ್ತು ಹಾಗೆ ಹೀಗೆ ಅಂತ ನಾಲಗೆ ಹರೀಬಿಟ್ರೆ ಸರ್ಯಾಗೋಲ್ಲ ಹನುಮಯ್ಯ" ಎಂದದ್ದೇತಡ, ಹನುಮಯ್ಯ ಲುಂಗಿ ಮೇಲೆ ಕಟ್ಟಿ, "ಏನ್ರೀ ಅನ್ನೋದೆ? ನೀವು ಮಾಡೋದೂ ಹಂಗೆ, ನಾವು ಅನ್ನೋದೂ ಹಂಗೆ" ಎನ್ನುತ್ತ ಗೂಳಿಯಂತೆ ಹತ್ತಿರ ಬಂದಾಗ, ಅವರೂ ಶಲ್ಯಕೊಡವಿ ಮೇಲೆದ್ದರು. ಮಾತಿಗೆ ಮಾತು ಬೆಳೆಯಿತು. ಜಗಳ ಶುರುವಾಯಿತು. ಜೋಯಿಸರು ರೊಟ್ಟಿ ತುಪ್ಪಕ್ಕೆ ಜಾರಿತು ಎಂದುಕೊಂಡರು. ಆದರೂ ಹನುಮಯ್ಯ ಕಂಡಾಪಟ್ಟೆ ಮಾತಾಡತೊಡಗಿದಾಗ ಸುಮ್ಮನಿರುವುದು ಒಳ್ಳೆಯದಲ್ಲವೆಂದು ಲೆಕ್ಕಹಾಕಿ, ಜೋಯಿಸರು "ಹರಿಹರಿ, ಏನಪ್ಪಾ ಇದು! ಸಮಾಧಾನ, ಸಮಾಧಾನ; ಶಾಂತವಾಗಿರ್ಬೇಕು, ಶಾಂತಿ ಇರ್ಲಿ ಹೀಗೆಲ್ಲ ಆಡಿದ್ರೆ ಹ್ಯಾಗೇಂತ?" ಎಂದು ಚಡಪಡಿಸಿದರು, ಪರಿಸ್ಥಿತಿ ಬಿಗಡಾಯಿಸುತ್ತಿರುವ ಸೂಚನೆ ಕಂಡು, ಇಲ್ಲಿಯವರೆಗೆ ಸುಮ್ಮನಿದ್ದ ಪಟೇಲರೂ ಮಧ್ಯೆ ಪ್ರವೇಶಿಸಿದರು; ಕಂಡಾಬಟ್ಟೆ ಮಾತಾಡುತ್ತಿದ್ದ ಹನುಮಯ್ಯನಿಗೆ ಸ್ವಲ್ಪ ಗೌರವ ಕೊಡೋದು ಕಲಿಯಯ್ಯ. ಏನಿದು? ಇಲ್ಲಿ ಯಾರೂ ಕುಂತಿಲ್ಲ ಅಂದ್ಕೊಂಡೇನು? ಹ್ಞಾಂ? ಎಷ್ಟು ನಿಂದು ಪೊಗರು; ತಲೆಹರಟೆ ಮಾಡ್ಬಾರ್ದು 'ಎಷ್ಟಾದ್ರೂ" ಎಂದು

ಗದರಿಸಿದಾಗ ಸುಮ್ನಿರ್ರಿ ಕಂಡಿದ್ದೀನಿ ನಿಮ್ದೆಲ್ಲ. ಮಹಾನ್ಯಾಯ ಎಲ್ರೂಬದೂ; ಕೇಳಾಕಿಲ್ಲ ಇವ್ರ್ ನ್ಯಾಯ! ನನಗ ಜಾಗಬೇಕು ಅಂತ ನಾನೇನ್ ಕೇಳ್ತಿಲ್ಲ. ಆ ತಿಮ್ಮಜ್ಜ, ಪಾಪಣ್ಣ ಇವ್ರ್ ಜನ್ರೆಲ್ಲ ಏನ್ ಪಾಪ ಮಾಡವ್ರೆ ಅಂತ ನನ್ ಕೊಶ್ಚನ್ನು" ಎಂದು ನ್ಯಾಯಂದ ಸೋಗಿನಲ್ಲಿ ಬಣ್ಣ ಬಿಟ್ಟ.

ತಕ್ಷಣ ಕೃಷ್ಣಪ್ಪ ಮಧ್ಯೆ ಪ್ರವೇಶಿಸಿದ; 'ನ್ಯಾಯಸ್ಥ'ರಾದ ಪಟೇಲರು. ಬಸವಯ್ಯನವರು ಅವಮಾನಕ್ಕೆ ಈಡಾಗೋದನ್ನು ತಾನೂ ಒಬ್ಬ 'ನ್ಯಾಯಸ್ಥ' ನಾಗಿದ್ದು ಹೇಗೆ ಸಹಿಸುವುದು? ಬಂದು ಬುದ್ಧಿ ಹೇಳಿದ: "ಸಮಾಧಾನ ಬೇಕು ಹನುಮಯ್ಯ, ನೀನು ಕೇಳ್ತಿದ್ದು ನಮ್ಮ ಜನಕ್ಕೆ ಒಂದು ಜಾಗತಾನೆ? ಕೊಟ್ಟವ್ರಲ್ಲ ಈಗ. ನಂಗೇ ಬೇಕು ಅಂಬ್ತ ನಾನೇನ್ ಹರಕೆ ಕಟ್ಟಿದ್ನ? ಏನೋ ಕೊಟ್ರು; ಬಂತು. ಆಯ್ತಲ್ಲಪ್ಪ ಈಗ. ಯಾಕ್ ಜಗಳ?

ಹನುಮಯ್ಯ ಮಾತಾಡಲಿಲ್ಲ. ಕೃಷ್ಣಪ್ಪನನ್ನ ಉರಿದು ತಿನ್ನುವಂತೆ ನೋಡಿದ; ಅಷ್ಟರಲ್ಲಿ ಭೈರಪ್ಪನೂ ಬಂದು "ಮುಖ್ಯ ನಮಗೆ ಈಗ ಗಾಂಧೀ ಮಾತ್ನ ಪೇಳ್ದಂಗೆ ಶಾಂತಿಬೇಕು. ಊರ್ನಾಗೆ ಎಲ್ಲಾ ಸಮಾಧಾನ ಇರ್ಬೇಕು. ಸುಮ್ಕೆ ಹಿಂಗೆಲ್ಲ ಹಾರಾಡಿದ್ರೆ ಏನ್ಬಂತು; ತಾಳ್ಮೆ ಬೇಕು..." ಎಂದು ಹೇಳುತ್ತಿರುವಾಗ ಹನುಮಯ್ಯ "ಕಂಡಿದ್ದೀನಿ ಇರಯ್ಯ ಅಲ್ಲಿ" ಎಂದವನೆ, "ಎಲ್ಲ ಮೋಸಗಾರ್ರು; ದಗಾಕೋರ್ರು..." ಎಂದು ಏನೇನೋ ಬಯ್ಯತೊಡಗಿದಾಗ ಬಸವಯ್ಯ, ಪಟೇಲ್ ತಿಮ್ಮೇಗೌಡ– ಇಬ್ಬರೂ ಮತ್ತಷ್ಟು ರಂಗಾದರು. ಊರಜನರೆದುರೆ ಒಬ್ಬ 'ಯಃಕಶ್ಚಿತ್ ಮನುಷ್ಯ' ತಮ್ಮನ್ನು ಬಗ್ಗಿಸುವುದೆಂದರೆ ಏನರ್ಥ? ಅದನ್ನೆಲ್ಲ ಸಹಿಸಿಕೊಳ್ಳುವುದೆಂದರೇನು? "ಊರ್ ಬಿಡಿಸ್ಬಿಡ್ತೀವಿ ಗೊತ್ತೇನೊ" ಎಂದು ಆರ್ಭಟಿಸಿದರು ಇಬ್ಬರೂ. ಜೋಯಿಸರು, "ಎಂಥ ಕಾಲ ಬಂತಪ್ಪ ಶ್ರೀಹರಿ! ಛೆ! ಛೆ! ಈ ಊರು ಅಂದ್ರೆ ಹ್ಯಾಗಿತ್ತು ಏನ್ಕತೆ! ಇನ್ನೂ ಏನೇನ್ ಕಾಣ್ಬೇಕೊ ಈಜನ್ಮ. ಸದ್ಯ ಸುಮ್ನಿರ್ರಿ; ಯಾಕೆ ಹೀಗಾಡ್ತೀರಿ ಎಲ್ಲರೂ," ಎನ್ನುತ್ತಲೇ, ಹನುಮಯ್ಯ ಅವರಿಬ್ಬರನ್ನು ಬಯ್ಯುವಾಗ ಎಲ್ಲೊ ಒಂದು ಕಡೆ ಎಂಥದೊ ಆನಂದ ಅನುಭವಿಸುತ್ತಿದ್ದರು.

ಈ ಘಟ್ಟದಲ್ಲಿ ಯಾರೊ ಪಟೇಲರ ಪೈಕಿಯೊ ಬಸವಯ್ಯನವರ ಪೈಕಿಯೊ ಗೊತ್ತಿಲ್ಲ— ಹನುಮಯ್ಯನನ್ನು ಹಿಡಿದೆಳೆದರು; ಇದ್ದಕ್ಕಿದ್ದಂತೆ ಗೊಂದಲವಾಯ್ತು. ಗೊಂದಲ ಹೆಚ್ಚಾಗ್ತ ಬಂದಂತೆ, ಸುಮ್ಮನೆ ಇದ್ದವರೂ ಅದರಲ್ಲಿ ಭಾಗವಹಿಸಿದರು. ಹನುಮಯ್ಯನ ಇಷ್ಟೀಟು ಗೆಳೆಯರೂ ಸೇರಿಕೊಂಡರು; ಹನುಮಯ್ಯನ ಪರವಾಗಿ ಕಿರುಚಾಡಿದರು. ಗಲಾಟೆ ಹಬ್ಬಿತು. ಈ ನಡುವೆ ಇಲ್ಲಿಯವರೆಗೆ ಸುಮ್ಮನಿದ್ದ ಪಾಪಣ್ಣ, ತಿಮ್ಮಜ್ಜ ಏನೋ ಮಾತಾಡಹತ್ತಿದ್ದರು. 'ಹಿಂಗೆಲ್ಲ ಆದ್ರೆ ಹೆಂಗೆ? ಒಬ್ರಿಗೊಂದು ಒಬ್ರಿಗಿನ್ನೊಂದು' ಎಂದೇನೊ ಹೇಳುತ್ತಿದ್ದುದು ಗದ್ದಲದಲ್ಲಿ ಸೇರಿ ಹೋಗುತ್ತಿತ್ತು. ಅದಕ್ಕೆಂದೇ ಈಗ ಮಾತನಾಡಿರಲೂ ಬಹುದು. ಅಂತೂ ಈಗ ಯಾವು ಯಾವುದೊ ದನಿಗಳು; ಅಬ್ಬರಗಳು; ಮಾತಿನ ಮಳೆ; ಬಯ್ಗಳ ಹುಚ್ಚು ಹೊಳೆ. ಯಾರು ಯಾರಿಗೆ ಬಯ್ಯುತ್ತಿದ್ದರೆಂಬುದೇ ಗೊತ್ತಾಗದ ಸ್ಥಿತಿ. ಕರ್ಕಶ ಕಂಠಗಳ ಗೊಂದಲಾಸುರರ ಪೌರುಷ ಪ್ರದರ್ಶನ, ಗಂಡಸ್ತನದ ಸವಾಲು ಎಸೆಯುವ, ಬೇಕುಬೇಕಾದ ಪಕ್ಷ ಹಿಡಿಯುವ, ಆದರೆ ಯಾವುದೂ ಸ್ಪಷ್ಟವಾಗದ ಸಿಕ್ಕುಸಿಕ್ಕಾದ ಗುಂಪು, ಅವರದು ಸರಿ, ಇವರದು ಸರಿ ಎಂದು ಚರ್ಚಿಸುತ್ತಲೇ ಕೆಲವರಿಗೆ ಜಗಳ ಹತ್ತಿ ವಾತಾವರಣವೆಲ್ಲ ಅಲ್ಲೋಲ ಕಲ್ಲೋಲ,

ರಾಮು ನೋಡಿದ; ಒಂದು ರೀತಿ ಖುಷಿಯಾಯಿತು. ತನ್ನ ವಿಷಯದಿಂದ ಇವರಿವರೇ ಹೊಡೆದಾಡೊ ಹಾಗೆ ಆಯ್ತಲ್ಲ, ಆಗಲಿ ಎಂದುಕೊಂಡ. ಆ ಶೀಲಾ ಏನೇನೊ ಒದರ್ತಾಳೆ; ಈಗ ನೋಡ್ಬೇಕಾಗಿತ್ತು ಮಜಾನ. ಅದ್ಕೇನ್ ಗೊತ್ತು ಪ್ರಪಂಚ; ವೇದಾಂತ ಹೇಳ್ತಾಳೆ ಸುಮ್ನೆ ಎಂದು ಬಯ್ದುಕೊಂಡ. ಈ ಸಮಯದಲ್ಲಿ ಜೋಯಿಸನೊ ಗೌಡನೊ ಬಸವಯ್ಯನೊ ಗುಂಪಿಗೆ ಬಂದರೆ ತಾನೂ

ನುಗ್ಗಿ ಎರಡು ಬಿಗಿದು ಮಾಯವಾಗಬಹುದು ಎಂದುಕೊಂಡು ನೋಡಿದ; ಆ ಮೂವರೂ ಇದ್ದ ಕಡೆಯೇ ಚಡಪಡಿಸುತ್ತಿದ್ದರು. ಬಸವಯ್ಯ ಗೌಡರು ಸ್ವಲ್ಪ ಮುಂದಾದರೂ ಬಂದು 'ನಿಲ್ಲಿಸಿ' ಅಂತ ಕೂಗಿಯಾರು, ಜೋಯಿಸರು ಮಾತ್ರ ಜಗಲಿ ಇಳಿಯಲಿಲ್ಲ. ರಾಮು ಏನೂ ಪ್ರಯೋಜನ ಇಲ್ಲ ಅದ್ಕೊಂಡ. "ಇವರು ಹೀಗೇ ಕಚ್ಚಾಡ್ತ ಇರ್ಲಿ; ಜಲ್ದಂತೂ ಮುಗ್ಯಲ್ಲ ಇದು, ಸುಮ್ನೆ ಜಾಗ ಬಿಟ್ರಾಯ್ತು" ಎಂದುಕೊಂಡು ಹೊರಟ. ಯಾರೂ ಗಮನಿಸಲಿಲ್ಲ; ಬೆಳದಿಂಗಳು ನೋಡ್ಕಂಡು ಸಿಗರೇಟು ಹಚ್ಕೊಂಡು ಸೇದ್ತಾ ನಡೆದ; ಬೇಜಾರು ಅನ್ನಿಸಿತು; "ಇವರ ಜಗಳ ಇರ್ಲಿ, ಊರಿನ ಎದುರಿಗೆ ನನ್ನನ್ನ ಅಪರಾಧಿ ಸ್ಥಾನದಲ್ಲಿ ಕೂಡಿಸ್ಬಿಟ್ರಲ್ಲ ಇವ್ರೆಲ್ಲ. ಇವ್ರೇನ್ ಸಾಚಾನನ್ ಮಕ್ಕಳ? ನಂಗೊತ್ತಿಲ್ವ ಈ ನನ್ ಮಕ್ಕಳ ಬಂಡವಾಳ? ಯಾವ್ ಬೋಳೀ ನನ್‌ಮಗ ಕಚ್ಚೆ ಕಟ್ಕಂಡವ್ನೆ ಸರ್ಯಾಗಿ. ಈ ದೊಡ್ಡ ಮನುಷ್ಯರಾಗೆ; ಇಂಥೋರೆಲ್ಲ ನಂಗೆ ಅವ್ಮಾನ ಮಾಡ್ದಂಗಾಯ್ತು" ಎಂದು ಒಳಗೇ ಉರೀತಾ, ಸಿಗರೇಟಿನ ಮೇಲೆ ಸಿಗರೇಟು ಉರುಸ್ತಾ ಹಟ್ಟಿಗೆ ಬಂದ. ಭೈರಪ್ಪನ ಮನೆ ಒಳಗಡೆಯಿಂದ ಯಾರೊ ಹೆಂಗಸರು ಬಂದರು; ದೂರದಿಂದಲೇ ನೋಡಿದ; ಬೆಳದಿಂಗಳಲ್ಲಿ ಗೊತ್ತಾಯ್ತು ಅವಳು ಶೀಲಾ ಅಂತ; ಆಕೆ ಕ್ಷಣ ಹೊತ್ತು ನಿಂತಳು; ಊರ ಒಳಗಡೆಯ ಗದ್ದಲ ಅಸ್ಪಷ್ಟವಾಗಿ ಕೇಳುಸ್ತಾ ಇತ್ತು. ಏನೋ ಆಗಿರೊ ಹಾಗೆ ಕಾಣ್ಸುತ್ತೆ ಎಂದುಕೊಂಡು ಗೋಡೆ ಮಗ್ಗುಲಿಗೆ ಹೋಗಿ ವಂದಕ್ಕೆ ಕೂತಳು.

ರಾಮು ನೋಡಿದ; ಅಲ್ಲೇ ನಿಂತುಕೊಂಡ; ಮತ್ತೆ ಮುಂದೆ ಬಂದ; ಶೀಲಾ ವಂದ ಮಾಡಿ ಬಂದಾಗ "ಏನ್ ಶೀಲಾ?" ಎಂದ; ಆಕೆ ಬೆಚ್ಚಿ ನೋಡಿದಳು. ಏನೂ ಹೇಳದೆ ಸುಮ್ಮನೆ ನಿಂತಳು; ಈತನೇ ಕೇಳಿದ. "ಯಾರು ಹಜಾರ್ನಾಗೆ ಅಷ್ಟೊಂದು ಗೊರಕೆ ಹೊಡೀತಿದ್ದಾರಲ್ಲ. ನಿಮ್ಮನೆ ಆಳೊ?" ಆಕೆ "ಹ್ಞೂಂ" ಎಂದು ಹೊರಟಳು.

ವಿಷಯ ಏನಾಯ್ತು, ಏನ್ಕತೆ ! ಎಂದು ಒಂದು ಮಾತೂ ಕೇಳದೆ ಅವಳು ಹೊರಟದ್ದು ರಾಮುವಿಗೆ ಕಹಿಯಾಯ್ತು; ಕೋಪ ಬಂತು. "ಏನ್ ಹಾಗೇ ಹೊರಟ್ಯಲ್ಲ?" ಎಂದ. "ಇನ್ನೇನ್ಮಾಡ್ಲಿ?" ಎಂದಳು. "ನನ್ನ ವಿಷಯ ಕೇಳ್ಲೇ ಇಲ್ಲ?" ಅಂದ. "ಕೇಳೋದೇನು? ಏನೋ ಒಂದು ಆಗುತ್ತೆ ಈ ಊರ್ನಾಗೆ" ಎಂದಳು. "ಹಾಗಲ್ಲ, ಸುಮ್ ಸುಮ್ಕೆ ನನ್ ಮೇಲೆ ಆರೋಪ ಹೊರ್ಸಿದ್ರು ನೋಡು, ಹಿಂಗಾದ್ರು ನನಗೆ ಅವ್ಮಾನ ಮಾಡಿ ಮೂಲೇಗೆ ಕೂರ್ಸೋಣ ಅಂತ. ಇದೆಲ್ಲ ಸುಳ್ಳು ಅಂತ ಮುಂದೆ ಮದ್ವೆಯಾಗೋ ನಿಂಗೆ ಗೊತ್ತಿರ್ಬೇಕಲ್ಲ ಅಂತ ಹೇಳ್ದೆ," ಎನ್ನುತ್ತ ಹತ್ತಿರ ಬಂದ; ಕೈ ಹಿಡ್ಕೊಂಡ. ಶೀಲಾ ಕೊಸರಿಕೊಂಡಳು; "ಸುಮ್ನೆ ಹೋಗು ರಾಮು; ಹೊತ್ತಲ್ಲದೆ ಹೊತ್ತಿಗೆ ಎಂಥ ಆಟನಿಂದು" ಅಂತ ಸಿಟ್ಟಾದಳು. ಹಿಂದಿನದನ್ನು ಜ್ಞಾಪಿಸಿಕೊಂಡ; ಅವತ್ತು ಮನೇಲಿ ಯಾರೂ ಇಲ್ದಾಗ ತಡೀಲಾರದೆ ಕೈ ಹಿಡ್ಕೊಂಡ; ಎಳ್ಕೊಂಡ. "ಯಾವೊತ್ತಿದ್ರೂ ನನ್ನ ಹೆಂಡ್ತಿ ನೀನು; ಯಾಕ್ ಭಯ?" ಅಂದ. ಅವಳು ಒಪ್ಪಲಿಲ್ಲ; ಕೊಸರಿಕೊಂಡಳು. ಕಿರುಚಿಕೊಳ್ಳೋಕೆ ಬಾಯಿ ತೆಗೆದಾಗ ಮುಚ್ಚಿದ. ಭಯದಿಂದ ನಿಂತಳು. "ಬರ್ತೀನಿ, ಯಾಕ್ ಆತುರ ನನಗೆ ತಾನೇ" ಅಂತ ಹೊರ ಬಿದ್ದ...ಈಗ ಅವಳ ಮಾತಿಗೆ ತೀಕ್ಷ್ಣವಾಗಿ ನೋಡಿ ಆ ಮೇಲೆ ನಸುನಗ್ತಾ, "ಹಾಗಾದ್ರೆ ಯಾವ ಹೊತ್ನಾಗ್ ಬರ್ಲಿ" ಅಂದ. ಅವನಿಗೆ ಏನೋ ಉತ್ಸಾಹ ಬಂದಿತ್ತು. ಶೀಲಾಗೆ ಮಾತ್ರ ಭಯವಾಯ್ತು. 'ಅಮ್ಮ, ಅಪ್ಪ ಇಬ್ಬರೂ ಇಲ್ಲ; ಅದು ಇವನಿಗೂ ಗೊತ್ತಿರ್ಬೇಕು. ಏನಾದರೂ ಆದ್ರೆ?' ಸಣ್ಣಗೆ ಕಂಪಿಸಿದಳು; ತಕ್ಷಣ ಹೊರಟಳು; "ಯಾಕ್ ಹಾಗಾಡ್ತೀಯಾ? ನಿಮ್ಮಪ್ಪನೇ ಹೇಳದ್ನೇ ಹೇಗಿದ್ರೂ ಮುಂದೆ ನೀನು ನನ್ನ..." ಎಂದು ಈತ ಹೇಳುತ್ತಿರುವಾಗ ಅವಳು ಹೊಸ್ತಿಲ ಒಳಗೆ ಕಾಲಿಟ್ಟಳು; ಇವನಿಗೆ ಮೈಯೆಲ್ಲ ಉರಿಯಿತು. ನುಂಗುವಂತೆ ನೋಡಿದ; ದೀಪದ ಬೆಳಕಿನಲ್ಲಿ ಅರ್ಧಂಬರ್ಧ ಕಾಣಿಸುತ್ತಿದ್ದ ಅವಳ

ಮುಖದಲ್ಲಿ ತನ್ನ ಮನಸ್ಸು ಮೆಂದಳುಗಳ ವಿರುದ್ಧ ನಿಂತ ಶಕ್ತಿಯನ್ನು ಕಂಡ; ಕೆಂಡ ವಾದ. ಅನೇಕ ದಿನಗಳಿಂದ ಠಾವಿಗೆ ಕೂತಿದ್ದ ಬಯಕೆ-ಬಂಡೆಯಾಗ್ತ, ಬೆಟ್ಟವಾಗ್ತ, ಅದರ ಜೊತೆಗೆ ರೋಚ್ಚಿನ ಮಳೆ ಬೀಳ್ತಾ ಒಳಗೆ ನುಗ್ಗಿದ; ಬಾಗಿಲು ಮುಚ್ಚಿದ;'

ಶೀಲಾಳ ಮುಖದ ಮೇಲೆ ಭಯ ಗಿರಗಿರನೆ ಸುತ್ತಿತು; ಮೈ, ಮನಕ್ಕೆಲ್ಲ ಮುತ್ತಿತು.

*

ಮಧ್ಯ ರಾತ್ರಿ; ಭೈರಪ್ಪ ತನ್ನಾರಕ್ಕೆ ತಾನು ಆರ್ಭಟಿಸುತ್ತಿದ್ದ: "ಯಾವ್ ನನ್ ಸೂಳೇ ಮಗನೋ! ಕಂಡೋರ್ ಹೆಂಡ್ತಿ ಹೇಲ್ ತಿನ್ನಾಕೂ ಹೇಸಾಕಿಲ್ಲ ಇಂಥ ನನ್ಮಕ್ಕಳು..." ಬಯ್ಯುತ್ತಲೇ ಇತ್ತ ನೋಡುತ್ತಿದ್ದ; "ಜ್ಞಾನ ಬಂತಾ ಶೀಲಂಗೆ" ಎಂದು ದೂರದಿಂದಲೇ ಕೇಳ್ತಿದ್ದ. "ಇನ್ನೂ ಇಲ್ಲ ಭೈರಪ್ಪಣ್ಣ" ಎಂಬ ಉತ್ತರ ಬಂದಾಗ "ಏನ್ ಜನರೋ ಸರ್ಯಾಗಿ ಗಾಳಿ ಹಾಕೋಕೂ ಬರಾಕಿಲ್ಲ; ಥತ್ತೇರಿ!" ಅಂತ ಗೋಣಗ್ತಾ ಇದ್ದ. ಇವನ ಈ ಚಡಪಡಿಕೆ, ಅಬ್ಬರ ಉಬ್ಬರಗಳ ಭೋರ್ಗರೆತಕ್ಕೆ ಶೀಲಾಗಿಂತ ಇವನ ವೀಕ್ಷಕರೇ ಹೆಚ್ಚಾಗಿದ್ದರು; ಅಲ್ಲಿದ್ದವರಲ್ಲಿ ಅಷ್ಟು ಎದ್ದು ಕಾಣ್ತಿದ್ದ- 'ನ್ಯಾಯಸ್ಥ ಭೈರಪ್ಪ.'

ಅಲ್ಲಿನ ಗದ್ದಲ ಮುಗಿಸಿಕೊಂಡು ನ್ಯಾಯಸ್ಥನ ಗತ್ತಿನಲ್ಲೇ ಮನೆಗೆ ಬಂದಾಗ ಭೈರಪ್ಪನಿಗೆ ಕಂಡದ್ದು ಒಳಗೆ ಅಂಗಾತ ಮೂರ್ಛೆ ಬಿದ್ದಿದ್ದ ಶೀಲಾ! ನೋಡಿ ದಂಗಾದ; ತೊಡೆಗಳು ತೆರೆದು ಬಿದ್ದಿದ್ದಾಳೆ! ಉಟ್ಟಿದ್ದ ಬಿಳಿ ಸೀರೆಗೆ ಅಲ್ಲಲ್ಲೇ ಸಿಡಿದ ರಕ್ತದ ಕಲೆಗಳು! ಆ ಸ್ಥಿತಿಗೆ ವ್ಯಾಖ್ಯಾನ ಬೇಕಿರಲಿಲ್ಲ; ಶೀಲಾಳ ತಾಯಿ ಪಕ್ಕದಲ್ಲಿ ಕುಸಿದು 'ಶೀಲಾ' ಅಂತ ಅಳತೊಡಗಿದಳು. ಭೈರಪ್ಪನಿಗೆ ಯಾರು ಹೀಗೆ ಮಾಡಿರಬಹುದು ಅಂತ ಸಿಟ್ಟು ಬಂತು; ತನ್ನ ಮನೇಲಿ-ಊರಲ್ಲಿ ಗಣ್ಯನಾದವನ ಮನೇಲಿ ಸ್ವಂತ ಮಗಳಿಗೆ ಹೀಗಾಗೋದು ಅಂದ್ರೆ?

ಹೊರಗೆ ಬಂದು ಹಜಾರದಲ್ಲಿದ್ದ ಆಳಿಗೆ ಒಂದೇಟು ಕೊಟ್ಟು ಎಳಿಸಿದ; ಆರ್ಭಟಿಸಿದ; ಕೂಗುತ್ತ ನಿಂತ; ಬಯ್ದುಕೊಂಡ. ತನ್ನ ಮನೇಲಿ ಹೀಗಾಗೋದು ಅಂದ್ರೇನು ಅಂತ ಇಡೀ ವಾತಾವರಣಾನೇ ಪ್ರಶ್ನಿಸೋ ಥರಾ ಮಾತಾಡಿದ. ಜನ ಸೇರಿದರು. ಒಬ್ಬೊಬ್ಬರೇ ಹೆಚ್ಚಾದರು. ಪಟ್ಟಿಗೆ ಹತ್ತಿರದಲ್ಲಿದ್ದ ಊರ ಮನೆಯವರೂ ಕೆಲ ಜನ ಬಂದರು. ಒಂದಿಬ್ಬರು ಯಾರೋ ಓಡಿಹೋಗಿ ಜೋಯಿಸರು, ಪಟೇಲರು, ಬಸವಯ್ಯನವರಿಗೆ ಸುದ್ದಿ ಮುಟ್ಟಿಸಿದರು ಜೋಯಿಸರು, "ಹರಿ, ಹರಿ, ಊರು ಏನೇನಾಗ್ತ ಇದೆಯಪ. ಮಾಡಬಾರದ್ದು ಮಾಡಿದ್ರೆ ಆಗ ಬಾರದ್ದು ಆಗುತ್ತೆ; ಎಲ್ಲಾ ಹರಿಯ ಇಚ್ಛೆ" ಎಂದರು. ಬಸವಯ್ಯನೋರು "ಶಿವನ ಇಚ್ಛೆ!" ಪಟೇಲರು" ನಮ್ಮ ಹತ್ರ ವಿಷಯ ಬಂದಾಗ ನೋಡೋಣ" ಎಂದರು.

ಇಲ್ಲಿ ಭೈರಪ್ಪನ ಬಾಯಿ ಮಾತ್ರ ನಿಂತಿರಲಿಲ್ಲ; ನೋವೋ, ಪ್ರತಿಷ್ಠೆಯೋ ಸಿಟ್ಟೋ ಅಥವಾ ಎಲ್ಲವೂ ಸೇರಿದೆಯೋ ಅಂತೂ ಬಡಬಡುಸ್ತಾ ಇದ್ದ. ಗಾಳಿಗೆ ಇರಲೆಂದು ಶೀಲಾನ ಹಜಾರಕ್ಕೆ ತಂದಿದ್ದರು.

ಶೀಲಾ ಮೆಲ್ಲಗೆ ಕಣ್ಣು ಬಿಟ್ಟಳು; 'ಅಮ್ಮಾ..." ಅಂತ ನರಳ್ತಾ ನೋಡಿದಳು; ಜನರ ವೃತ್ತ! ಆ ವೃತ್ತದ ನಡುವೆ ತಾನು! ಶೀಲಾ ತಾಯಿಯ ಕೈ ಹಿಡಿದುಕೊಂಡು ಮುಖ ಮುಚ್ಚಿಕೊಂಡಳು; ಹನಿದುಂಬಿದ ಕಣ್ಣುಗಳಿಂದ ಅಮ್ಮನ ಬೆರಳ ಸಂದುಗಳಲ್ಲಿ ನೋಡಿದಳು: ಎಷ್ಟೊಂದು ಜನ! ಇದೇನು ಹೊರಗೆ ತಂದಿದ್ದಾರೆ ತನ್ನ!... ತಕ್ಷಣ ಅಲೆಗಳೆದ್ದು, ಬಿದು , ಹೃದಯ ಹಿಂಡಿತು. ಒಳಗೆ ಹೋದ ಮಾನ ಹೊರಗೆ ಬಯಲಾಗಿದೆ! ಹರಾಜಾಗಿದೆ! ಅರೆ ಬೆಳಕಲ್ಲಿ ಕಾಣುವ ಜನರ ಮುಖ, ಅದರಲ್ಲ ತನ್ನತ್ತಲೇ ನೆಟ್ಟಿರುವ ಕಣ್ಣುಗಳನ್ನು ಕಾಣ್ತಾ ಹೋದಂತೆ ತಾನು ಅವರ ಕಣ್ಣ ಕೊನೆಯ ಕಾಲ ಕಸವಾಗಿ ಬಿದ್ದಿದ್ದೇನೇ ಅನ್ನಿಸುತ್ತೆ. ಅಪ್ಪ ಮಾತ್ರ ಆರ್ಭಟಿಸುತ್ತಿದ್ದಾನೆ; "ಯಾವ ಲಫಂಗನನ್ ಮಗನಿಗೆ ಬಂದಿದ್ದಾತು ಇಷ್ಟೊಂದು ಧೈರ್ಯ? ನನ್ನ ಏನೋ ಅಂದ್ಕಂಡಿರ್ಬೇಕು ಕಳ್‌ನನ್ ಮಗ,

ನಾನೇನ್ ಸುಮ್ಕೆ ಬಿಡ್ತೀನಾ? ನಮ್ಮೋರೆ ಎಷ್ಟೊಂದ್ ಜನ ಐದಾರೆ ದೊಡ್ಡ ದೊಡ್ಡ ಜಾಗ್ದಾಗೆ! ಅವ್ರಿಗೆಲ್ಲ ಹೇಳಿ ಕಂಬಿ ಎಣಸಂಗ್ ಮಾಡ್ತೀನೆ ಕಳ್‌ನನ್ ಮಗ ಸಿಕ್ಕಿದ್ರೆ, ಏನೋ ತಿಳ್ಕಂಡಿರ್ಬೇಕು ಭೈರಪ್ಪ ಅಂದ್ರೆ, ನಡ್... ನಡ್...ನಡು ಬೀದ್ಯಾಗೆ ಹರಾಜ್ ಹಾಕ್ಬಿಡ್ತೀನಿ..."

ಈ ಆರ್ಭಟದ ನಡುವೆ ಯಾರೋ ಒಬ್ಬರು "ಹರೇದ್ ಹುಡುಗಿ ಪಾಪ! ಹಂಗಾಗೋಯ್ತು, ಛೇ! ಛೇ! ಹಿಂಗಾಗ್ಬಾರ್ದಿತ್ತು, ಇನ್ ವ್ಯಾಕ ಹೆಂಗ್ ಜೀವನ ತಳ್ತದೋ ಪಾಪ!" ಹೀಗೆ ಅವರಿವರು ಹೇಳ್ತಿರೋ ಮಾತು ಶೀಲಾ ಕಿವಿಗೆ ಅಪ್ಪಳಿಸುತ್ತವೆ. ಕರುಳು ಕಿತ್ತು ಬಂದಂಗಾಗುತ್ತೆ. ಯಾರಿಗೆ ಬೇಕು ಇಂಥ ಸಹಾನುಭೂತಿ? ಉಪ್ಪು, ಹುಳಿಗೆ ಬಾರದ ಬರಡು ಮಾತು ಯಾರಿಗೆ ಬೇಕು? ತಣ್ಣನೆಯ ಶಬ್ದಗಳಲ್ಲಿ ಜೀವ ತಣ್ಣಗೆ ಮಾಡೋ ಈ ಮೆತ್ತನೆಯ ಮಾತು ಯಾಕೆ ಬೇಕು? ತನ್ನ ಹಿಂದೆ ರಕ್ಷೆಯಾಗೋ ಗಟ್ಟಿತನ ಇರದ ಅನುಕಂಪ ಯಾತಕ್ಕೆ? ಯಾವ ಲೆಕ್ಕಕ್ಕೆ?...ಒಂದೇ ಸಮ ಇರಿಯುವ ಮನಸ್ಸು; ಕೊರೆಯುವ ಜೀವ, ನರಳಿದಳು: 'ಅಮ್ಮಾ...ಅಪ್ಪಾ...'

ಅಪ್ಪ ಮಾತಾಡಿದ: "ಚಿಂತೆ ಮಾಡಬ್ಯಾಡ ಮರೀ. ನಾನಿದ್ದಂಗೆ ನಿಂಗ್ ಯಾಕೆ ಭಯ, ಸುಮ್ಕಿರು; ಅದು ಯಾವ ನನ್ ಮಗ್ನೀಗೆ ಧೈರ್ಯ ಐತೆ ತಪ್ಪಿಸ್ಕಳ್ಳಾಕೆ...?" ಮತ್ತದೇ ಮಾತುಗಳು.

ಅವಳಿಗೆ ಮುಂದೆ ಕೇಳಿಸಿಕೊಳ್ಳೋ ಮನಸ್ಸಿರಲಿಲ್ಲ...ಸುತ್ತಮುತ್ತ ಇರೋ ಜನರು ಅನುಕಂಪ ಹಡೀತಾರೆ. ಅಪ್ಪ ಆರ್ಭಟದ ಬಾವುಟ ಹಾರುಸ್ತಿದಾನೆ; ಇದರಲ್ಲಿ ಯಾರು ನಿಜ? ಯಾರಿಗೆ ನೋವು ಅನುಭವಕ್ಕೆ ಬಂದಿದೆ? ಯಾರಿಗೆ ಅರ್ಥವಾಗಿದೆ? ಇಲ್ಲಿ ಯಾರು ನನ್ನ ಆಳದ ಒಳದನಿಗೆ ನಿಜವಾಗಿ ಮಿಡಿದಿದ್ದಾರೆ? ಯಾರು ಅದರ ಜೊತೆ ನುಡಿದಿದ್ದಾರೆ?...

ಅಲ್ಲಿದ್ದವರೆಲ್ಲ— ಅಪ್ಪನನ್ನೂ ಸೇರಿಸಿ— ಕಪ್ಪು ದೆವ್ವಗಳಂತೆ ಕಾಣುಸ್ತಾರೆ; ಕಾಡುಸ್ತಾರೆ. ಅಂಗಾತ ಬಿದ್ದ ಜಿರಲೆ ಮನಸ್ಸು ಅರಚಿಕೊಳ್ಳತ್ತೆ: 'ಇವ್ರೆಲ್ಲ ಹೀಗೇ ಹೂತು ಹೋಗಬಾರದೆ?' ಗಟ್ಟಿಯಾಗಿ ಕೂಗಿ ಬಿಡಲೆ? ಎಲ್ಲ ಹೊರಟು ಹೋಗಿ ಬಿಡಿ ಅಂತ ಕಿರಚಿ ಬಿಡಲೆ? ಅಪ್ಪಾ, ಬಾಯಿ ಮುಚ್ಚಿ ಇರಬಾರದೆ? ಇರೋದಿಕ್ಕೆ ನಿನಗೆ ಬರದೆ? ಅಂತೆಲ್ಲ ಜಗ್ಗಿಸಿ ಬಿಡಲೆ?

ಒಳ ವ್ಯಥೆಯು ಎಳೆತ ಹೆಚ್ಚಾಗಿ ಎಲ್ಲ ಅಲ್ಲೇ ಹೊರಳಾಡ್ತ, ಹೊರಗೆ ದನಿ ಹೊರಡದಾದಾಗ ಆದದ್ದು– ಮುಚ್ಚಿದ ಕಣ್ಣಿಂದ ಹನಿಗಳ ಅಭಿವ್ಯಕ್ತಿ.

*

ಬೆಳಗ್ಗೆ ರೂಮಿನಲ್ಲಿ ಮೇಲೆ ನೋಡ್ತಾ ಮಲಗಿದ್ದಳು ಶೀಲಾ, ರಾಮು ಹೀಗೆ ಮಾಡಿದ್ದು ಅವಳಿಗೆ ಆಘಾತವಾಗಿತ್ತು ಅಂತ ಬೇರೆ ಹೇಳಬೇಕಾಗಿಲ್ಲ. ಮೆದುಳು, ಮನಸ್ಸು ದೂರ ದೂರ ಇದ್ದವನನ್ನು ಮದುವೆಯಾಗೊ ಆಸೆ ಇರ್ಲೇ ಇಲ್ಲ ಇವ್ಳಿಗೆ. ಅದು ಬದುಕಿನಲ್ಲಿ ಬೇಡದ ರಾಜಿ ಆಗ್ತಾ ಇತ್ತು; ಸದಾ ಒಳಗೇ ಕೊರೆಯೊ ಘಟನೆ ಆಗ್ತಾ ಇತ್ತು ಅಂತ ಅವಳಿಗೆ ಗೊತ್ತು. ಈಗಂತೂ ಅವಳಿಗೆ ಶೂನ್ಯ ಮನಸ್ಸು; ಯಾಕೊ ಎಲ್ಲ ಬರಿದಾದಂತೆ.

ಪಡಸಾಲೇಲೆ ಭೈರಪ್ಪ ತಲೆ ಮೇಲೆ ಕೈ ಹೊತ್ತು ಕೂತಿದ್ದ, ಶೀಲಾ ಚೇತರಿಸಿಕೊಂಡ ಮೇಲೆ ಹೇಳಿದ ವಿಷಯ ದಂಗು ಬಡಿಸಿತ್ತು. ಏನು ಮಾಡೋದು ಈಗ ಅಂತಲೇ ಗೊತ್ತಾಗದ ಸ್ಥಿತಿ. ರಾತ್ರಿಯೇನೊ ಆರ್ಭಟಿಸಿದ್ದ, ಈಗ ಅನ್ನಿಸ್ತಾ ಇತ್ತು– ಯಾಕೆ ಆರ್ಭಟಿಸಿದೆ ನಾನು? ವಿಷಯವೆಲ್ಲ ಕೂಲಂಕಷ ತಿಳೀದೆ ಯಾಕೆ ಹಾಗೆಲ್ಲ ಆಡ್ದೆ? ಈಗ ಏನ್ ಮಾಡೋದು? ಈಗ ಊರಲ್ಲಿ ತಾನೂ ಒಬ್ಬ ನ್ಯಾಯಸ್ಥ; ಇತರೆ ನ್ಯಾಯಸ್ಥರನ್ನು ಕೇಳೋದು; ಏನಾದ್ರೂ ಒಂದು ತೀರ್ಮಾನಕ್ಕೆ ಬರೋದು...

ಉಂಬೊ ಹೊತ್ತಿಗೆ ಎದ್ದು ಹೊರಟ; ಪಟೇಲರಿಗೆ ತಿಳಿಸಿದ; ಅವರಿಂದ ಬಸವಯ್ಯ, ಜೋಯಿಸರಿಗೆ ಕರೆ ಹೋಯ್ತು; ಅವರೂ ಬಂದರು. ಕೃಷ್ಣಪ್ಪನಿಗೂ ಹೇಳಿ ಕಳಿಸಿದರು.

ಎಲ್ಲರೂ ಕೂತರು; ಈಗ ಏನ್ ಮಾಡೋದು? ಇದು ಅವರ ಮುಂದಿದ್ದ ಪ್ರಶ್ನೆ. ಕೃಷ್ಣಪ್ಪನಂತೂ "ಸುಮ್ಕೆ ಬಿಡ್ಬಾರ್ದು ಈ ಬಡ್ಡೀ ಮಗನ್ನ" ಎಂದ. ಭೈರಪ್ಪ "ಊರ ಹಿರಿಯರು ಹೆಂಗ್ ಮಾಡ್ತೀರ ನೋಡ್ರಿ," ಎಂದ. ಏನೂ ಮಾತಾಡದ ಮನಸ್ಸಾಗಿತ್ತು ಅವನಿಗೆ.

ಪಟೇಲರು, "ಆ ರಾಮು ಎಲ್ಲಿದ್ರೂ ಹುಡ್ಕಿ ಕರ್ಕಂಡ್ ಬಾರೊ" ಅಂತ ಒಬ್ಬ ಆಳಿಗೆ ಹೇಳಿದಾಗ ಆತ ಹುಡಿಕ್ಕೊಂಡು ಹೊರಟ. ಹನುಮಂತರಾಯನ ಗುಡಿಯ ಹಳೇ ಮಂಟಪ; ಅದರಲ್ಲಿ ಹನುಮಯ್ಯ, ರಾಮು, ಇನ್ನೂ ಅನೇಕರು ಕೂತ್ಕೊಂಡು ಬೀಡಿ ಸಿಗರೇಟ್ ಸೇದ್ಕೊಂಡು ಇಸ್ಪೀಟ್ ಆಡ್ತಾ ಇದ್ದರು. ರಾಮು ಊರಲ್ಲಿದಾನೊ ಇಲ್ಲವೊ ಅಂತ ಪಟೇಲರಿಗೆ ಅನ್ಮಾನ ಇತ್ತು. ಆದರೆ ರಾಮು ಎಲ್ಲೂ ಹೋಗಿರ್ಲಿಲ್ಲ. ರಾತ್ರಿ ಭೈರಪ್ಪನ ಆರ್ಭಟ ಕೇಳಿದಾಗ ಸ್ವಲ್ಪ ಆತಂಕ ಆಯ್ತಾದ್ರೂ ಏನಾಗುತ್ತೆ ನೋಡೋಣ ಅಂತ ನಿಶ್ಚಯಿಸಿಬಿಟ್ಟಿದ್ದ. ಜೊತೆಗೆ ಈಗ ನನಗಲ್ಲದೆ ಯಾರಿಗೆ ಕೊಡ್ತಾರೆ. ಶೀಲಾನ ಅನ್ನೊ ವಿಶ್ವಾಸ ಮೂಡ್ತಾ ಇತ್ತು—ಎಷ್ಟಾದ್ರೂ ತಾನು ಮುಟ್ಟಿದೋಳು ತಾನೆ ಅಂತ.

ಪಟೇಲರ ಆಳು ಬಂದು ಕರೆದಾಗ, "ನಿಂತ್ಕಳಯ್ಯ ಅಲ್ಲಿ ಬರ್ತೀನಿ. ಏನ್ ಈ ಊರ್ ದೊಡ್ಡೋರ್ಗೆ ಬೇರೆ ಕೆಲ್ಸ ಇಲ್ಲ. ಏನೇ ನಡುದ್ರೂ ನಾನೇ ಅವ್ರ ಕಣ್ಣಿನಾಗ್ ಬೀಳಾದು. ಕೇಳಾಕಿಲ್ಲ ಇವ್ರ ನ್ಯಾಯಾನ." ಎಂದ; ಆಳು ತೆಪ್ಪಗೆ ನಿಂತ. ಆದರೆ ಹನುಮಯ್ಯ "ಹೆಂಗಾರ ಆಗಲಿ ಹೋಗ್ ಬಾ ರಾಮು. ಅದೇನಾಗ್ತೈತೊ ನಾವೂ ನೋಡ್ಕಂಬ್ತೀವಿ. ಯಾವಾಗ್ಲೂ ಇವ್ರದೇ ನಡೀಬೇಕೇನೋ; ಈ ಸರ್ತಿ ಏನಾರ ತೀರ್ಮಾನ ಆಗ್ಬೇಕು. ನಮ್ಮ ತಂಟೆಗೆ ಬರ್ಬಾರ್ದು ಇನ್ ಮ್ಯಾಲೆ. ನೀನ್ ನಡಿ ಮೊದ್ಲು. ಹಿಂದಿಸಿಂದ ನಾವ್ ಬರ್ತೀನಿ. ಅದೇನ್ ಮಾಡ್ತಾರೆ ನೋಡಾನ," ಎಂದ. ರಾಮು ಸರಿ ಅಂತ ಹೊರಟ.

...ಹನುಮಯ್ಯನ ಕುಮ್ಮಕ್ಕು ಬೆಳಿಗ್ಗೆಯಿಂದ ನಡೆದ ಚಟುವಟಿಕೆಗಳ ಫಲ. ರಾಮೂನೆ ಹೀಗೆ ಮಾಡಿದ್ದು ಅಂತ ಬೆಳಿಗ್ಗೆಯೇ ಸುದ್ದಿ ಹಬ್ಬಿದಾಗ ಹನುಮಯ್ಯ ಲೆಕ್ಕ ಹಾಕಿದ. ರಾಮೂನ ತನ್ನ ಕಡೆ ಸೇರಿಸ್ಕೊಬೇಕು; ಪಾಪಣ್ಣಂಗೂ ಹೇಳಬೇಕು. ಕುರುಬರ ಹುಡುಗರು ಯಾರಾದ್ರೂ ಒಪ್ಪಿದರೆ ಅವ್ರನ್ನೂ ಎಳ್ಕೊಬೇಕು; ಹೆಂಗಿದ್ರೂ ರಾಮು ಬಗ್ಗೆ ನ್ಯಾಯ ಮಾಡ್ತೀವಿ ಅಂತ ಕಲೀತಾರೆ. ಈ ಹಳೇ ತಲೆಗಳನ್ನು ಚೆನ್ನಾಗಿ ಬೋಳಿಸ್ಬೇಕು. ಆಟ ನಡೀದಂಗೆ ಮಾಡ್ಬೇಕು; ಇನ್ನೇನ್ ಆಗದೆ ಇದ್ರೂ ಚನ್ನಾಗಿ ರಘಾಡಿಸಿ ಅವ್ಮಾನ ಮಾಡಿದ್ರೂ ಸಾಕು ಅಂತ ಲೆಕ್ಕಹಾಕಿದ; ತನ್ನ ಗೆಳೆಯರ ಜೊತೆ ಮಾತಾಡಿ ಓಡಾಡಿದ; ಪಾಪಣ್ಣ ಯೋಚನೆ ಮಾಡಿ– ತನಗೆ ಒಂದು ಜಾಗ ಕೊಟ್ಟಿಲ್ಲ ಅವ್ರು, ನೋಡೇಬಿಡಾನ— ಅಂತ ತೀರ್ಮಾನಿಸಿ ರಾಮೂಗೆ ಹೇಳಿದ: "ಏನೂ ಹೆದ್ರಬ್ಯಾಡ. ನಾವಿದ್ದೀವಿ" ಕುರುಬರ ತಿಮ್ಮಜ್ಜ ಹಳೇ ಕಾಲದವನು; ಆತನಂತೂ ತಿರುಗಿ ಬೀಳಲ್ಲ, ಆದ್ರೆ ಬೇರೆ ಯುವಕರು ಇದ್ದರು. "ಈ ದೊಡ್ಡ ತಲೆಗಳ ಮುತ್ತು ಇಳುಸ್ಬೇಕು" ಅಂದರು; "ಹಿಂದಿರ್ತೀವೆ; ಅದೇನ್ ಬೇಕೋ ಮಾಡ್ರಪ್ಪ" ಕುಮ್ಮಕ್ಕು ಕೊಟ್ಟರು. ಹೀಗೆಲ್ಲ ಆಗಿ ಊರಲ್ಲಿ ಹಳೇ ತಲೆಗಳ ವಿರುದ್ಧ ತಮ್ಮದೇ ವೈಯಕ್ತಿಕ ನೆಲೆಗಳ ಮೇಲೆ ಗುಂಪು ಕಟ್ಟಿದರು; ಒಳಗೇ ಯಾವುದಾವುದೋ ಕಾರಣಕ್ಕಿದ್ದ ಅಸಹನೆಗೆ ಒಂದು ವೇದಿಕೆ ಸಿಕ್ಕದಂತಾಗಿದೆ ಅಂದರೂ ಸರಿ...

ರಾಮು ಬಂದ; ನಿಂತ; ಎಲ್ಲರೂ— ಪಟೇಲರು, ಜೋಯಿಸರು. ಬಸವಯ್ಯ ಕೃಷ್ಣಪ್ಪ– ದಿಟ್ಟಿಸಿದರು. ಭೈರಪ್ಪ ಆ ಕಡೆ ಮುಖ ಮಾಡಿ ಕೂತ; ಕೂತ ಕಡೆಯೇ ಸಿಡಿಮಿಡಿ ಗುಟ್ಟಿದ. ಹೃದಯ ಹಿಂಡಿಕೊಂಡ' ರಾಮು ಬಂದ ನಿಂತ ರೀತಿಗೆ ಪಟೇಲರ ಮನಸ್ಸು ಕಿಡಿಯಾಯ್ತು. "ಏನಯ್ಯ ನಮ್ಮೂರು ಅಂದ್ರೆ ಏನಂದ್ಕಂಡೆ? ದಿನಕ್ಕೊಂದು ಪುಕಾರು ನಿಂದು,"– ಎಂದು ಕೇಳಿದಾಗ ರಾಮು "ಏನ್ ಪಟೇಲರೆ? ಯಾರ್ಯಾರೊ ಆಗ್ದೋರು ಆರೋಪ ಹೊರ್ಸಿದ್ರೆ

ನೀವು ಅದನ್ನೇ ನಂಬ್ತೀರಲ್ಲ?" ಎಂದ. ಆ ವೇಳೆಗೆ ಇಬ್ಬರು ಮೂವರು ಹೀಗೆ ಬೇರೆ ಬೇರೆಯಾಗಿ ಹನುಮಯ್ಯ ಸಂಘಟಿಸಿದ ಜನ ಬಂದರು; ಅಲ್ಲಲ್ಲೆ ನಿಂತರು. ರಾಮು ಇವರನ್ನೆಲ್ಲ ನೋಡಿ ಹುಮ್ಮಸ್ಸು ಪಡೆದ. "ಅದೇನ್ ಮಾಡ್ತಿರೋ ನಾನೂ ನೋಡ್ತೀನಿ; ಏನ್ ಊರ್ನಲ್ಲಿ ಯಾರೂ ಕೇಳೋರಿಲ್ವೇನು? ನಾನೇ ಮದ್ವೆ ಆಗ್ಬೇಕಾದ ಹುಡ್ಗೀನ ಕೆಡ್ಸೋಕೆ ನಂಗೇನ್ ತಲೆ ಕೆಟ್ಟಿಲ್ಲ," ಎಂದು ಗಟ್ಟಿಯಾಗಿ ಹೇಳಿದ. ಹನುಮಯ್ಯ ಮುಂದೆ ಬಂದ; ಹೇಳಿದ: "ನಿಮಗೆ ಬೇಕ ಬೇಕಾದರ್ನೆಲ್ಲ ಸೇರಿಸ್ಕಂಡು ಬ್ಯಾಡ್‌ವಾದೋರ್ನೆಲ್ಲ ಮಟ್ಟ ಹಾಕಾಕ್ ನೋಡ್ತೀರಲ್ಲ, ಇದೆಂಥ ನ್ಯಾಯ? ಭೈರಪ್ಪನಿಗೆ ರಾಮು ಎದುರಾಗ್ಬಿಟ್ರೆ ಹಟ್ಟಿಯಾಗೆ ಕಷ್ಟ ಅಂದ್ಕಂಡು, ಭೈರಪ್ಪನೇ ಮಗಳಿಗೆ ರಾಮನ 'ವ್ಯಾಲೆ ಹೇಳ್ಬೇಡು' ಅಂತ ಯಾಕೆ ಕಿವಿ ಊದಿರ್ಬಾರ್ದು ಅಂತೀನಿ. ಏನ್ ನ್ಯಾಯ ಅಂದ್ರೆ ನಿಮ್ಮ ಸೊತ್ತೇನಾ ಎಲ್ಲಾ?"

ಆತನ ಗುಂಪಿನವರೂ ಒಬೊಬರು ಒಂದೊಂದು ಮಾತಾಡಿದರು. ಪಾಪಣ್ಣನೂ ಧೈರ್ಯ ಮಾಡಿ, "ಇದೆಲ್ಲ ನಂಗ್ಯಾಕೆ ಸರಿ ಬರಲ್ಲ. ಒಂದು ಕಣ್ಣಿಗೆ ಬೆಣ್ಣೆ ಒಂದು ಕಣ್ಣಿಗೆ ಸುಣ್ಣ" ಅಂದಾಗ ಭೈರಪ್ಪ ಕೆಕ್ಕರಿಸಿ ನೋಡಿದ.

ಪರಿಸ್ಥಿತಿ ನಿನ್ನೆಗಿಂತ ಜಟಿಲ ಅಂತ ಪಟೇಲರಾದಿಯಾಗಿ ಗೊತ್ತಾಯಿತು; ರಾಮುವಂತೂ ತನಗೆ ಸಿಕ್ಕಿದ ಕುಮ್ಮಕ್ಕಿಗೆ ಹಿಗ್ಗಿ ಏನು ಬಂದರೆ ಹಾಗೆ ಮಾತಾಡಿದ. "ಊರಲ್ಲಿ ಅದು ಹೆಂಗ್ ಮಾಡ್ತೀರಿ ಇನ್ಮೇಲೆ ನೋಡ್ತೀನಿ ನ್ಯಾಯಾನ. ಎಲ್ಲಾ ಮನಾಪಲಿ ಮಾಡ್ಕಂಡಿದ್ದೀರಲ್ಲ, ನಾನೇನ್ ಯಾರ್ಗೂ ಹೆದ್ರಲ್ಲ," ಎಂದು ಸಿಗರೇಟು ಹಚ್ಚಿದ. ತಾನೆಂದೂ ಇಷ್ಟು ಧೈರ್ಯ ಮಾಡದಿದ್ದಾಗ ರಾಮು ಇವರೆದುರು ಸೇದೋಕೆ ಶುರು ಮಾಡಿದನಲ್ಲ ಅಂತ ಹನುಮಯ್ಯನಿಗೆ ಕಸಿವಿಸಿಯಾಯಿತು; ತಾನೂ ಒಂದು ಕೇಳಿ ಬಿಡಬೇಕು ಎಂದುಕೊಳ್ಳುವಾಗ ರಾಮುವೇ, "ಹನುಮಯ್ಯ, ತಗೋ ಒಂದು ಧಂ ಎಳೀ; ಯಾರ್ದೇನ್ ಭಯ ನಮಗೆ" ಎಂದ. ಹನುಮಯ್ಯನೂ ಹಚ್ಚಿದ; ಸೇದ್ತಾ ನಿಂತ. ಎತ್ತರದಲ್ಲಿ ಕೂತ ವ್ಯಕ್ತಿಗಳಿಗೆ ತಮ್ಮ ವಿರುದ್ಧ ಎಂಥ ಶಕ್ತಿ ಇದೆ ಅಂತ ಗೊತ್ತಾಯಿತು; ಇವರೆಲ್ಲ ಯಾವ ಲೆಕ್ಕ ಅಂತ ಸುಮ್ಮನಿರಲಾಗದೆಂದು ಈಗ ಪಟೇಲರಿಗೆ ಅರಿವಾಗಿತ್ತು, ಅವಮಾನವೂ ಆಗಿತ್ತು. ಜೋಯಿಸರು ಎದುರಿದ್ದ ಜನರನ್ನು ಸಮಾಧಾನಿಸಲು ಊರಿನ ಇತಿಹಾಸ ಹೇಳತೊಡಗಿದರು; ಹೇಗಿದ್ದ ಊರು ಹೇಗಾಗ್ತ ಇದೆ; ಹೀಗಾಗಬಾರದು ಇತ್ಯಾದಿ ಹೇಳಿದಾಗ ಬಸವಯ್ಯನವರೂ ಬೆಂಬಲಿಸಿ ಈ ಊರಿನ ಪರಂಪರೆ ಅಂದರೆ ಎಂಥದು ಅಂತ ವಿವರಿಸಿದರು; ಜೋಯಿಸರು ಉತ್ಸಾಹಿತರಾಗಿ ತಮ್ಮ ಮನೆತನದಿಂದ ಹಿಡಿದು ಊರಿನ ಕಂತೆ ಪುರಾಣ ಬಿಚಿದರು.

ತನಗೆ ಸಿಕ್ಕಿದ ಬೆಂಬಲದಿಂದ ರಾಮು ಮನಸ್ಸು ರಂಗೇರಿತ್ತು. "ನಿಮ್ಮ ಕಂತೆ ಪುರಾಣ ಬೇಕಾಗಿಲ್ಲ. ಈಗ ನಿಂತ ನಿಲುವಿಗೇ ತೀರ್ಮಾನವಾಗೇಕು. ನೆನ್ನೆ ನೋಡಿದ್ರೆ ಒಂದು ಆರೋಪ; ಇವತ್ತು ನೋಡಿದ್ರೆ ಇನ್ನೊಂದು. ಹಿಂಗಾದ್ರೆ ನಾವೆಲ್ಲ ಸುಮ್ನಿರೊಲ್ಲ" ಎಂದು ಗುಟುರು ಹಾಕಿದ. ತನಗಿಂತ ರಾಮುವೇ ಹೆಚ್ಚು ಮಾತಾಡೋದು ಹನುಮಯ್ಯನಿಗೆ ಹಿಡಿಸಲಿಲ್ಲವಾದರೂ ತಡೆಯೋ ಹಾಗಿರಲಿಲ್ಲ. ಆದ್ದರಿಂದ ತಾನೂ ಮಾತಾಡಿದ. ಊರ್ನಲ್ಲಿ ಅನ್ಯಾಯ ಜಾಸ್ತಿ ಆಯ್ತು ಅಂತ ಆರೋಪಿಸಿದ.

ಪಟೇಲರಿಗೆ ಒಬ್ಬೊಬ್ಬರನ್ನು ಒದೆಸ್ಬೇಕು ಅನ್ನೋ ಸಿಟ್ಟು ಬಂತಾದರೂ ನೆನ್ನೆಯ ಅನುಭವ ಪಾಠ ಕಲಿಸಿತ್ತು. ಎಲ್ಲರನ್ನೂ ಕುರಿತು ಹೇಳಿದರು: "ಒಂದೈದು ನಿಮಿಷ ಸುಮ್ಕಿರಿ ನಮಗೆ ಊರು ಉಳ್ಸೋದ್ ಮುಖ್ಯ, ಶಾಂತಿ ಮುಖ್ಯ, ಈಗ ಬರ್ತೀವಿ ಚರ್ಚೆ ಮಾಡ್ಕೊಂಡು." ಎಂದು ಎದ್ದರು. "ಹಿತ್ತಲಿಗೆ ಬನ್ನಿ" ಎಂದರು ನ್ಯಾಯಸ್ಥರಿಗೆ. ಎದುರು ಗುಂಪಿನಿಂದ ಯಾರೋ ಒಬ್ಬ "ಅದೇನಂಥ ಗುಟ್ಟು? ಇಲ್ಲೇ ಮಾತಾಡ್ರಿ" ಎಂದರೂ ಗಮನಿಸಿದವರಂತೆ ಹೋದರು; ಈ ಸಾರಿ ಪಟೇಲರು ಜೋಯಿಸರನ್ನು ಪ್ರತ್ಯೇಕವಾಗಿ ಆಹ್ವಾನಿಸಿದರು. ಇಲ್ಲಿದ್ದವರು ಅದು ಇದೂ

ಮಾತಾಡ್ತ, ಬೀಡಿ ಸಿಗರೇಟು ಸೇದ್ತಾ, ಕೂತಿದ್ದರು.

*

ಮತ್ತೆ ಚಾವಡಿಗೆ ಬಂಗು ಪಟೇಲರು ಪ್ರಕಟಿಸಿದರು: ನಾವೆಲ್ಲ ಚರ್ಚೆ ಮಾಡಿದ್ದೀವಿ. ಈಗ ಊರು ಮುಖ್ಯ ನಮಗೆ. ನಿಮ್ಮನ್ನ್ಯಾರೂ ಕೀಳು ಅಂತ ನಾವು ಭಾವಿಸಿಲ್ರಪ್ಪ. ಯಾಕ್ ನೀವ್ ನೀವೆ ಹಂಗಂಡ್ಕಂಬ್ತೀರೋ ಕಾಣೆ. ಅದಿರ್ಲಿ; ನೋಡ್ರಿ ನಮ್ಮ ತೀರ್ಮಾನ ಇಷ್ಟ! ರಾಮು ಮೇಲೆ ಏನೂ ಪಂಚಾಯ್ತಿ ಇಲ್ಲ. ಭೈರಪ್ಪನ ಮಗಳನ್ನ ಅವ್ನ ಬೇಕೂಂದ್ರೆ ಮದುವೆ ಮಾಡ್ಕಾಸ್ ಸಿದ್ಧ; ಆಮ್ಯಾಲೆ ಮುಂದಿನ ಎಲೆಕ್ಷನ್ನಿಗೆ ಗ್ರಾಮಪಂಚಾಯ್ತಿ ಮೆಂಬರು ಮಾಡ್ತೀವಿ. ಇನ್ನು ಪಸುಮಯ್ಯ, ಕೃಷ್ಣಪ್ಪ ಇಲ್ಲಿದ್ದಾಗ ನ್ಯಾಯಸ್ಥನಾಗಬಹುದು; ಯಾವ್ದಾದ್ರೂ ದೊಡ್ಡ ಕೇಸಿದ್ರೆ ಪಾಪಣ್ಣ, ತಿಮ್ಮಜ್ಜ ಇಬ್ಬರೂ ನ್ಯಾಯಸ್ಥರಾಗಬಹುದು. ಇನ್ನೇನ್ರಪ್ಪ?"

ಯಾರೇನೂ ಮಾತಾಡಲಿಲ್ಲ. ಮಾತಾಡದಂತೆ ಮಾಡಲೆಂದೇ ಇಂಥ ತೀರ್ಮಾನ ತೆಗೆದುಕೊಳ್ಳಲಾಗಿತ್ತು; ಎಲ್ಲರ ಮುಖದ ಮೇಲೆ ಏನೋ ಸಮಾಧಾನದ ಛಾಯೆ ಮೂಡ್ತಾ ಇದ್ದಾಗ ರಾಮು ಬಾಯ್ಬಿಟ್ಟ, "ಅದ್ಸರಿ ಸ್ವಾಮಿ, ಆದ್ರೆ ಶೀಲಾ ಒಪ್ಪಬೇಕಲ್ಲ ನನ್ನ ಮದ್ವೆಯಾಗಾಕೆ? ಮೊದ್ಲಿಂದ ಅವಳಗೆ ಅಷ್ಟಕಷ್ಟೆ. ನನ್ನ ಕಂಡ್ರೆ."

ಪಟೇಲರು "ಭೈರಪ್ಪನಿಗೆ ಹೇಳಿದ್ದೀವಿ ನಾವೆಲ್ಲ" ಎಂದರು.

ಜೋಯಿಸರು "ಪುರಾತನ ಕಾಲ್ದಿಂದ ಹೆಸರು ಉಳಿಸ್ಕೊಂಡಿರೊ ಊರ್ನಲ್ಲಿ ಶಾಂತಿ ಕಾಪಾಡೋಕೆ ಏನಾದ್ರೂ ಮಾಡ್ಬೇಕು ತಾನೆ? ಭೈರಪ್ಪ ಊರಿನ ಸಲುವಾಗಿ ಒಪ್ಪಿಸ್ಬೇಕು ತನ್ನ ಮಗಳನ್ನ, ಇಷ್ಟಕ್ಕೂ ಅಪ್ಪನ ಮಾತು ಮಗಳು ಮೀರೋದು ಅಂದ್ರೇನು? ಒಪ್ಪಬೇಕು; ಒಪ್ಪಿಸ್ಬೇಕು ಅನ್ನೋದು ನಮ್ಮ ಅಭಿಪ್ರಾಯ; ಏನಂತೀರಿ ಬಸವಯ್ನೋರೆ?" ಎಂದಾಗ ಬಸವಯ್ಯನವರು "ಅದ್ಸರಿ ಬಿಡಿ. ಇಷ್ಟಕ್ಕೂ ಭೈರಪ್ಪನಿಗೂ ಅದೇ ಆಸೆ ಇತ್ತಲ್ಲ?" ಒಂದು ವೇಳೆ ಆತನ ಮಗಳು ಒಪ್ಪೊಲ್ಲ ಅಂದ್ರೆ ನಾವಿದ್ದೀವಯ್ಯ ರಾಮು, ನಾವಿದ್ದೀವಿ; ಹೆದ್ರಬೇಡ. ಊರಿಗಾಗಿ ಒಪ್ಪಿಸೋಣ," ಎಂದು ಸಮರ್ಥಿಸಿದರು. ಪಟೇಲರು "ಇನ್ಮೇಲೆ ಇಂಥ ಗಲಾಟೆ ಗದ್ದಲ ಮಾಡಾರದು. ನಾವು ನಮ್ಮ ಕೈಲಾದ ಸಹಾಯ ಮಾಡಿದ್ದೀವಿ" ಎಂದರು ಗತ್ತಿನ ಕಂಠದಿಂದ ರಾಮು ಉಬ್ಬಿಹೋದ.

*

ಭೈರಪ್ಪ ಬಂದು ಹೇಳಿದಾಗ ಶೀಲಾ ಪ್ರತಿಭಟಿಸಿದಳು; ಇದಕ್ಕಿಂತ ಗುಂಡು ಕಟ್ಟಿ ಭಾವಿಗೆ ಎಸೀರಿ ಎಂದಳು. ಈ ಹಾಳು ಊರು ಸುಟ್ಟು ಹೊಸ ಊರು ಕಟಬೇಕು ಎಂದು ಸಿಟ್ಟು ಕಿಡಿಸಿದಳು; ಹಿಂಗ್ ಮಾಡ್ಬೇಡ ಅಪ್ಪ, ಎಂದಳು. ನಂಗೆ ಮನಸ್ಸಿಲ್ಲ; ಮನಸ್ಸಿಲ್ಲದು ಮಾಡ್ಲಾರೆ ಅಂತ ಕೇಳಿಕೊಂಡಳು; ಭೈರಪ್ಪ ಏನೇನೊ ಸಮಾಧಾನಿಸಿ ಮತ್ತದೇ ಹೇಳ್ತಾ ಬಂದಾಗ ಮಾತಾಡಿ ಪ್ರಯೋಜನವಿಲ್ಲ ಅಂದ್ಕೊಂಡಳು. ಭೈರಪ್ಪ, ಪಟೇಲರು, ಜೋಯಿಸರು ಮತ್ತು ಬಸವಯ್ಯನವರಿಗೆ ವರದಿ ಒಪ್ಪಿಸಿದ. "ಒಂದ್ ಮೂರ್ನಾಲ್ಕು ದಿನ ಸುಮ್ನಿರು; ಎಲ್ಲಾ ಸರಿಹೋಗುತ್ತೆ," ಎಂದರು. ಸುಮ್ಮನಾದ.

ಶೀಲಾಗೆ ಅದೇ ಯೋಚನೆ. ಆತನನ್ನು ಮದುವೆಯಾಗೋದಾಗಿದ್ರೆ ಅವತ್ತು ಯಾಕೆ ಬಲಾತ್ಕಾರಕ್ಕೆ ಬಲಿಯಾಗಬೇಕಿತ್ತು? ಮತ್ತೆ ಈಗ ಜೀವನ ಪರ್ಯಂತ ರಾಜಿ ಆಗೋದೇ ಶರಣಾಗೋದೇ...ಇಲ್ಲ...ಆಗೋಲ್ಲ; ಖಂಡಿತ ಆಗೋಲ್ಲ. ಇದೂ ಒಂದು ರೀತಿ ಆತ್ಮಹತ್ಯೆ... ಯೋಚಿಸಿದಳು; ಮತೆ ಮತ್ತೆ ಅವತ್ತಿನ ದೃಶ್ಯ ಸುಳಿಯುತೆ. "ಬೇಡ ರಾಮು" ಅಂತ ಬೇಡ್ತಿರೊ ತಾನು; ಬಿಡದೆ ಹಿಡಿದು ಹಿಂಡಿ ಕೆಡವಿ...ಕಣ್ಣು ಮುಚ್ಕೊತಾಳೆ; ಜ್ಞಾಪಿಸಿಕೊಳ್ಳಲಾರೆ ಅಂದ್ಕೊಳ್ತಾಳೆ.

*

ಎರಡು ದಿನಗಳಲ್ಲೆ ಶೀಲಾಳ ಚರ್ಯೆ ಬದಲಾಯ್ತು; ಸುಮ್ಮನೆ ಕೂತುಕೊಳ್ತಾಳೆ, ಇಲ್ಲ


ಸೌಂದರ್ಯ
ಸದಾ ಉಳಿಯಲು
ತ್ವಚೆ ನಿರ್ಮಲವಾಗಿರಬೇಕು

ನಿಂತ್ಕೊಳ್ತಾಳೆ. ಮಾತಿಲ್ಲ ಕತೆಯಿಲ್ಲ. ಮಾತಾಡಿದರೂ ಅಂ ಊಂ ಇಷ್ಟೇ. ಶೀಲಾಳ ತಾಯಿಗಂತೂ ಆತಂಕ. ಸದ್ಯ ಈ ಮದ್ವೇನೇ ಬೇಡ ಅಂದರೂ ಭೈರಪ್ಪ "ಸ್ವಲ್ಪ ತಾಳು" ಅಂತಾನೆ. ಶೀಲಾ ಹತ್ರ ಬಂದು "ನಾನು ದೊಡ್ಡೋರ್ಮುಂದೆ ಒಪ್ಕೊಂಡಿದೀನಿ. ಮಾನ ಮರ್ಯಾದೆ ಪ್ರಶ್ನೆ ಕಣಮ್ಮ" ಎಂದೆಲ್ಲ ಹೇಳ್ತಾನೆ; ಆಕೆ ಶುಷ್ಕವಾಗಿ ನಕ್ಕಂತೆ ಮಾಡಿದಳು; ಕಡೆಗೆ "ನಿನ್ನಿಷ್ಟ. ಏನಾದೂ, ಮಾಡ್ಕೊ, ನೀನುಂಟು ಊರುಂಟು, ಊರಿನ ಪುಣ್ಯ ಉಳೀಬೇಕಲ್ಲ" ಅಂತ ಶೀಲಾ ಬಾಯಿಬಿಟ್ಟಾಗ ಸ್ವಲ್ಪ ಸಮಾಧಾನವಾಯ್ತು.

ಭೈರಪ್ಪನಿಂದ ವಿಷಯ ತಿಳಿದು ಮಾರನೇ ದಿನ ರಾಮು ಬಂದ; ರೂಮಿನಲ್ಲಿ ಕೂತಿದ್ದ ಶೀಲಾಳ ಹತ್ತರ ಬಂದ. "ಶೀಲಾ" ಎಂದ. ಕಣ್ಣೆತ್ತಿದಳು. ಶೂನ್ಯ ಭಾವದಿಂದ ನೋಡಿದ ಅವಳ ಕಣ್ಣಿಗೆ ಬರಬರ್ತಾ ಕೋಪ ಬಂದು ಕೆಂಡವಾಯ್ತು, ಮೂರು ದಿನಗಳ ಮೌನ ಮಾತಾಗಿ ಒಡೆಯಿತು: "ಹೋಗು; ಹೊರಟು ಹೋಗು. ಬರ್ಬೇಡ ನೀನು," ಆತ ಹೋಗೆಲಿಲ್ಲ. "ರೇಗ್ಬೇಡ; ಸಮಾಧಾನವಾಗಿರು ಶೀಲಾ, ಆಗಿದ್ದಕ್ಕೆ ಯಾಕೆ ಯೋಚನೆ? ಇನ್ಮೇಲೆ ಚನ್ನಾಗಿರೋಣ," ಅಂತ ಹತ್ತಿರ ಬಂದ. ಆಕೆ ಎದ್ದಳು. "ದಯವಿಟ್ಟು ಹೋಗು ರಾಮು. ನನ್ನಾರಕ್ಕ ನನ್ನ ಬಿಡು" ಅಂದಳು. ಆದರೂ ಹೋಗಲಿಲ್ಲ. ಇನ್ನೂ ಹತ್ತಿರ ಬಂದ. ಕೈ ಹಿಡಿದು; 'ಶೀಲಾ' ಎಂದ. ಮತ್ತೆ ಒತ್ತಿ ಹಿಡಿದ. "ಅವತ್ತು ಆಗಿದ್ದು ಮರೆ; ಭಿನ್ನಾಭಿಪ್ರಾಯ ಇದ್ರೇನಂತೆ ಇನ್ಮೇಲೆ ಚನ್ನಾಗ್ ಬಾಳೋಣ. ನಿನ್ನ ಕಂಡ್ರೆ ನಂಗೆ ತುಂಬ ಇಷ್ಟ," ಎಂದ.

ಶೀಲಾ ಥಟ್ಟನೆ ಕೈ ಕೊಡವಿದಳು. ಮತ್ತೆ ಹಿಡ್ಕೊಂಡ; ಭದ್ರವಾಗಿ ಹಿಡ್ಕೊಂಡ. ಆಕೆ ಮತ್ತೆ ಶಕ್ತಿ ಒಗ್ಗೂಡಿಸಿ ಕೊಡವಿದಳು; ಕೆನ್ನೆಗೆ ಛಟಾರನೆ ಕೊಟ್ಟಳು; ಫಕ್ಕನೆ ನಕ್ಕಳು;

ನಕ್ಕಳು...ನಗುತ್ತಲೇ ಇದ್ದಳು.

ಈ ಪುರಾತನ ಊರಿಗೆ ಇದಕ್ಕಿಂತ ವ್ಯಾಖ್ಯಾನ ಬೇಕೆ? ✡



ಇಂದು ಅವನು ಎಂದಿನಂತಿಲ್ಲ. ಇದೇ ಅವನಲ್ಲಿ ಕಾಣಬರುತ್ತಿರುವ ಸುಧಾರಣೆ.
—ಕರ್ನಲ್ ಸ್ಟೂಪ್‌ನ್ಯಾಂಗಲ್

ಸೂರ್ಯೋದಯವಾಗುವಾಗ ಸುಂದರಿಯಾದ ಉಷೆಯು ತಂದ್ರಿಲರಾದ ಪ್ರೇಕ್ಷಕರ ಮುಂದೆ ನರ್ತಿಸುತ್ತಿದ್ದಳು.
—ಜಿ. ಈ. ಹೋವರ್ಡ್

ನಾನು ಆತ್ಮಚರಿತ್ರೆಯನ್ನು ಬರೆಯುವುದಿಲ್ಲ ನನ್ನ ಆತ್ಮ ಹಾಗೂ ಘಟನೆಗಳು ಮಾರಾಟಕ್ಕಿಲ್ಲ.
—ಎಡ್ಡಿ ಸಿಯಾನೊ

This magazine owned by the Karnataka Patrika Private Ltd. is printed & published by Bhomeshwar Das Kohli at the Samyukta Karnatak Press Koppikar Road, Hubli. Representatives: Bombay: V. S. Mani, Phone: 472794, Calcutta: H. Muzamdar: Phone: 46-4238; Madras: P. N. Srinivasan, Phone: 83748; New Delhi: P. R. Chopra, Phone: 224130.

*Registered with the Registrar of Newspapers for India under No. 3635*